# ಕುಣಕ್ಯಾ

ಅಥವಾ

## ಕೊಂಕಣದ ಪೋರ.



ಅನುವಾದಕರು:

**ಭಿ. ಪ. ಕಾಳೆ.**

ಪ್ರಥಮ ಮುದ್ರಣ

೧೯೪೪

# ಮುನ್ನುಡಿ



ಮರಾಠೀ ಸಾಹಿತ್ಯ ಸಮ್ರಾಟರಾದ ಶ್ರೀಮಾನ್ ನರಸಿಂಹ ಚಿಂತಾಮಣಿ ಕೇಳಕರರು ಬರೆದ ಐತಿಹಾಸಿಕ ಕತೆಯಿದು. ಇದನ್ನು ಅವರ ಅನುಮತಿಯಿಂದಲೇ ಕನ್ನಡಕ್ಕೆ ಪರಿವರ್ತಿಸಿರುವೆನು.

ಮಹಾರಾಷ್ಟ್ರ ಕಾಲೀನ ನೌಕಾದಳದ ಜೀವನವನ್ನು ಚಿತ್ರಿಸುವ ಕತೆಯಿದು. ಆಗ ಕೊಂಕಣದ ಕರಾವಳಿಯಲ್ಲಿಯ ಮರಾಟರ ನೌಕೆಗಳ ಶಕ್ತಿಯೆಷ್ಟಿತ್ತೆಂಬದೂ ತತ್ಕಾಲೀನ ಪಿರಂಗಿಗಳ ನೌಕಾಶಕ್ತಿ ಎಷ್ಟಿತ್ತೆಂಬದೂ ಈ ಸಣ್ಣ ಕತೆಯಿಂದ ಚೆನ್ನಾಗಿ ತಿಳಿಯುವಂತಿದೆ.

ಮುಖ್ಯವಾಗಿ ಆಗಿನ ನಾವಿಕ ಜೀವನವು ಹೇಗಿತ್ತು, ಸಮುದ್ರ ಕರಾವಳಿಯಲ್ಲಿ ಕರಾವಳಿಯ ರಕ್ಷಣೆಗಾಗಿ ಯಾವ ಯಾವ ವ್ಯವಸ್ಥೆಯಿರುತ್ತಿತ್ತು, ಭೂಯುದ್ಧದಂತೆ ಜಲಯುದ್ಧದ ಕಡೆಗೂ ಮರಾಟಿಗರು ಹೇಗೆ ಲಕ್ಷ್ಯಗೊಡುತ್ತಿದ್ದರು ಮೊದಲಾದ ಸಂಗತಿಗಳು ಈ ಕತೆಯಿಂದ ಗೊತ್ತಾಗುವಂತಿವೆ.

ಈ ಕತೆಯನ್ನು ಕನ್ನಡದಲ್ಲಿ ಬರೆಯಲು ಒಪ್ಪಿಗೆ ಇತ್ತ ಶ್ರೀಮಾನ್ ಕೇಳಕರ ಅವರಿಗೆ ಅತ್ಯಂತ ಕೃತಜ್ಞನಾಗಿರುವೆನು.

೧೮—೧—೧೯೪೪
ಮದಿಹಾಳ—ಧಾರವಾಡ

ಕನ್ನಡಿಗರ ವಿಧೇಯ,
**ಭಿ. ಪ. ಕಾಳೆ.**

## —ಪರಿವಿಡಿ—

# ಕುಣಿ ಕಾವ್ಯ

ಅಥವಾ

## ಕೊಂಕಣದ ಪೋರ!

### ಬೈರಾಗಿ ಹೇಳಿದ ಸಂಗತಿ.

ನಾನು ಹುಟ್ಟಿದ್ದೆಲ್ಲಿ? ಅಥವಾ ನನ್ನ ತಾಯಿ-ತಂದೆಗಳಾರು? ಇವುಗಳ ನೆನವು ನನಗಿಲ್ಲ; ಆದ್ದರಿಂದ ನನ್ನನ್ನು ದೇವಪ್ರಸಾದ ಪೋರ ಎಂದೆನ್ನಲು ಅಡ್ಡಿಯಿಲ್ಲ. ನನಗೆ ತಿಳಿಯಹತ್ತಿದ ಬಳಿಕ ಹಾಗು ನನ್ನ ಜೊತೆಗಾರ ಹುಡುಗರಿಗೆ ತಾಯಿ-ತಂದೆಗಳಿರುತ್ತಾರೆಂಬದನ್ನು ನಾನು ನೋಡಿದಾಗಿನಿಂದ ಅವರು ನನಗೂ ಇರಲೇಬೇಕೆಂದು ನನಗನಿಸಿತು. ತಂದೆಯಂತೆ ನನ್ನನ್ನು ಪ್ರೀತಿಸಿ, ಪಾಲಿಸಿ ಪೋಷಿಸುತ್ತಿರುವ ಗಂಡಸೊಬ್ಬನು ನನ್ನನ್ನು 'ಚೇಲಾ' ಎಂದು ಕರೆಯುತ್ತಿದ್ದನು. ಆ ಗಂಡಸನ್ನು ಜನರು 'ಬೈರಾಗಿ' ಎಂದೆನ್ನುತ್ತಿದ್ದದರಿಂದ ನಾನೂ ಅವನನ್ನು ಹಾಗೆಯೇ ಸಂಬೋಧಿಸುತ್ತಿದ್ದೆನು. ಬೈರಾಗಿಗಳಿಗೆ ಮನೆ-ಮಾರುಗ-ರುತ್ತಿರುವುದಿಲ್ಲ; ಮತ್ತು ಯಾವ ಬೈರಾಗಿ ಬೇರೆಯುವನನ್ನು ಚೇಲಾ ಎಂದು ಕರೆಯುತ್ತಿರುವನೋ, ಆ ಬೈರಾಗಿಯೇ ಆ ಬೇರೆಯುವನ ಗುರುವಾಗಿರುತ್ತಿರುತ್ತಾನೆ ಈ ಸಂಬಂಧವು ಮುಂದೆ ನನಗೆ ತೀವ್ರವೇ ತಿಳಿಯು ಬಂತು. ತಂದೆಯು ಪ್ರೇಮವು ನನಗೆ ಗೊತ್ತಿರದಿದ್ದರೂ ನನ್ನ ಗುರುವು ನನ್ನನ್ನು ಯಾವ ಬಗೆಯಿಂದ ಪ್ರೀತಿಸುತ್ತಿದ್ದನೋ, ಅದಕ್ಕಿಂತಲೂ ಯಾವ ಹುಡುಗನ ತಂದೆಯೂ ತನ್ನ ಮಗನನ್ನು ಹೆಚ್ಚು ಪ್ರೀತಿಸುವದಿಲ್ಲೆಂದು ನನ್ನ ಖಾತ್ರಿಯಾಗಿತ್ತು. ನನಗೆ ತಾಯಿಯೆಂಬುವವಳು ಯಾರೊಬ್ಬಳು ಇರಬೇಕು; ಹಾಗು ಅವಳ ಪ್ರೇಮದ ಅನುಭವವು ಬೇರೆ ಹುಡುಗರಂತೆ ನನಗೂ ದೊರಕಬೇಕು, ಎಂದು ನನ್ನ ಮನಸ್ಸು ಒಮ್ಮೊಮ್ಮೆ ಬಯಸುತ್ತಿತ್ತು; ಆದರೆ ನನ್ನ ತಾಯಿಯೆಂದಿದ್ದ ಮಹನೀಯಳು ನನಗೆ ಭೆಟ್ಟಿಯಾಗುವ ಸಂಭವವೆಲ್ಲಿ? ನನಗೆ ಮಾತೃಸುಖ ದೊರೆಯಬೇಕೆಂದು ನನ್ನ ಗುರುವು ಬ್ರಹ್ಮಚರ್ಯವ್ರತವನ್ನು ಬಿಡಬಲ್ಲನೆ? ಒಂದು ವೇಳೆ ಅವನು ನನಗೋಸುಗ ಲಗ್ನವಾಗಲು ಸಿದ್ಧನಾದರೂ ನನ್ನ ಆ ಹೊಸ ತಾಯಿಯು ಹೇಳಿ-ಕೇಳಿ ಕಡ ತಂದಾಕೆ! ಮಲತಾಯಿ ಕೂಡ ಅಲ್ಲ! ಆದರೆ ನನಗೆ ತಾಯಿ ದೊರೆಯಬೇಕೆಂದು ನನ್ನ ಗುರುವು ಲಗ್ನವಾಗಬೇಕೆಂಬ ವಿಚಾರವು ನನ್ನ ಮನಸ್ಸಿನಲ್ಲಿ ನಿಜವಾಗಿಯೂ ಅದೆಂದೂ ಬರಲಿಲ್ಲ. ಆ ನನ್ನ ಗುರುವಿನ ತಪಸ್ಸನ್ನು ನೋಡಿ, ನಾನು ಚಿಕ್ಕವನಿದ್ದರೂ ನನ್ನ ಮನಸ್ಸಿನ ಮೇಲೆ ಬ್ರಹ್ಮಚರ್ಯಪಾಲನದ ಸುಪರಿಣಾಮವಾಗದಿರಲಿಲ್ಲ.

ನಾನು ದೊಡ್ಡವನಾದ ಬಳಿಕ ಬಯಸಿದ್ದರೆ ನನ್ನ ಗುರುವು ನನ್ನ ಲಗ್ನ ಮಾಡಿ ಗೃಹಸ್ಥಾಶ್ರಮವನ್ನು ಸ್ವೀಕರಿಸಲಿಕ್ಕೆ ನನಗೆ ಸಂತೋಷದಿಂದ ಅಪ್ಪಣೆ ಕೊಡುತ್ತಿದ್ದನು; ಆದರೆ ಗುರುವಿನ ಉದಾಹರಣೆ ನೋಡಿ ನಾನೂ ನನ್ನ ಚೇಲೇತನವನ್ನು ಕಾಯ್ದುಕೊಳ್ಳಬೇಕು; ಅಂದರೆ ಬ್ರಹ್ಮಚರ್ಯ ವ್ರತದ ಪರಂಪರೆಯನ್ನು ನಾಗಿಸಬೇಕು; ಮತ್ತು ಗುರುವಿನಂತೆಯೇ ನಾನು ಸ್ವಂತವೂ ಲೋಕಕಲ್ಯಾಣಕ್ಕೆಂದು ಪುಣ್ಯಸಂಚಯಿಸಬೇಕೆಂದು ಸಂಕಲ್ಪಿಸಿದೆನು. ನನ್ನ ವಯಸ್ಸಿನ ೩೨ ವರ್ಷಗಳವರೆಗೂ ನಾನು ನನ್ನ ಗುರುವಿನೊಡನೆ ಭರತಖಂಡದೊಳಗಿನ ಬಹುತರ ಎಲ್ಲ ಯಾತ್ರೆಗಳನ್ನೂ ಒಂದೆರಡು ಸಾರೆ ಮಾಡಿದೆನು. ನನಗೆ ಮೂವತ್ತೆರಡು ವರ್ಷ ಮುಗಿದ ದಿನವೇ ನನ್ನ ಗುರುವು ಸಮಾಧಿಸ್ತನಾಗಿ ಪರಲೋಕಕ್ಕೆ ಪ್ರಯಾಣಮಾಡಿದನು.

ನನ್ನ ಗುರುವು ಪರಲೋಕವನ್ನೈದಿದ್ದರಿಂದ ಅವರ ಸ್ಥಾನ ನನಗೆ ಪ್ರಾಪ್ತವಾಯಿತು, ಆದರೆ ಆದರಿಂದ ಅವರ ಚೇಲಾನ ಸ್ಥಳವು ಮಾತ್ರ ಬರಿದಾಯಿತು! ನಾನೂ ನನ್ನ ಗುರುವೂ ಇಬ್ಬರೂ ಬ್ರಹ್ಮಚಾರಿಗಳೇ. ನನ್ನಲ್ಲಿಯ ಗುರುಭಕ್ತಿ ಮತ್ತು ಗುರುವಿನಲ್ಲಿಯ ಶಿಷ್ಯವಾತ್ಸಲ್ಯ ಇವು ಬಹು ಗಹನವಾಗಿದ್ದುದರಿಂದ, ಇಡಿ ಜಗತ್ತು ಮತ್ತು ಜಗತ್ತಿನೊಳಗಿನ ಎಲ್ಲ ಪ್ರೇಮ ನಮ್ಮಿಬ್ಬರಲ್ಲೇ ಸಂಚಯಿಸಲ್ಪಟ್ಟಿರುತ್ತದೆಂದು ನನಗನಿಸುತ್ತಿತ್ತು. ನನ್ನ ಗುರುಗಳು ಗತಿಸಿದಾಗ ನಾನು ಸಂಪೂರ್ಣ ಮೂವತ್ತೆರಡು ವರ್ಷದವನಿದ್ದರೂ ನಾನು ಅನಾಥನಾದಂತೆ ನನಗನಿಸಹತ್ತಿತು. ನನ್ನೀ ದುಃಖಿತ ಭಾವನೆಯು ಇಲ್ಲದಂತಾಗಲಿಕ್ಕೆ ಅನುಕೂಲವಾದಂತಹವೊಂದೇ ಮಾರ್ಗವಿದ್ದಿತು. ಅದಾವುದೆಂದರೆ, ನಾನು ಸ್ವಂತ 'ಗುರು'ವಾಗಬೇಕು, ಮತ್ತು ನನ್ನೀ ಸ್ಥಳದಲ್ಲಿ ಯಾವನೊಬ್ಬ 'ಚೇಲಾ'ನನ್ನು ನಿಯಮಿಸಬೇಕು! ಆದರೆ ಆ ಚೇಲಾ ನಿರ್ಮಾಣವಾಗುವದೆಂತು? ನನ್ನನ್ನು ಗುರುವಾಗಿ ಮಾಡಿಕೊಳ್ಳುವ ಅದಾವನೂ ಇದುವರೆಗೆ ಗಂಟುಬಿದ್ದಿರಲಿಲ್ಲ. ಅದಿರಲಿ. ಲೋಕಸಮಾಜದ ಕಡೆಗೆ ನೋಡಿದರೆ, ತುಂಬಿದ ಸಂಸಾರದೊಳಗಿನ ಅದಾವ ತಾಯಿ-ತಂದೆಗಳು ತಮ್ಮ ಮಗನನ್ನು ನನಗೆ ಚೇಲಾ ಎಂದು ಅರ್ಪಿಸುವರು? ಹಾಗಾದರೆ ಚೇಲಾ ದೊರೆಕಿಸುವ ನನ್ನ ಆಶೆಯ ತೃಪ್ತಿಗಾಗಿ ನಾನು ಯಾರೊಬ್ಬರ ಮಗನನ್ನು ಕದಿಯಲೇನು? ಆಗದು. ಆ ಸಂಗತಿಯು ನನ್ನಿಂದೆಂದೂ ಘಟಿಸುವಂತಿರಲಿಲ್ಲ.

ಆದರೆ ದೇವರಿಗೆ ನನ್ನ ವಿಷಯದ ಚಿಂತೆಯುಂಟಾಯಿತೋ ಏನೋ ಎಂಬಂತೆ ಅವನು ಮುಂದೆ ಅಲ್ಪಾವಧಿಯಲ್ಲೇ ಒಬ್ಬ ಚಿಕ್ಕ ಬಾಲಕನನ್ನು ಯಾರ ಅಡ್ಡಿ-ಆತಂಕಗಳು ಉಂಟಾಗದಂತೆ ನನ್ನ ಸ್ವಾಧೀನ ಪಡಿಸಿದ್ದರಿಂದ, ನಾನು ನನಗೆ ಚೇಲಾ ಮಾಡಿಕೊಳ್ಳಲಿಕ್ಕಲ್ಲದಿದ್ದರೂ ಆ ಬಾಲಕನ ಪಾಲನ-ಪೋಷಣ ಮಾಡುವದು ಆಗ ನನ್ನ

ಕರ್ತವ್ಯವೇ ಆಗಿತ್ತು; ಮತ್ತು ದೇವರ ಇಚ್ಛೆಯಂತೆ ನಾನು ಆ ನನ್ನ ಕರ್ತವ್ಯವನ್ನು ನಿಃಸ್ವಾರ್ಥದಿಂದ ಪಾಲಿಸಲು, ಅದರಿಂದಲೇ ನನಗೆ ಬೇಕಾಗಿದ್ದ ಚೇಲಾ ದೊರಕುವ ಸ್ವಾರ್ಥವು ಸಹಜವಾಗಿಯೇ ಸಾಧಿಸಿತು. ಆ ಸಂಗತಿಯು ಹೀಗಿದೆ:—

( ೨ )

ನನ್ನ ಗುರುಗಳು ಗತಿಸಿದ ಬಳಿಕ ಮೂರು ತಿಂಗಳ ಅಮಾಸಿಗೆ 'ಅರ್ಧೋದಯ' ಮಹಾಪರ್ವವು ಬಂತು. ಆ ಸಂಧಿ ಸಾಧಿಸಿ ನಾನು ಕೊಂಕಣದ ಸಮುದ್ರ ತೀರದಲ್ಲಿಯ ದೇವಗಡದ ಬಳಿಯ ಕುಣಕೇಶ್ವರನ ಯಾತ್ರೆಗೆ ಹೋದೆನು. ಆ ದೇವಸ್ಥಾನದ ಇತಿಹಾಸವು ಅದ್ಭುತವಾಗಿದೆಯೆಂದು ನಾನು ಕೇಳಿದ್ದೆನು ಎಷ್ಟೋ ವರ್ಷಗಳ ಮುಂಚೆ ಯಾವನೊಬ್ಬ ಸಿರಿವಂತ ಮುಸಲ್ಮಾನ ವ್ಯಾಪಾರಿಯು ತನ್ನ ಹಡಗಿನಲ್ಲಿ ಸಮುದ್ರ ಸಂಚರಿಸುತ್ತಿರಲು, ಸದ್ಯದಲ್ಲಿ ಕುಣಕೇಶ್ವರನು ಯಾವ ಗುಡ್ಡದ ಮೇಲಿರುವನೋ, ಆ ಗುಡ್ಡದೆದುರಿಗೆ ಆ ಹಡಗು ಆಕಸ್ಮಿಕವಾಗಿ ಬಿರುಗಾಳಿಗೆ ಸಿಕ್ಕು ಒಡೆಯುವ ಹಾಗು ಸಮುದ್ರದಲ್ಲಿ ಮುಣುಗುವ ಸಂಧಕ್ಕೆ ಪತ್ತಿತ್ತು ಮಾನವನು ಸಂಕಟಕ್ಕೆ ಸಿಲುಕಿದನೆಂದರೆ ಆತನು ಮನಸ್ಸಿನಿಂದ ದುರ್ಬಲನಾಗುತ್ತಾನೆ, ಮತ್ತು ಯಾವ ಉಪಾಯಗಳ ನಿಂದೆಯನ್ನು ಆತನು ಬೇರೆ ಪ್ರಸಂಗಗಳಲ್ಲಿ ಎದೆ ಸೆಟೆ ಸೆಟೆಸಿಯೂ ತುಚ್ಛಬುದ್ಧಿಯಿಂದಲೂ ಮಾಡುತ್ತಿರುವನೋ, ಅದೇ ಉಪಾಯವನ್ನು ಅವನು ತನ್ನ ಉಳಿವಿಗಾಗಿ ಆಗ ಮಾಡಲುದ್ಯುಕ್ತನಾಗುತ್ತಾನೆ. ಆ ಮುಸಲ್ಮಾನ ವ್ಯಾಪಾರಿಯು ಮಕ್ಕಾ-ಮದಿನಾ ಮೊದಲಾದ ಯಾತ್ರೆಗಳನ್ನು ಮಾಡಿದ್ದರಿಂದ, ಅವನಿಗೆ 'ಹಾಜೀ' ಎಂಬ ಬಿರುದು ಲಭಿಸಿದ್ದಿತು. ಆದರೂ ಕೂಡ ಆ ಸಂಕಟ ಸಮಯದಲ್ಲಿ ಅವನು ಆ ಹಿಂದೂ ದೇವರಿಗೇ ಪ್ರಾರ್ಥಿಸಬೇಕಾಯಿತು.

ಹಡಗಿನ ಮೇಲೆ ಭಯಂಕರ ತೆರೆಗಳು ಅಪ್ಪಳಿಸಹತ್ತಿವೆ; ಬಿರುಗಾಳಿಯು ವೇಗದಿಂದ ಬೀಸಹತ್ತಿದೆ; ಎದುರಿಗೆ ನಿಡಿದಾದ ಕಲ್ಲುಬಂಡೆಯು ಕಾಣಿಸಹತ್ತಿದೆ. ಇಂತಹ ಆಪತ್ತಿನ ಪ್ರಸಂಗದಲ್ಲಿ ಆ ವ್ಯಾಪಾರಿಗೆ ಒಬ್ಬ ಹಿಂದೂ ಜಾತಿಯ ಅಂಬಿಗನು ಸಹಜವಾಗಿಯೇ ಸೂಚಿಸಿದನೇನಂದರೆ:—"ಎದುರಿಗೆ ಕಾಣುವ ಕುಣಕೇಶ್ವರನ ಗುಡ್ಡದ ಮೇಲೆ ನಮ್ಮ ಹಿಂದುಗಳದೊಂದು ಅತ್ಯಂತ ಜಾಗ್ರತ ದೇವಸ್ಥಾನವಿದೆ. ಅದಕ್ಕೊಂದು ಹರಕೆಯನ್ನಾದರೂ ಕಟ್ಟಿರಿ" ಎಂದು. ಕೂಡಲೆ ಆ ವ್ಯಾಪಾರಿಯು:— "ನಾನು ಈ ವಿಪತ್ತಿನಿಂದ ಸುಖರೂಪವಾಗಿ ಪಾರಾದರೆ, ಎಲೈ ಹಿಂದುಗಳ ದೇವಾ! ನಾನು ನಿನಗೆ ಈ ಗುಡ್ಡದ ಮೇಲೆ ದೇವಮಂದಿರವನ್ನು, ಅಂದರೆ ಕಾಯಮವಾದ ನಿವಾಸಸ್ಥಳವನ್ನು ಕಟ್ಟಿಸುವೆನು" ಎಂದು ಹರಕೆ ಕಟ್ಟಿದನು; ಹಾಗು ಸಮೀಪದಲ್ಲೇ ಇದ್ದ ತನ್ನ ಒಳಗೂ ಹೊರಗೂ ಕೂಡಿಯೇ ಕಲಾಯಿ ಮಾಡಿದ್ದ ಸೊಂಡೆಯ ಪಾತ್ರ

ಯೊಳಗಿನ ನೀರನ್ನು ತನ್ನ ಬಲಗೈ ಮೇಲೆ ಬಿಟ್ಟನು. ಕೂಡಲೆ ದೇವರ ಲೀಲೆಯಿಂದಲೋ, ಯೋಗಾಯೋಗ ಇಲ್ಲವೆ ಕಾಗೆ ಕೂಡ್ರಲಿಕ್ಕೂ ಟೊಂಗೆ ಮುರಿಯಲಿಕ್ಕೂ ಗಂಟುಬೀಳುವಂತೆಯೋ ಹೇಗೇ ಆಗಲಿ, ಆತನು ಹಾಗೆ ಹರಕೆ ತೊಟ್ಟ ಅಲ್ಪಾವಧಿಯಲ್ಲೇ ಆ ಬಿರುಗಾಳಿಯ ವೇಗದಿಂದಲೇ ಆ ಹಡಗು ಬಂಡೆಗಲ್ಲ ಕಡೆಗೆ ಹೋಗದೆ ಆ ಗುಡ್ಡದ ಒಡಲಲ್ಲಿ ಹೋಗಿದ್ದ ಒಂದು ಉಸುಗಿನ ಒತ್ತಿನ ಕಡೆಗೆ ಹೋಯಿತು. ಒತ್ತಟ್ಟಿಗಿನ ಮೂಲೆ ಮತ್ತು ಮೆತ್ತನ್ನ ಉಸುಗಿನ ಆಧಾರ ಹೀಗೆ ಇಬ್ಬಗೆಯ ಸಹಾಯ ದೊರೆತ ಕೂಡಲೆ ಆ ಹಡಗು ಆ ಉಸುಕಿನಲ್ಲಿ ಸಿಕ್ಕು ಸ್ಥಿರವಾಗಿ ನಿಂತುಕೊಂಡಿತು.

ಆದರೆ ಅಷ್ಟರಲ್ಲಿ ಬಿರುಗಾಳಿ ನಿಂತಿತು. ಸಮುದ್ರದೊಳಗಿನ ತುಫಾನೂ ನಿಂತಿತು. ಕೂಡಲೆ ಉಸುಕಿನಲ್ಲಿ ಸಿಕ್ಕು ನಿಂತಿದ್ದ ಆ ಹಡಗಿನೊಳಗಿಂದ ಆ ವ್ಯಾಪಾರಿಯು ಕೆಳಗಿಳಿದು, ತನ್ನ ಮಾಲನ್ನು ಸುರಕ್ಷಿತವಾಗಿ ತೆಗೆದುಕೊಂಡು ದಂಡೆಗೆ ತಲುಪಿದನು. ಆಗ ಶ್ರದ್ಧಾಳು ಮನಸ್ಸಿನ ಆತನು ಉತ್ಸಾಹವು ಇನ್ನು ಇದೇ ತನ್ನ ಮಕ್ಕಾ-ಮದೀನಾ ಕ್ಷೇತ್ರವೆಂದು ತಿಳಿಯಿತು; ಹಾಗು ಆತನು ಅಲ್ಲಿ ಆತ ಬರಿಗಾಲನಿಂದ ಆ ಬೆಟ್ಟವನ್ನೇರಿ ಕುಣಕೇಶ್ವರನ ಬಳಿಗೆ ಹೋದನು. ಅವನಲ್ಲಿ ಮೊಣಕಾಲೂರಿ ಕುಳಿತು, ಆ ದೇವರನ್ನು ಕುರಿತು ಪ್ರಾರ್ಥಿಸಿದನು; ಹಾಗು ಮುಂದೆ ತನ್ನಿಂದ ಕಟ್ಟಲ್ಪಡುವ ಭವ್ಯವಾದ ಆ ದೇವ ಮಂದಿರದ ತಳಗಲ್ಲನ್ನಿರಿಸಿದನು. ಆ ಯವನನ ಹರಕೆ ಫಲಿಸಿದ್ದರಿಂದ, ಹಿಂದುಗಳಲ್ಲಿಯ ಆ ದೇವಸ್ಥಾನದ ವಿಶ್ವಾಸವು ಇಮ್ಮಡಿಸಿತು. ಬರಬರುತ್ತ ಆ ದೇವಸ್ಥಾನವು ಕೊಂಕಣಪಟ್ಟಿಯೊಳಗಿನ ದೇವಮಂದಿರಗಳೊಳಗೊಂದು ಪ್ರಮುಖ ಮತ್ತು ಜಾಗ್ರತಸ್ಥಾನವಾಗಿ ಬಿಟ್ಟಿತು; ಮತ್ತು ಅಲ್ಲಿ ನಾನಾ ಬಗೆಯ ಜಾತ್ರೆ-ಉತ್ಸವಗಳು ಪ್ರಾರಂಭವಾದವು.

ಆ ದೇವರ ವಿಷಯವಾಗಿ ಕೇಳಿದ ಈ ಸಂಗತಿಯು ನನಗೆ ನೆನಪಾದ್ದರಿಂದ ನಾನು ಸಹಜವಾಗಿಯೇ ಆ ಅರ್ಧೋದಯ ಪರ್ವದ ಸಂಧಿಗೆ ಕುಣಕೇಶ್ವರನ ಯಾತ್ರೆಗೂ ಸಮುದ್ರ ಸ್ನಾನಕ್ಕೂ ಹೋದೆನು. ಅಂದು ಆ ದೇವರ ವಾರ್ಷಿಕ ಉತ್ಸವವಿರಲಿಲ್ಲ; ಆದರೂ ಆ ದುರ್ಮಿಳ ಪರ್ವಣಿಯ ಸಮುದ್ರ ಸ್ನಾನಕ್ಕೆಂದು ವಾರ್ಷಿಕ ಜಾತ್ರೆಗಿಂತಲೂ ಅಂದು ಹೆಚ್ಚು ಜನ ಸೇರಿದ್ದರು. ನಾನು ಆಗ ಅಲ್ಲಿ ಸ್ನಾನ ಮಾಡಿ, ದೇವದರ್ಶನ ಪಡೆದು, ಮಂದಿರದ ಹಿಂಬದಿಯಲ್ಲಿ ಆ ಜನಸಮ್ಮರ್ದ ಮತ್ತು ಅಲ್ಲಿಂದ ಕಾಣುವ ಸಮುದ್ರ ದಂಡೆಯ ಉಸುಗಿನ ವಿಶೇಷ ಪ್ರಕಾರದ ಶೋಭೆ ಇವುಗಳನ್ನು ನೋಡುತ್ತ ಕುಳಿತೆನು. ಅಂದು ನನಗೆ ಉಪವಾಸವಿದ್ದುದರಿಂದ ಆ ಇಡಿ ದಿವಸ ನಾನು ಪುರಾಣ-ಪುಣ್ಯಕಥೆಗಳನ್ನು ಓದಿ, ಜಪ-ಜಾಪ್ಯಗಳನ್ನು ಮಾಡಿ ಕಾಲಕ್ರಮಿಸಿದೆನು. ಅಪರಾಹ್ಣ ಕಾಲದಲ್ಲಿ ಯಾತ್ರಿಕರ ಗದ್ದಲವು ಸಂಪೂರ್ಣವಾಗಿ ಇಲ್ಲದಂತಾ

ಯಿತು; ಹಾಗು ಸಮುದ್ರದ ಬಳಿಯ ಉಸುಗಿನ ಬೈಲು ತೆರವಾದುದನ್ನು ನೋಡಿ, ಸಹಜವಾಗಿ ಅತ್ತ ತುಸ ಸುಳಿದಾಡಿ ಬರುವ ಉದ್ದೇಶದಿಂದ ಅಲ್ಲಿಂದಿಳಿದು, ಸಮುದ್ರ ದಂಡೆ ಹಿಡಿದು ನಡೆದೆನು. ಅಷ್ಟರಲ್ಲಿ ಅಲ್ಲಿ ಕಂಡ ಚಮತ್ಕಾರವನ್ನೆಂತು ವರ್ಣಿಸಲಿ?

ಸುಮಾರು ಮೂರು ವರ್ಷದ ಒಂದು ಮಗುವು ಕೇವಲ ಒಬ್ಬೊಂಟಿಗ ನಾಗಿ ಆ ಬೈಲಿನ ಒತ್ತಟ್ಟಿಗಿನ ಮೂಲೆಯಲ್ಲಿ ಅಳುತ್ತ ಕುಳಿತಿದ್ದಿತು. ಆದರಿಂದ ನನ್ನ ಲಕ್ಷ್ಯವು ಸಹಜವಾಗಿಯೇ ಅತ್ತಕಡೆಗೆ ವೇಧಿಸಿತು ಕಾರಣ ನಾನು ಅತ್ತ ಕಡೆಗೆ ಹೋಗಿ ಮೊಟ್ಟಮೊದಲು ನಿಶ್ಚಲನಾಗಿ ನಿಂತುಬಿಟ್ಟೆನು. ಆತನೊಡನೆ ಮಾತ ನಾಡಲಿಲ್ಲ. ಯಾಕಂದರೆ ಆಗ ಆ ಮಗುವು: "ಅವ್ವಾ, ಬಾಽರಽ; ಇನ್ನೂ ನಿನ್ನ ಮೈತೊಳಯೋಣವು ಆಗಲಿಲ್ಲೇನು ?" ಎಂಬ ನುಡಿಗಳನ್ನು ಸಣ್ಣ ಹುಡುಗರ ರೀತಿ ಯಂತೆ ಮತ್ತೆ ಮತ್ತೆ ಉಚ್ಚರಿಸುತ್ತಿದ್ದಿತು. ಅದರಿಂದ ಅವನ ತಾಯಿಯು ನಿಜ ವಾಗಿಯೂ ಅಲ್ಲಿ ಸಮೀಪದಲ್ಲೆಲ್ಲಾದರೂ ಇದ್ದಿರಬೇಕು; ಮತ್ತು ಅವಳು ಈಗ ಅಲ್ಲಿರದಿದ್ದರೂ ಕ್ಷಣಹೊತ್ತಿನಲ್ಲಾದರೂ ಬಂದಾಳೆಂದು ತಿಳಿದು, ನಾನೂ ಆ ಹುಡುಗ ನಂತೆಯೇ ಅವಳ ಮಾರ್ಗ ನಿರೀಕ್ಷಣೆ ಮಾಡುತ್ತ ನಿಂತುಕೊಂಡೆನು.

ಆದರೆ ಒಂದು-ಎರಡು-ಮೂರು ಹೀಗೆನ್ನುತ್ತ ಎಷ್ಟೋ ಕ್ಷಣಗಳು ಕಳೆದರೂ ಆ ಬಾಲಕನ ತಾಯಿಯು ಮರಳಿ ಬರುವ ಚಿಹ್ನವು ಕಾಣಿಸಲಿಲ್ಲ. ಆಗ ನನಗೆನಿಸಿ ತೇನಂದರೆ, ಈ ಮಗುವು ಹೀಗೆಯೇ ತನ್ನ ತಾಯಿಯನ್ನು ಅದೆಷ್ಟೋ ಹೊತ್ತಿನಿಂದ ಕೂಗುತ್ತಿರಬೇಕು; ಯಾಕಂದರೆ, ಅದು ಕೂಗಿ ಕೂಗಿ ದಣಿದು ಹೋಗಿ, ಅದಕ್ಕೆ ಗ್ಲಾನಿ ಬರತೊಡಗಿತ್ತು; ಮತ್ತು ಗಂಟಲು ಒಣಗಹತ್ತಿದ್ದರಿಂದ ಅದರ ಆ ತೊದಲ್ನುಡಿ ಗಳು ಬಾಯಿಂದ ಮಂದ ಮಂದವಾಗಿ ಹೊರಬೀಳಹತ್ತಿದ್ದವು. ಆಗ ನಾನು ನನ್ನ ಮಟ್ಟಿಗೆ ಖಾತ್ರಿಮಾಡಿಕೊಳ್ಳಲಿಕ್ಕೆಂದು ಆ ಉಸುಗಿನ ಪ್ರದೇಶದಲ್ಲಿ ಅತ್ತಿತ್ತ ಹೋಗಿ ಅಡ್ಡಾಡಿ ನೋಡಿದೆನು; ಆದರೆ ಮೈತೊಳೆಕೊಂಡ ಬಳಿಕ ಉಡಲಿಕ್ಕೆಂದು ಥಾಬಳಿ ಸುತ್ತಿಟ್ಟಿದ್ದ ಒಂದು ಮಡಿಸೀರೆ ಹಾಗು ಅದರ ಬಳಿಯಲ್ಲೇ ಒಂದು ರಾಜಾಪುರೀ ಮಾಟದ ತಂಬಿಗೆ ಇವುಗಳ ಹೊರತು ಅಲ್ಲಿ ಮತ್ತೇನೂ ಗೋಚರಿಸಲಿಲ್ಲ.

ಆ ಮೇಲೆ ಮಾತ್ರ ನನ್ನ ಮನಸ್ಸಿನಲ್ಲಿ ಇಲ್ಲದ-ಸಲ್ಲದ ಹಲವು ಕುಕಲ್ಪನೆಗಳು ಮೂಡತೊಡಗಿದವು. ಆ ತಾಯಿಯು ನಿಜವಾಗಿಯೂ ಸಮುದ್ರಸ್ನಾನಕ್ಕೆಂದು ಹೋಗಿರಬಹುದೇ? ಅಥವಾ ಜೀವಕ್ಕೆ ಬೇಸತ್ತು ಟೊಂಕದ ಮೇಲಿನ ಮಗುವನ್ನು ಉಸುಗಿನಲ್ಲಿಳಿಸಿ 'ಅರ್ಧೋದಯ' ಪರ್ವವೇ ಆತ್ಮಾರ್ಪಣಕ್ಕೆ ಒಳ್ಳೇ ಪರ್ವಣಿ ಕಾಲ ವೆಂದು ತಿಳಿದು, ನೀರಲ್ಲಿ ಮುಳುಗಿ, ಅವಳು ತನ್ನ ದೇಹವನ್ನು ಸಮುದ್ರಕ್ಕರ್ಪಿಸಿರ ಬಹುದೇ? ಆದರೆ ನನ್ನೀ ಪ್ರಶ್ನೆಗಳಿಗಾರು ಉತ್ತರ ಕೊಡುವರು? ಬಳಿಕ ಆ ಹುಡುಗ

ನನ್ನ ಮಾತಾಡಿಸದ ಹೊರತು ನನ್ನಿಂದಾಗಲಿಲ್ಲ. ನನ್ನ ಈ ವೈರಾಗಿಯ ವಿಕೃತರೂಪ ವನ್ನು ಕಂಡು ಆ ಮಗುವು ಅಂಜಿ ಚೀರುತ್ತವೇನೆಂಬ ಅಂಜಿಕೆಯು ನನಗೆ ಅನಿಸಿತು, ಆದರೆ ಅದು ಅತ್ತು ಅತ್ತು ತೀರ ನಿರ್ವಿಣ್ಣವಾಗಿದ್ದುದರಿಂದ, ಅದಕ್ಕೆ ನನ್ನ ಅಂಜಿಕೆ ಎನಿಸಿದ್ದರೂ ಕೂಡ ಅದು ಚೀರದಂತಾಗಿದ್ದಿತು. ಅದರಿಂದ ನಾನು ಮೆಲ್ಲನೆ ಅದ ಬಳಿಗೆ ಹೋಗಿ ಅದನ್ನು ಹೆಗಲಮೇಲೆತ್ತಿಕೊಂಡೆನು, ಹಾಗು ಮೆಲ್ಲಮೆಲ್ಲನೆ ಅದರ ಬೆನ್ನ ಮೇಲೆ ಕೈಯಾಡಿಸುತ್ತ, ಅದಕ್ಕ ತಿಳಿಯುವಂತೆ ಸಣ್ಣ ಸಣ್ಣ ಪ್ರಶ್ನೆ ಮಾಡಿ ದೆನು, ಆದರೆ ಅದು ಯಾವ ಉತ್ತರ ಕೊಡುತ್ತಿತ್ತೋ ಅದು ತೀರ ಸಂಕ್ಷಿಪ್ತ ಮತ್ತು ನಿಶ್ಚಿತವೇ ಆಗಿತ್ತು. ಅದೇನೆಂದರೆ.—"ನನ್ನ ಅವ್ವನು ನೈವೇದ್ಯ ತೊಳೆಯಲಿಕ್ಕೆಂದು ನೀರೊಳಗೆ ಹೋಗಿ ಎಷ್ಟೋ ಹೊತ್ತಾಯಿತು. ಅವಳು ಇದುವರೆಗೂ ಅದೇಕೋ ಬರಲೊಲ್ಲಳು!" ಎಂದು

ಅಂದು ದೇವರ ಸಾಕ್ಷಿಯಿಂದಲೇ ನನ್ನಾ ಸಂದೇಹಕ್ಕೆ ಉತ್ತರ ದೊರೆಯಿತು. ಕೊನೆಗೆ ಇದೊಂದೇ ಉಪಾಯವೆಂದು ನಾನು ಆ ಮಗುವನ್ನು ನನ್ನ ಹೆಗಲ ಮೇಲೆ ಹಾಕಿಕೊಂಡು ಮೇಲೆ ದೇವಸ್ಥಾನಕ್ಕೆ ನಡೆದೆನು. ಹೋಗುವಾಗ ನಾನು ಆ ಮಗುವಿನ ತಾಯಿಯದಾದ ಆ ಘಾಬರಿಯ ಗಂಟನ್ನೂ ತಂಬಿಗೆಯನ್ನೂ ನನ್ನ ಜೊತೆಗೊಯ್ಯ ದಿರಲಿಲ್ಲ. ಆ ಜೀನಸುಗಳ ಗುರ್ತಿನಿಂದ ಒಂದು ವೇಳೆ ಈ ಹುಡುಗನ ತಾಯಿಯ ಪತ್ತೆ ಹತ್ತಬಹುದೆಂದು ಆಶೆಯೆನಿಸುತ್ತಿದ್ದಿತು, ಆದರೆ ಆ ತಾಯಿಯು ಮರಳಿ ಬಂದಾ ಳೆಂಬ ಆಶೆಯು ಬಹುಮಟ್ಟಿಗೆ ನಿರರ್ಥಕವೇ ಆಗಿದ್ದಿತು; ಆದರೂ ಕೂಡ ಈ ಹುಡು ಗನ ಮನೆಯ ಪತ್ತೆಯಾದರೂ ಹತ್ತಿದರೆ ಅರ್ಥ ಕೆಲಸವಾದೀತೆಂದು! ಆ ಮೇಲೆ ನಾನು ಕುಣಕೇಶ್ವರ ಮಂದಿರದೊಳಗೆ ಹೋಗಿ, ಆ ಬಾಲಕನನ್ನು ತೋರಿಸಿ, ಆ ಗಂಟು-ತಂಬಿಗೆಗಳನ್ನು ಮುಂದೆ ಮಾಡಿ ಕಂಡಕಂಡವರನ್ನು ಕೇಳತೊಡಗಿದನು. ಆದರೂ ಏನೂ ಪತ್ತೆ ಹತ್ತಲಿಲ್ಲ. ಅಂದು ಸಮುದ್ರ ಸ್ನಾನಕ್ಕೆಂದು ಯಾತ್ರಿಕರು ಎಷ್ಟು ಲಗುಬಗನೆ ಕಲೆತಿದ್ದರೋ, ಅಷ್ಟೇ ಲಗುಬಗೆಯಿಂದ ಅವರು ಹೊರಟು ಹೋಗುತ್ತಿದ್ದರು. ಯಾಕೆಂದರೆ ಅಂದು ಅಲ್ಲಿ ಸ್ನಾನದ ಹೊರತು ಬೇರೆ ಯಾವ ಧರ್ಮಕೃತ್ಯವೂ ಆಗುವದಿರಲಿಲ್ಲ.

ಕೊನೆಗೆ ನಾನು ಬೇಸತ್ತು ಆ ಮಗುವಿನೊಡನೆ ಆ ದೇವರೆದುರು ಹೋಗಿ ಕುಳಿ ತೆನು. ಆಗ ಭಾವನೆಯ ಆಟವೆನ್ನಿರಿ, ಅಥವಾ ಏನೇ ಅನ್ನಿರಿ, ಅಲ್ಲಿ ನನಗೆ ನನ್ನ ಗುರುಗಳು ಕಾಣಿಸಿದಂತೆ ಒಮ್ಮೆಲೆ ಭಾಸವಾಯಿತು, ಮತ್ತು ಆ ಭಾಸದೊಡನೆಯೇ ನನಗೆ ಆಗ ಕೇಳಬಂದಿತೇನೆಂದರೆ:—"ನಾನು ನಿವರ್ತಿಸಿದೆನಷ್ಟೆ; ನೀನಿನ್ನು ಗುರು ವಾದೆ. ನಿನಗೆ ಚೇಲಾ ಬೇಕಿದ್ದನಷ್ಟೇ? ಇದುಕೋ, ಇವನನ್ನು. ದೇವರೇ ನಿನಗೆ

ಇವನನ್ನು ಕೊಟ್ಟಿರುತ್ತಾನೆ. ಸಂರಕ್ಷಿಸು. ಈತನ ಭಾಗ್ಯೋದಯವಾದೀತು" ನನ್ನ ಆ ಭಾಸವು ಹರಿಯಲು, ನಾನು ಸಂತೋಷದಿಂದಲೇ ಅಲ್ಲಿಂದೆದ್ದೆನು; ಹಾಗು "ಮಗೂ, ನಡೆ. ಇನ್ನು ನೀನು ನನ್ನ ಚೇಲಾ ಅಂದರೆ ಮಗನೇ ಆದೆ" ಎಂದಂದು, ಆ ಮಗುವನ್ನೆತ್ತಿಕೊಂಡು ದೇವಸ್ಥಾನದಿಂದ ಹೊರಬಿದ್ದೆನು.

( ೨ )

ನನ್ನ ಚೇಲಾ ನನಗಿಂತ ದೈವವಾನನೇನೋ ನಿಜ. ತನಗೆ ನನ್ನ ತಾಯಿ-ತಂದೆಗಳ ನೆನಪು ಕೂಡ ಇರಲಿಲ್ಲ; ಆದರೆ ಈ ಮಗುವಿಗೆ ತನ್ನ ತಾಯಿಯ ನೆನಪಾದರೂ ಇದೆ! ನಾನು ನನ್ನ ಗುರುವನ್ನು ಕೇಳದಿದ್ದ ಹಾಗು ಆತನು ನನಗೆ ಎಂದೂ ಹೇಳದಿದ್ದ ಒಂದೇ ಒಂದು ಮಾತೆಂದರೆ—"ನಾನು ಯಾರವನು? ಹಾಗು ನನ್ನ ಗುರುವಿಗೆ ನಾನು ದೊರೆತದ್ದು ಹೇಗೆ?" ಆದರೆ ಇಂದಿನ ಅನುಭವದಿಂದ ನಾನು ತರ್ಕಿಸಿದೆನೇನೆಂದರೆ, ನನ್ನ ಗುರುವಾದರೂ ಮಕ್ಕಳನ್ನೊಯ್ದು ಸಿಕೊಂಡೊಯ್ವ ಗೋಸಾವಿಯಾಗಿರಲಿಲ್ಲ. ಆದರಿಂದ ಇವರಂತಹ ಯಾವುದೊಂದು ಆಕಸ್ಮಿಕ ಪ್ರಸಂಗದಿಂದ ದೇವರು ನನ್ನನ್ನು ಅವರಿಗೊಪ್ಪಿಸಿರಬೇಕು. ನಾವು ಬೈರಾಗಿಗಳು ಬ್ರಹ್ಮಚಾರಿಗಳಾಗಿ ಲೋಕದವರ ಮೇಲೆ ಬಾಳಿದರೂ, ನನ್ನ ಗುರುಗಳ ಹಾಗು ನನ್ನ ಮೇಲೆ ಒದಗಿದ ಈ ಅದ್ಭುತ ಪ್ರಸಂಗದಿಂದ ಗುರು-ಶಿಷ್ಯಪರಂಪರೆಯಂತೂ ಅಬಾಧಿತವಾಗಿ ನಡೆದುದಲ್ಲದೆ, ಆ ಲೋಕವು ನಮ್ಮ ಸೇದನ್ನು ಚೆನ್ನಾಗಿಯೇ ತೀರಿಸಿತು. ಯಾಕಂದರೆ ಲೋಕದಲ್ಲಿ ಮಾನವನು ಸಂಸಾರವನ್ನು ತ್ಯಜಿಸಬಹುದು, ಆದರೆ ಮಾಯೆ-ಮಮತೆ ಅಥವಾ ಭಾವನೆಗಳಿಗೆ ಬ್ರಹ್ಮಚಾರಿ-ಬೈರಾಗಿಗಳೂ ಹೊರತಾಗಿಲ್ಲವಲ್ಲ!

ಮೇಲಿನ ಸಂಗತಿ ಜರುಗುವ ಮೊದಲು ನನ್ನ ಮನಸ್ಸಿನಲ್ಲಿ ಆಗಾಗ್ಗೆ ಬರುತ್ತಿತ್ತೇನಂದರೆ, ಈ ಮಗುವಿನ ಜೇರೆ ಆಪ್ತರ ಪತ್ತೆ ಹಚ್ಚಿ ಇವನನ್ನು ಅವರಿಗೊಪ್ಪಿಸಿಬಿಡಬೇಕು; ಮತ್ತು ಅದಕ್ಕೆಂದು ಇನ್ನು ನಾಲ್ಕು ದಿನ ಇಲ್ಲಿ ಇರಬೇಕಾದರೂ ಇದ್ದು, ಸುತ್ತಮುತ್ತ ಅಡ್ಡಾಡಿ ಶೋಧಿಸಬೇಕು; ಆದರೆ ಮೇಲೆ ಹೇಳಿದಂತೆ ಗುರುದರ್ಶನದ ಮತ್ತು ಆಶೆಯ ಆಭಾಸವಾದುದರಿಂದ ನನ್ನಲ್ಲಿಯ ಆ ಮೊದಲಿನ ವಿಚಾರವು ಒಮ್ಮೆಲೆ ಮಾಯವಾಗಿ, ಈ ಹುಡುಗನನ್ನು ಚೇಲಾ ಎಂದು ನನ್ನವನನ್ನೇ ಮಾಡಿಕೊಳ್ಳುವ ವಿಚಾರವು ದೃಢವಾಯಿತು. ಆದರಿಂದ ಮೊದಲು ನಾಲ್ಕು ದಿನ ಕುಣಕೇಶ್ವರ ಸನ್ನಿಧಿಯಲ್ಲೂ ಸುತ್ತಮುತ್ತಲೂ ಕಳೆಯಬೇಕೆಂದಿದ್ದ ನನ್ನ ಜೇತನ್ನು ಬದಲಿಸಿ, ಅದಕ್ಕೆ ತೀರ ವಿಪರೀತ ನಿರ್ಧಾರವಾಗಿ, ಆ ಹುಡುಗನೊಡನೆ ಅಲ್ಲಿಂದ ಎಷ್ಟು ತೀವ್ರ ಹೊರಡಲಾದೀತೋ ಅಷ್ಟು ಬೇಗನೆ ಹೊರಡಬೇಕೆಂದು ನನ್ನ ಮನಸ್ಸು ಹೇಳಹತ್ತಿತು! ಆ ಮೇಲೇನು? ಬೈರಾಗಿಯ ಕಾಲುಗಳೆಂದರೇ ವಾಹನ. ಅವು ಯಾವಾಗಲೂ ಸಿದ್ಧ

ವಿರುತ್ತವೆ. ಅವು ಆ ಕೂಡಲೆ ನಡೆಯತೊಡಗಿದವು. ಆಗ ಆ ಹುಡುಗನನ್ನು ನಡೆಯಿಸಿಕೊಂಡು ಹೋಗುವದು ಶಕ್ಯವಿರಲಿಲ್ಲವೆಂದು ಆತನನ್ನು ಜೋಳಿಗೆಯಲ್ಲಿರಿಸಿ ಅದನ್ನು ನಾನು ನನ್ನ ಡುಬ್ಬಕ್ಕೆ ಕಟ್ಟಿದೆನು; ಹಾಗು ಕೈಯಲ್ಲಿ ಕುಬಡಿ-ಕಮಂಡಲುಗಳನ್ನು ಹಿಡಿದುಕೊಂಡು ನೆಟ್ಟಗೆ ನರ್ಮದೆಯ ಕಡೆಗೆ ನಡೆದೆನು.

ತಿನ್ನುಣ್ಣಲಿಕ್ಕೆ ಈಗ ಒಂದಕ್ಕೆ ಬದಲು ಎರಡು ಮುಖಗಳಾದವು, ಆದರೆ ಇಬ್ಬರ ಹೊಟ್ಟೆ ತುಂಬುವಷ್ಟು ಭಿಕ್ಷೆ ದೊರೆಕಿಸುವ ರೂಢಿಯು ನನಗೆ ಮೊದಲಿನಿಂದಲೂ ಇದ್ದೇ ಇತ್ತು. ಭೇದವಿಷ್ಟೇ, ಮುಂಚೆ ನನ್ನ ಹೊರತು ನನ್ನ ಗುರುವಿಗಾಗಿ ನಾನು ಭಿಕ್ಷೆ ದೊರೆಕಿಸುತ್ತಿದ್ದೆ. ಈಗದನ್ನು ನನ್ನ ಚೇಲಾನಿಗಾಗಿ ಬೇಡಬೇಕಾಯಿತು. ಆದರೂ ಮುಂಚೆ ಜೋಳಿಗೆಯಲ್ಲಿ ಬಿದ್ದದ್ದನ್ನು ಗ್ರಾಹ್ಯ ಮತ್ತು ಅಷ್ಟರಿಂದಲೇ ಸಂತೋಷಪಡುವ ವೃತ್ತಿಯಿದ್ದಿತು. ಅದು ಚೇಲಾನ ಅಂದರೆ ಆ ಅನಾಥ ಅಜ್ಞಪೋರನ ಮಮತೆಯಿಂದ ಕೊಂಚ ಬದಲಾಗಿ, ಆತನಿಗಾಗಿ ಕೆಲವೆಡೆಯಲ್ಲಿ ಹಾಲು, ಕೆಲವು ಕಡೆಗೆ ಅಕ್ಕಿ, ಒಂದೊತ್ತಿಟ್ಟಿಗೆ ಯಾವುದೊಂದು ಫಲ ಹೀಗೆ ವಿಶಿಷ್ಟ ಭಿಕ್ಷೆಯ ಪ್ರಯತ್ನವನ್ನು ನಾನು ಮಾಡಹತ್ತಿದೆನು.

ಬೈರಾಗಿಗಳು ಚೇಲೆಗಳನ್ನು ಮಾಡುತ್ತಾರೆಂವೇ ಅವರು ೕಳ ಸಂಪ್ರದಾಯವು ನಿರಂತರ ಸಾಗುತ್ತದೆ, ಮತ್ತು ಬೈರಾಗಿಗಳ ಸಮೂಹವೂ ಉಂಟಾಗುತ್ತದೆ; ಆದರೆ ಬೈರಾಗಿಗಳು ತಮ್ಮ ಚೇಲಾಗಳೆಂದು ಪ್ರಾಯಶಃ ದೊಡ್ಡ ಹುಡುಗರನ್ನು ಅಥವಾ ಹರೆಯಕ್ಕೆ ಬಂದಂಥವರನ್ನೇ ತಕ್ಕೊಳ್ಳುವರು. ನನ್ನ ಬೆನ್ನಿಗೆ ಬಿಗಿದಿದ್ದ ಆ ಎರಡು ವರ್ಷದ ಪೋರನನ್ನು ಕಂಡು ನನ್ನ ಬಗ್ಗೆ ಕೆಲಕೆಲವರು ಏನೆಂದು ತರ್ಕಿಸಿರಬಹುದೋ ಅದಾರು ಬಲ್ಲರು? ಹರೆಯದ ಅಥವಾ ಗುರುವಿನ ಸಂಗಡ ಓಡಾಡಬಲ್ಲ ಚೇಲಾ ದೊರೆತರೆ ಗುರುವಿನ ಪರಿಭ್ರಮಣಕ್ಕೆ ಬಹುಶಃ ವ್ಯತ್ಯಯವುಂಟಾಗುವದಿಲ್ಲ; ಆತನು ಅಲ್ಲಲ್ಲಿ ಬೀಡು ಬಿಟ್ಟು ಉಳಿಯಬೇಕಾಗುವದಿಲ್ಲ; ಆದರೆ ನನ್ನೀ ಚೇಲಾನ ಸಲುವಾಗಿ ನಾನು ನನ್ನ ದೇಶಸಂಚಾರದ ಕಲ್ಪನೆಯನ್ನು ಬಿಟ್ಟುಗೊಟ್ಟು, ಒಮ್ಮೆಲೆ ನರ್ಮದಾ ತೀರವನ್ನು ಸೇರಬೇಕಾಯಿತು.

ನಮ್ಮ ಬೈರಾಗಿ-ಗೋಸಾವಿಗಳಿಗೆ ಸಂಸಾರವಿರುವದಿಲ್ಲೆಂದು ನಮಗೆ ಮನೆ-ಮಾರುಗಳೂ ಇರುತ್ತಿರುವದಿಲ್ಲ; ಆದರೆ ಯಾವನೊಬ್ಬನ ಆವಶ್ಯಕತೆಯ ಸಲುವಾಗಿ, ಬೇರೊಬ್ಬನ ಬಯಕೆಗಾಗಿ, ಇನ್ನೊಬ್ಬನ ಶಿಷ್ಯಗಣದ ಋಣಾನುಬಂಧುತ್ವಕ್ಕಾಗಿ ಪ್ರತಿಯೊಬ್ಬನ 'ಮಠ'ವೆಂಬುದು ಎಲ್ಲಿಯಾದರೂ ಮನೆಯಂತೆ ಮಂಡಿಸಿದ್ದಿರುತ್ತದೆ. ಪಶು-ಪಕ್ಷಿಗಳ ರೀತಿಯಾದರೂ ಹೀಗೆಯೇ ಇರುತ್ತದೆಂಬುದು ನಮಗೆ ತಿಳಿಯುವದಿಲ್ಲವೇ? ಅಡವಿಯಲ್ಲಿ ಸಾವಿರಾರು ಗಿಡ-ಮರಗಳಿರುತ್ತವೆ; ಆದರೆ ಚೆನ್ನಾಗಿ ಲಕ್ಷ್ಯವಿರಿಸಿ

ನಿರೀಕ್ಷಿಸಿದರೆ, ತಮಗೆ ಗಿಡಗಳನ್ನು ಹಂಚಿಕೊಟ್ಟಿರುವಂತೆ ಯಾವುದೊಂದು ವಿಶಿಷ್ಟ ಗಿಡವನ್ನೇ ಅವು ತಮ್ಮ ರಾತ್ರಿಯ ನಿವಾಸಕ್ಕಾಗಿ ಗೊತ್ತುಮಾಡಿಕೊಂಡಿರುತ್ತವೆ ಇಷ್ಟೇ ಅಲ್ಲ, ಯಾವುದೊಂದು ಮೆಚ್ಚಿನ ಪದಾರ್ಥವು ತಿನ್ನಲಿಕ್ಕೆ ದೊರೆತರೆ, ಅವುಗಳನ್ನು ತಂದು ಅವೇ ಗಿಡದ ಮೇಲೆ ಕುಳಿತು ತಿನ್ನುತ್ತವೆ. ಅವುಗಳಿಗೆ ಅಲ್ಲಿಯೇ ಸ್ವಾಸ್ಥ್ಯತೆ ಹಾಗು ಮನಃಪ್ರಸಾದಗಳು ಲಭಿಸುತ್ತವೆ. ನಮ್ಮ ಬೈರಾಗಿ-ಗೋಸಾವಿಗಳದಾವರೂ ಪಶು-ಪಕ್ಷಿಗಳಂತೆಯೇ ಸ್ಥಿತಿಯಿರುತ್ತದೆ. ಇದರಂತೆ ನನ್ನ ಮೆಚ್ಚಿನ ನಿವಾಸಸ್ಥಳವೆಂದರೆ ನರ್ಮದಾತೀರದ 'ಕುಣಕೇಶ್ವರ' ಮಂದಿರವು. ಆ ಕ್ಷೇತ್ರದಲ್ಲಿಯದೊಂದು ನಿವಾಂತ ಸ್ಥಳದಲ್ಲಿ ನನ್ನದೊಂದು ಮಠ ಅಥವಾ ಕಲ್ಲಿನ ಸಣ್ಣ ಗೊಡಬಿಯಿದ್ದಿತು. ನಾನು ನನ್ನ ಹೊಸ ಚೇಲಾನೊಡನೆ ಅಲ್ಲಿಗೇ ಹೋಗಿ ವಾಸಿಸ ಹತ್ತಿದೆನು.

( ४ )

ಸ್ವಾಸ್ಥ್ಯವು ಲಭಿಸಿದ ಬಳಿಕ ಆ ಹುಡುಗನ ವಿಷಯವಾಗಿ ನನ್ನಲ್ಲಿ ಚಿಕಿತ್ಸಕ ಬುದ್ಧಿಯುಂಟಾಯಿತು. ಅವನು ದೇವರ ಮನೆಯ ಜೀವಿಯೇನೋ ನಿಜ; ಆದರೆ ದೇವರೇ ಸೃಷ್ಟಿ ನಡೆಸಲಿಕ್ಕೆಂದು 'ಅಹಂಕಾರ'ವನ್ನು ನಿರ್ಮಿಸಿರುವನು; ಮತ್ತು ತಾನೂ ಅಹಂಕಾರವೂ 'ನಾಮ' ಮತ್ತು 'ರೂಪ' ಇವುಗಳ ಮೇಲೆ ಅಧಿಷ್ಠಿತ ರಾದರು. ಅವುಗಳಲ್ಲಿ ಆ ಹುಡುಗನ ರೂಪವು ಜನ್ಮಸಿದ್ಧವೇ ಆಗಿತ್ತು; ಆದರೆ ಅಹಂಕಾರದ ಇನ್ನೊಂದು ಅಂಗವಾದ ನಾಮವೆಂಬದು ಮನುಷ್ಯ ಸಂಕೇತದಿಂದಲೇ ನಿರ್ಮಾಣವಾಗುತ್ತದೆ ಆದುದರಿಂದ ನಾನು ಮೊದಲು ನನ್ನ ಚೇಲಾನ ದೇಹದಲ್ಲಿಯ ವ್ಯಕ್ತಿತ್ವವನ್ನು ವ್ಯವಹಾರದಲ್ಲುಂಟುಮಾಡಲಿಕ್ಕೆಂದು ಅವನಿಗೆ ಏನಾದರೂ ಹೆಸರು ಇಡಲೇ ಬೇಕಾಯಿತು, ಹಾಗು ಏನೆಂದಿಟ್ಟರೂ ಅದು ಹೆಸರೇ! ಅದರಿಂದ ಆತನು ಕುಣಕೇಶ್ವರದಲ್ಲಿ ನನಗೆ ಲಭಿಸಿದ ನೆನಪಿಗೆಂದು ನಾನು ಆತನಿಗೆ 'ಕುಣ ಕ್ಯಾ' ಎಂಬ ಹೆಸರನ್ನೇ ಇಟ್ಟೆನು.

ವ್ಯಕ್ತಿಯ ಹೆಸರಿನ ಅರ್ಥ ಕೇಳುವವನು ಮೂರ್ಖನೇ ಅಲ್ಲವೇ? ಆದರೆ ನನಗೆ ಯಾರಾದರೂ ಕೇಳಿದರೆ ಆ ಹೆಸರಿನ ನಿಜವಾದ ಸಂಗತಿಯನ್ನು ಬಚ್ಚಿಟ್ಟು ಅದರ ಲಾಕ್ಷಣಿಕ ಅರ್ಥವನ್ನು ನಾನು ಹೀಗೆಂದು ಹೇಳುತ್ತಿದ್ದೆನು:—'ಕುಣ ಕ್ಯಾ' ಈ ನಾಮದಲ್ಲಿ 'ಕೋನ್' 'ಕ್ಯಾ' ಎಂಬ ಎರಡು ಪದಗಳಿರುತ್ತವೆ. ಆ ಲಾಕ್ಷಣಿಕ ನಾಮಕ್ಕೆ ತತ್ವಜ್ಞಾನದ ಸ್ವರೂಪ ಬರಬೇಕೆಂದು ನಾನು ಮತ್ತೆ ಹೇಳುತ್ತಿದ್ದೆನೇ ನಂದರೆ, 'ಕೋನ್' ಅಂದರೆ ಯಾವದು ಇಡೀ ವಿಶ್ವಕ್ಕೆ ಯಾವ ಮೂಲಭೂತ ಪ್ರಶ್ನೆ 'ನೀನು ಯಾರಿರುತ್ತೀ?' ಎಂಬ ಸವಾಲು ಅದರಲ್ಲಿ ಗರ್ಭಿತವಾಗಿದೆ. ಯಾವ ಪ್ರಶ್ನೆಗೆ

ಉತ್ತರ ದೊರೆಯುವದಿಲ್ಲವೋ ಅದು ಸಹಜವಾಗಿಯೇ ತತ್ವಜ್ಞಾನದ ಪ್ರಶ್ನೆಯಾಗುತ್ತದೆ! 'ನಾನಾರು, ನಾನೆಲ್ಲಿಂದ ಬಂದೆನೆಂಬದಾವುದೂ ತಿಳಿಯದೋ ದೇವಾ!' ಎಂಬ ಪುರಂದರದಾಸರ ವಚನವು ಪ್ರಸಿದ್ಧವೇ ಇದೆ. ಇನ್ನು ಈ ವರ್ಣನವು ನನ್ನ ಚೇಲಾನಿಗೆ ನಿಜವಾಗಿಯೂ ಸಂಪೂರ್ಣ ಹೋಲುವಂತಿತ್ತು. ಈ ಪೋರನಾರೆಂಬ ಪ್ರಶ್ನೆಯು ಮೇಲಿನ ಪದ್ಯದೊಳಗಿನ ಪ್ರಶ್ನೆಯಂತೆಯೇ ನಿರುತ್ತರವಾಗಿರುವಂತಿದ್ದಿತು. ಅದರಂತೆಯೇ 'ಕ್ಯಾ' ಈ ಪದದ ಅರ್ಥವಾದರೂ ಹೀಗೆಯೇ ಪ್ರಶ್ನಾರ್ಥಕ ತತ್ವಜ್ಞಾನಾತ್ಮಕವನ್ನಾಗಿ ಮಾಡಲು ಬರುತ್ತದೆ. ಎಂದರೆ ಆತ್ಮನು ಹೇಗೆ ಯಾವನೋ, ಹಾಗೆಯೇ ಜಗತ್ತಾದರೂ 'ಕ್ಯಾ ಹೈ' ಅಂದರೆ ಏನಿದೆ? ಎಂಬ ನಿರುತ್ತರದ ಪ್ರಶ್ನೆಯನ್ನು ಕೇಳಲು ಬಂದೇ ಬರುತ್ತದೆ. 'ಕುಣ ಕ್ಯಾ' ಎಂಬ ಹೆಸರು ಚಮತ್ಕಾರಿಕವಾಗಿ ತೋರಿಬರಲು ಯಾವನೊಬ್ಬನು ಆ ಹೆಸರಿನ ಬಗ್ಗೆ ಚಿಕಿತ್ಸೆ ಮಾಡಿದರೆ ಅದಕ್ಕೆ ಕೂಡಲೆ ಉತ್ತರ ಹೇಳಬರಬೇಕೆಂದು ನಾನೀ ತತ್ವಜ್ಞಾನದ ಗೌಡಬಂಗಾಲಿಯನ್ನು ಮನಸ್ಸಿನಲ್ಲಿ ಯೋಚಿಸಿಟ್ಟಿದ್ದೆನು.

ಆದರೆ ಆ ಬಗ್ಗೆ ಚಿಕಿತ್ಸೆ ಮಾಡುವವನು ಕ್ವಚಿತ್ತೇ. ಆ ಹುಡುಗನಂತೂ ಆ ಹೆಸರು ತನ್ನದೇ ಎಂಬದನ್ನು ಒಂದೆರಡು ದಿನಗಳಲ್ಲೇ ಅರಿತುಕೊಂಡು ಅಹಂಕಾರ ಬುದ್ಧಿಯಿಂದ ಅದರಲ್ಲೇ ಪ್ರವೇಶಿಸಿದನು, ಆದರೆ ನಾನು ಅದನ್ನೆಲ್ಲ ಬಲ್ಲವನೂ ಕಪಟಿಯೂ ಆದರೂ ಆ ಹೆಸರು ನನ್ನ ಬಾಯಲ್ಲಿ ನೆಲೆತು ಹೆಚ್ಚು ರೂಢಿಯದಾದ ರಿಂದ ಅದರ ಚಿಕಿತ್ಸೆಯ ನೆನಪು ಕೂಡ ನನಗೆ ಸುಲಭವಾಗಿ ಆಗದಾಯಿತು. ಉಚ್ಚಾರ ಮಾಡುವಾಗ ದೀರ್ಘಸ್ವರವು ಲಘುವಾಗುತ್ತದೆ ಅಂತೆಯೇ 'ಕೋನ್' ಎಂಬುದು ಹೋಗಿ 'ಕುಣ' ಎಂಬುದು ಬಂದಿತೆಂದು ನಾನು ಹೇಳುತ್ತಿದ್ದೆನು, ಆದರ 'ಕುಣ ಕ್ಯಾ' ಎಂದರೆ ಕುಣಕೇಶ್ವರದಲ್ಲಿ ದೊರೆತವ ಎಂಬ ಅರ್ಥವು ನನಗೊಬ್ಬನಿಗೇ ಗೊತ್ತು; ಹಾಗು ದೇವರೊಬ್ಬರಿಗೇ ಗೊತ್ತು! ಸ್ವಂತ ಕುಣಕ್ಯಾನಿಗೆ ಕೂಡ ಅದರೊಳಗಿನ ಮರ್ಮವು ಮುಂದೆ ಅದೆಷ್ಟೋ ವರ್ಷಗಳಿಗೆ ಹೊಳೆಯಿತು, ಆದರೆ ಆಗ ಆತನು ನನ್ನ ಚೇಲಾ ಎಂದುಳಿದಿರಲಿಲ್ಲ.

ದೇವರ ಮನೆಯ ಪ್ರಾಣಿಯ ಜಾತಿಯನ್ನು ನಿರ್ಧರಿಸ ಹೋಗುವದು ಮೂರ್ಖತನವೇ ಸರಿ; ಆದರೆ ವ್ಯವಹಾರಕ್ಕಾಗಿ ಅದನ್ನು ಮಾಡಲೇ ಬೇಕಾಗುತ್ತದೆ. ನಮ್ಮ ಬೈರಾಗಿ-ಗೋಸಾವಿಗಳೊಳಗೆ ಜಾತಿಯನ್ನು ಪಾಲಿಸಲಾಗುವದಿಲ್ಲ. ಸ್ಪರ್ಶಾಸ್ಪರ್ಶದ ವಿಚಾರವನ್ನು ಮನ್ನಿಸುವದಿಲ್ಲ. ಆದ್ದರಿಂದ ಆತನು ಯಾವದೇ ಜಾತಿಯವನಿದ್ದರೂ ಅಡ್ಡಿಯಿರಲೇ ಇಲ್ಲ; ಆದರೆ ಚಿಕಿತ್ಸೆ ಅಥವಾ ಜಿಜ್ಞಾಸೆಗಳು ಮನುಷ್ಯನನ್ನು ಸುಮ್ಮನೆ ಕೂಡ್ರಗೊಡುವದಿಲ್ಲ. ಅಂತೆಯೇ ನಾನು ಕೆಲಸವಿಲ್ಲದಾಗ ಅವನ ಜಾತಿ-

ಗೋತ್ರಗಳ ಬಗ್ಗೆ ಚರ್ಚಿಸತೊಡಗಿದೆನು. ಅವುಗಳನ್ನು ನಿರ್ಧರಿಸಲಿಕ್ಕೆ ನನಗೆ ಕೆಲವು ಗುರ್ತು-ಚಿಹ್ನಗಳು ದೊರೆತೇ ಇದ್ದವು. ಆ ಹುಡುಗನು ಆ ಸಮುದ್ರ ದಂಡೆಯ ಉಸುಗಿನಲ್ಲಿ ತನ್ನ ತಾಯಿಯನ್ನು ಕೂಗುತ್ತ ನಿಂತಿರುವಾಗ, ಅವನ ಹತ್ತಿರದಲ್ಲೇ ಸ್ನಾನಾನಂತರದಲ್ಲಿ ಉಟ್ಟುಕೊಳ್ಳಲಿಕ್ಕೆಂದು ಇಟ್ಟಿದ್ದ ಅವಳ ರೇಶ್ಮಿಯ ಮಡಿಸೀರೆಯು ಧಾಬಳಿಯಲ್ಲಿ ಕಟ್ಟಲ್ಪಟ್ಟಿತ್ತು. ಅದರಿಂದ ಆ ಹೆಂಗಸು ಹಿಂದೂಧರ್ಮದವಳೆಂದೂ ಜಾತಿಯಿಂದ ಸಾವಿರ ಪಾಲಿಗೆ ಉಚ್ಚತರಗತಿಯ ಬ್ರಾಹ್ಮಣ ಜಾತಿಯವಳೆಂದೂ ಅನಿಸಿತು ಬ್ರಾಹ್ಮಣೇತರ ಜಾತಿಯವರು ಧಾಬಳಿಯ ಉಪಯೋಗ ಮಾಡುತ್ತಿರುವದಿಲ್ಲ. ಬ್ರಾಹ್ಮಣೇತರರಾದರೂ ಸ್ನಾನಾನಂತರ ಶುಚಿಬಟ್ಟೆಯ ಉಪಯೋಗವನ್ನೇ ಮಾಡುತ್ತಿರುತ್ತಾರೆ, ಆದರೆ ಅವರುಗಳು ಮಡಿ-ಮೈಲಿಗೆಗಳ ಭೇದವನ್ನೆಣಿಸುತ್ತಿರುವದಿಲ್ಲ. ನನ್ನ ತರ್ಕವು ಇಲ್ಲಿಯ ವರೆಗೆ ಸರಿಹೋಯಿತು; ಆದರೆ ಬ್ರಾಹ್ಮಣರೊಳಗಿನ ಯಾವ ಒಳಜಾತಿಗೆ ಸೇರಿದ ಹುಡುಗನಿವನು? ಎಂಬದನ್ನು ತಿಳಿಯಲು ಮಾತ್ರ ಮಾರ್ಗವಿರಲಿಲ್ಲ. ಬ್ರಾಹ್ಮಣರಲ್ಲಿ ದೇಶಸ್ಥ, ಕರ್ಹಾಡೆ, ಕೊಂಕಣಸ್ಥ, ಸಾರಸ್ವತ, ಕಿರವಂತ, ಸಳಸೆ, ಮಾಧ್ಯಾಂದಿನ, ಕಾಣ್ವ ಮುಂತಾದ ಅನೇಕ ಒಳಭೇದಗಳಿರುತ್ತವೆಂಬದನ್ನು ನಾನು ಕೇಳಬಲ್ಲೆ, ಆದರೆ ಅವರಲ್ಲಿ ಈ ಹುಡುಗನ ಒಳಜಾತಿ ಯಾವುದೆಂಬ ನನ್ನ ಪ್ರಶ್ನೆಗೆ ಕೊನೆಗೂ ಉತ್ತರ ದೊರೆಯಲಿಲ್ಲ.

ತಾಯಿ-ತಂದೆಗಳ ಹೆಸರಿನಿಂದ ಅವನ ಒಳಜಾತಿಯ ಸುಳಿವು ಹಿಡಿಯಬೇಕೆಂದರೆ, ತಾಯಿಯ ಹೆಸರು 'ಅವ್ವ' ಇದಕ್ಕಿಂತ ಯಾವುದೂ ಆ ಹುಡುಗನಿಗೆ ಗೊತ್ತಿರಲಿಲ್ಲ, ಮತ್ತು ತಂದೆ ಎಂಬ ಅರ್ಥದ 'ಅಪ್ಪಾ' ಮೊದಲಾದ ಯಾವ ಶಬ್ದಗಳೂ ಆ ಹುಡುಗನ ಬಾಯಿಂದ ಹೊರಹೊರಡುತ್ತಿರಲಿಲ್ಲ. ಆದ್ದರಿಂದ ಅವನ ತಾಯಿಯು ಅವನ ಹುಟ್ಟಿನ ನಂತರ ಬೇಗನೆ ವಿಧವೆಯಾಗಿರಬೇಕೆಂದು ನಾನು ತರ್ಕಿಸಿದೆನು. ಜಾತಿಯ ಒಳಭೇದವನ್ನು ಸೂಕ್ಷ್ಮ ವಾಕ್ಪ್ರಚಾರದಿಂದಲೂ ಕಂಡುಹಿಡಿಯಲಾಗುತ್ತದೆ, ಆದರೆ ನನ್ನ ನಿವಾಸವು ಮಹಾರಾಷ್ಟ್ರ-ಕೊಂಕಣ ಪ್ರಾಂತಗಳಲ್ಲಿ ಕಡಿಮೆ. ಆದರಿಂದ ಅವರ ಭಾಷೆಯೊಳಗಿನ ಶ್ರುತಿಗೋಚರವಾಗುವ ಭೇದಗಳ ಮರ್ಮವು ನನಗೆ ಹೇಗೆ ಬೋಧವಾಗಬೇಕು? ಆ ಹುಡುಗನು ನನ್ನೊಡನೆ ಬೇಗನೆ ಹಿಂದೀ ಭಾಷೆಯಲ್ಲೇ ಮಾತಾಡಹತ್ತಿದನು, ಆದರೆ ಶೈಶವಾವಸ್ಥೆಯೊಳಗಿನ ಸಂಸ್ಕಾರಗಳು ಆಳವಾಗಿರುತ್ತವೆಂಬುದು ಸುಳ್ಳಲ್ಲ. ಯಾಕಂದರೆ ನಾನು ಆತನೊಡನೆ ಯಾವ ಯಾವಾಗ ಮಹಾರಾಷ್ಟ್ರದಲ್ಲಿ ಸಂಚರಿಸುತ್ತಿದ್ದೆನೋ, ಆಗಾಗ ಅವನು ಅಕ್ಕರೆಯಿಂದ ಮರಾಠೀ ಮಾತನಾಡುವ ಸಣ್ಣ ಹುಡುಗರೊಡನೆ ಬೆರೆತು ಅದನ್ನೇ ಆಡುವನು; ಹಾಗು ಅಷ್ಟರಿಂದಲೇ ಅವನಿಗೆ ಮರಾಠಿಯ ಜ್ಞಾನವು ಚೆನ್ನಾಗಿ ಆಗಿತ್ತು.

ಆ ಮೇಲೆ ನನ್ನ ಗುರುವು ಹಿಂದುಧರ್ಮಾಚರಣೆಯಲ್ಲಿ ವಿಶೇಷವಾಗಿ ನಾಥ ಪಂಥದ ಗೋಸಾವಿ-ಬೈರಾಗಿಗಳ ಧರ್ಮದಲ್ಲಿ ಯಾವ ಬಗೆಯಿಂದ ನನ್ನನ್ನು ಪ್ರವೇಶ ಗೊಳಿಸಿದ್ದನೋ ಅದೇ ಪದ್ಧತಿಯಿಂದ ನಾನೂ ಆತನಿಗೆ ಮಾಡಿಸಹತ್ತಿದೆನು. ಆಗ ನನಗೆ ಕಂಡುಬಂದಿತೇನೆಂದರೆ, ಈ ಹುಡುಗನ ಬುದ್ಧಿಯು ಬರಿಯ ತೀಕ್ಷ್ಣವೇ ಅಲ್ಲ, ಚಿಕಿತ್ಸಕವೂ ಆಗಿವೆ, ಎಂದು. ಅವನಿಗೆ ನಾನು ಯಾವ ಯಾವ ಸಾಂಪ್ರದಾಯಿಕ ವಾರಗಳನ್ನು ಕಲಿಸಿದೆನೋ, ಅವುಗಳನ್ನು ಆತನು ಬೇಗನೆ ಬಾಯಿಪಾಠ ಮಾಡುತ್ತಿದ್ದನು; ಆದರೆ ನಾನು ಸ್ವತಃ ಎಂದೂ ಮಾಡದಂತಹ ರೀತಿಯನ್ನು ಆವನು ಮಾಡುತ್ತಿದ್ದನು; ಅದೇನಂದರೆ:—"ಬೈರಾಗಿಗಳೇ, ಇದರ ಅರ್ಥವೇನು? ಅದರ ಅರ್ಥವೇನು?" ಹೀಗೆಂದು ಪ್ರಶ್ನೆ ಮಾಡಿ ಮಾಡಿ ಅವನು ನನ್ನನ್ನು ರೇಗಿಗೆಬ್ಬಿಸುತ್ತಿದ್ದನು. ನಮ್ಮ ಗೋಸಾವಿ-ಬೈರಾಗಿಗಳೊಳಗೆ ಪ್ರವಚನ ಮಾಡುವ ರೀತಿಯು ಹೆಚ್ಚಾಗಿಲ್ಲ. ಬರಿಯ ಬಾಯಿಪಾಠೇ ಹೆಚ್ಚಾಗಿರುತ್ತದೆ. ಧರ್ಮ ವಿಷಯದ ಪದಗಳನ್ನಸ್ಟಿತ್ತ, ಜಪಜಾಪ್ಯ ಮಾಡುತ್ತ ನಾವು ಬಹಳ ವೇಳೆಗಳೆಯುತ್ತೇವೆ ನಮ್ಮೊಳಗಿನ ಕೆಲವರು ಸಮಾಧಿ ಏರಿಸುವ ಸಲುವಾಗಿ ಧ್ಯಾನಸ್ಥರಾಗಿಯೂ ಕೂಡ್ರುವರು, ಆದರೆ ಯಾವುದೊಂದು ವಿಶಿಷ್ಟ ವಿಷಯದ ಚರ್ಚೆ ಮಾಡುವ ಪರಿಪಾಠವಿರದ್ದರಿಂದ, ಬಾಯಿಪಾಠ ಅನ್ನುವ ಸ್ತೋತ್ರಗಳ, ಪದ್ಯಗಳ ಅರ್ಥ ತಿಳಿದುಕೊಳ್ಳುವದು ನಮ್ಮ ಬೈರಾಗಿ-ಗೋಸಾವಿಗಳಲ್ಲಿ ಪರಿಪಾಠವೇ ಇಲ್ಲ.

ನಮ್ಮ ಪಂಥದೊಳಗಿನ ಶ್ರೇಷ್ಠತೆಯನ್ನು "ಇವನು ಎಲ್ಲ ತೀರ್ಥ-ಕ್ಷೇತ್ರಗಳನ್ನು ಎಷ್ಟು ಸಾರೆ ಮಾಡಿದನು? ಇವನು ಅದೆಷ್ಟು ಹೊತ್ತು ಧ್ಯಾನಸ್ಥನಾಗಿ ಕೂಡ್ರುವನು? ಅಥವಾ ಯಾವನೊಬ್ಬನು ಯಾವದೊಂದು ಚಮತ್ಕಾರವನ್ನು ಹೇಗೆ ಮಾಡುವನು?" ಇವುಗಳ ಮೇಲಿಂದಲೇ ಗಣಿಸಲಾಗುತ್ತದೆ. ಯೋಗಿಗಳಲ್ಲಿಯ "ಕರ್ಮಾಚರಣ" ವಾದ ಪಂಥವಿದು. ನಮ್ಮ ಪಂಥವು "ಜ್ಞಾನಿ" ವರ್ಗಕ್ಕೆ ಸೇರಿದುದಲ್ಲ. ತಾತ್ಪರ್ಯವೇನಂದರೆ, ಕಿಂಕ್ಯಾನು ನನಗೆ ಸ್ತೋತ್ರ-ಪಾಠಗಳ ಅರ್ಥವನ್ನು ಯಾವ ಯಾವಾಗ ಕೇಳುತ್ತಿದ್ದನೋ, ಆಗಾಗ ನಮ್ಮ ಪಂಥದೊಳಗಿನ ಒಂದು ನ್ಯೂನದ ಅರಿವು ನನಗಾಗುತ್ತಿತ್ತು. ನಾನು ಆಗ ಅವನಿಗೆ ಏನಾದರೂ ಹೇಳಿ ಕಳಿಸುತ್ತಿದ್ದೆನು. ನನ್ನ ಬಾಯಿಗೆ ಬಂದ ಅರ್ಥವನ್ನು ಅವನಿಗೆ ಹೇಳಿ ಮುನ್ನಿನ ಕೆಲ ದಿನಗಳನ್ನು ಕಳೆದೆನು, ಆದರೆ ಬರಬರುತ್ತ ಅದು ಬಗೆಹರಿಯದಾಯಿತು. ಆಗ ನಾನು ಅವನಿಗೆ.—"ಸ್ತೋತ್ರಪಾಠಗಳ ಅರ್ಥವನ್ನೆಂದೂ ಪಾಠಮಾಡಕೂಡದು" ಎಂದೆನು

"ಅರ್ಥ ಕೇಳಬಾರದು" ಎಂಬ ನಿಷೇಧ ವಚನದಿಂದ ಲೋಕದೊಳಗಿನ ಎಷ್ಟು ಅಧರ್ಮ, ಎಷ್ಟು ಅನಾಚಾರ, ಎಷ್ಟು ಅಜ್ಞಾನ ಮುಚ್ಚಲಾಗಿವೆಯೆಂಬವರ ಪತ್ತೆ

ಯು ಯಾರಿಗಾದರೂ ಹತ್ತಿರುವದೇನು? ಆದರೆ ಆ ನಿಷೇಧದಲ್ಲೂ ಒಂದು ಬಗೆಯು ಜಾದುವಿರುವದೇನೋ ನಿಜ. ಅದು ಚಿಕಿತ್ಸಕರನ್ನು ಎಷ್ಟೋ ಅವಧಿಯ ವರೆಗೆ ಬೆದರಿಸಿ, ಗದ್ದರಿಸಿ ಹಿಡಿದಿಡಲು ಶಕ್ತವಾಗುತ್ತದೆ. ಕುಣಕ್ಯಾನಿಗಾದರೂ ಹಾಗೆಯೇ ಆಯಿತು. "ಅರ್ಧವಾಡಬಾರದು"ಎಂದು ನಾನು ಹೇಳದಾಗೆಲ್ಲ ಅವನು ಸುಮ್ಮ ನಾಗುತ್ತಿದ್ದನು. ಅದು ನನ್ನ ಆಜ್ಞೆಯನ್ನು ಪಾಲಿಸುವದಕ್ಕೆಂದು! ಆದರೆ ಆಗ ಆತನ ಬುದ್ಧಿಗೆ ಸಮಾಧಾನವುಂಟಾಗಲಿಲ್ಲೆಂಬದು ಅವನ ಮುಖಚರ್ಯೆಯಿಂದಲೇ ತಿಳಿಯು ತ್ತಿತ್ತು, ಅದಕ್ಕೆ ನಾನಾದರೂ ಏನು ಮಾಡಬೇಕು? ಆದರೂ ಅವನ ಆಜ್ಞಾಧಾರಕ ತ್ವವು ಮಾತ್ರ ವಿಶೇಷ ಹೊಗಳತಕ್ಕಂತಹದು ತಥಾಪಿ ನನ್ನ ನಿಷೇಧವು ಎಲ್ಲಿ ಅವನ ದಾರಿಗೆ ಅಡ್ಡಬರುತ್ತಿದ್ದಿಲ್ಲವೋ ಅಲ್ಲಿ ಅವನು ತನ್ನ ಬುದ್ಧಿಗೆ ಚಾಲನೆ ಕೊಟ್ಟು ಹಲವು ಮೋಜುಗಳನ್ನು ಮಾಡುತ್ತಿದ್ದನು: "ಬೈರಾಗಿಗಳೇ, ನಾನಿಂದು ಹೀಗೆ ಮಾಡಿದೆ, ಬೈರಾಗಿಗಳೇ, ನಾನಿಂದು ಹಾಗೆ ಮಾಡಿದೆ" ಎಂದು ನನಗೆ ಹೇಳುವನು, ಯಾಕಂದರೆ, ಆತನು ಎಷ್ಟು ಆಜ್ಞಾಧಾರಕನಿದ್ದನೋ, ಅದರಂತೆಯೇ ನಾನಾದರೂ ಆತನೇನು ಮಾಡಿದರೂ ಆತನ ಮೇಲೆ ಸಿಟ್ಟಾಗುತ್ತಿದ್ದಿಲ್ಲೆಂಬದು ಅವನಿಗೆ ಗೊತ್ತಿತ್ತು.

ಭಿಕ್ಷೆಗೆ ಹೊರಡುವದೆಂದರೆ ಅವನ ಕಾಲುಗಳು ಯಾವಾಗಲೂ ನನಗಿಂತ ಮುಂದೆಯೇ ಇರುತ್ತಿದ್ದವು, ಮತ್ತು ನಮ್ಮಿಬ್ಬರಲ್ಲಿ ಆತನೇ ಒಳ್ಳೇ ಆಢ್ಯತೆಯಿಂದ 'ಅಹಲ್ಲಕ" ಎಂದಂದು "ಮಾಯಿ, ಭಿಕ್ಷಾ ಲಾವ" ಎಂದೆನಲು, ಅದನ್ನು ಕೇಳಿದ ಜನರು ಕೈಯಲ್ಲಿ ಭಿಕ್ಷೆ ಹಿಡಿದುಕೊಂಡು, ಕ್ಷಣ ಹೊತ್ತು ಅವನ ಮೋರೆಯ ಕಡೆಗೆ ಟಕಮುಕವೆಂದು ನೋಡುತ್ತಲೆ ನಿಲ್ಲುತ್ತಿದ್ದರು. ಮೊದಲೇ ಬೈರಾಗಿಯ ತೇಜ! ಅದ ರಲ್ಲೂ ಬಾಲ್ಯದಲ್ಲಿ ಮೈಗೊಂಡ ವೈರಾಗ್ಯ ಕೇಳುವದೇನು? ಅದನ್ನು ಕಂಡು ಪ್ರತಿ ಯೊಬ್ಬ ಸ್ತ್ರೀ-ಪುರುಷರೂ ಅವನನ್ನು ಕೊಂಡಾಡುವರು. ಅವನಾದರೂ ತನ್ನ ಜೋಳಿಗೆಯನ್ನು ತುಂಬಿಕೊಂಡು ಮಠಕ್ಕೆ ಹಿಂದಿರುಗಿದನೆಂದರೆ, ತಾನು ಅಲ್ಲಲ್ಲಿ ಮಾರ್ಮಿಕದೃಷ್ಟಿಯಿಂದ ಭಿಕ್ಷಾಟನೆ ಕಾಲದಲ್ಲಿ ಕಂಡ ಸಂಗತಿಗಳನ್ನು ನನ್ನ ಅಡಿಗೆ ತೀರುವ ವರೆಗೂ ಉಪ್ಪುಕಾರ ಹಚ್ಚಿ ಹೇಳಿ ಹೇಳಿ ನನ್ನನ್ನು ನಗಿಸುತ್ತಿದ್ದನು.

ಅವನು ಮಠದಲ್ಲಿದ್ದನೆಂದರೆ ಅತ್ತ ಸುಮ್ಮ ಸುಮ್ಮನೆ ನುಸುಳುವ ಧೈರ್ಯವು ಅದಾರಿಗೂ ಆಗುತ್ತಿರಲಿಲ್ಲ! ಅಂಥ ಚುರುಕ ಹುಡುಗನಿಗೆ ಜಾವಲ ನಾಯಿಯ ಉಪಮೆ ಕೊಡುವದು ಯೋಗ್ಯವಲ್ಲ! ಆದರೆ ನಾಯಿಯೊಳಗಿನ ಇಮಾನೀ ಗುಣವನ್ನಾದರೂ ಮಾನವನು ಅದೇಕೆ ಬಣ್ಣಿಸಬಾರದು? ಆತ ಚಿಕ್ಕ ಬಾಲಕನಾಗಿದ್ದರೂ ಹೆರವರ ಅದಾವ ವಸ್ತುವಿಗೂ ಸುಮ್ಮಸುಮ್ಮನೆ ಕೈನೀಡುತ್ತಿರಲಿಲ್ಲ, ಅಥವಾ ಒಬ್ಬನು ಬೇರೊ

ಬ್ಬನ ಜೇನಸನ್ನು ಸುಮ್ಮನೆ ಅಪಹರಿಸುತ್ತಿರುವನೆಂಬದು ಅವನ ದೃಷ್ಟಿಗೆ ಬಿದ್ದರೆ, ಕೂಡಲೆ ಅವನು ಆ ಬಗ್ಗೆ ಬೊಬ್ಬಾಟ ಮಾಡದಿರುತ್ತಿರಲಿಲ್ಲ.

ಆದರೆ ನಾನು ಇವೆಲ್ಲ ಆತನ ಗುಣಗಳ ಬಗ್ಗೆ ಮನಸ್ಸಿನಲ್ಲೇ ಕೌತುಕಪಡು ತ್ತಿರಲು, ನನ್ನ ಮನಸ್ಸಿನಲ್ಲೇ ನನಗೊಂದು ವಿಷಯದ ಬಗ್ಗೆ ಕೆಡಕೆನಿಸುತ್ತಿತ್ತು. ಅದೇನಂದರೆ, ಈ ಹುಡುಗನಿಗೆ ನಮ್ಮ ನಾಥಪಂಥದ ಬಗ್ಗೆ ಹೇಗೆ ಶ್ರದ್ಧೆಯಿರಬೇಕೋ ಹಾಗಿಲ್ಲವೆಂದು. ನನ್ನ ಆಜ್ಞಾಪಾಲನದಲ್ಲಿ ಆ ಪಂಥದ ಧರ್ಮವು ಎಷ್ಟು ಒರು ತ್ತಿತ್ತೋ, ಅಷ್ಟನ್ನು ಆತನು ತಪ್ಪದೆ ಪಾಲಿಸುತ್ತಿದ್ದನು; ಆದರೆ ಎಲ್ಲಿ ಬುದ್ಧಿಯನ್ನು ಸ್ವತಂತ್ರವಾಗಿ ನಡೆಸಲು ಅವಕಾಶದೊರೆಯುವದೋ ಅಲ್ಲಿ ಆತನು ಲೌಕಿಕ ಬುದ್ಧಿ ಮತ್ತು ತರ್ಕಪದ್ಧತಿಗಳನ್ನು ಅವಲಂಬಿಸಿ ನಡೆಯುವನು; ಮತ್ತು ನನಗೆ ತೋರ್ಪಡಿ ಸುತ್ತಿದ್ದನೇನಂದರೆ—"ನನ್ನ ವೇಷವು ಬೈರಾಗಿಯದಿದ್ದರೂ ನನ್ನ ಅಂತರಂಗವು ಮಾತ್ರ ಲೌಕಿಕ ಸಂಸಾರದೊಳಗಿನ ಹೆಚ್ಚಳವನ್ನು ದೊರೆಕಿಸುವಂತಹದಿದೆ." ಅವನು ಗುಡಿಗೆ ಹೋದನೆಂದರೆ, ಪೂಜಾರಿಯ ವರ್ತನ ಹೇಗಿದೆ? ಆತನ ಚಿತ್ತವು ದೇವರ ಕಡೆಗೆಷ್ಟಿದೆ? ಹಾಗು ತನ್ನ ಮುಂದಿನ ತಟ್ಟೆಯಲ್ಲಿ ದುಡ್ಡು ಚೆಲ್ಲುವವರ ಕಡೆಗೆ ಅವನ ಲಕ್ಷ್ಯವೆಷ್ಟು? ಇದನ್ನೆಲ್ಲ ಸೂಕ್ಷ್ಮದೃಷ್ಟಿಯಿಂದ ಈಕ್ಷಿಸುವನು; ಹಾಗು ಆ ಮೇಲೆ ನನ್ನೆಡೆಗೆ ಬಂದು:—"ಬೈರಾಗಿಗಳೇ, ಅವನು ಆ ದುಡ್ಡನ್ನೇನು ಮಾಡುವನು?" ಅಥವಾ ಪೂಜಾರಿಯು ಪೂಜೆ ಮಾಡುತ್ತಿರುವಾಗ ಮೆಲ್ಲನೆ ಅವನೆದುರಿಗಿನ ದುಡ್ಡಿನ ತಟ್ಟೆಯನ್ನೆತ್ತಿ, ಪೂಜೆಯಲ್ಲಿ ಆತನ ಲಕ್ಷ್ಯವೆಷ್ಟಿದೆ ಎಂಬದನ್ನು ನೋಡಬೇಕೆಂದೆನಿಸು ತ್ತಿದೆ" ಮುಂತಾಗಿ ಹೇಳುತ್ತಿದ್ದನು. ಆಗ ನಾನು ಕುಣಕ್ಯಾನನ್ನು ಕುರಿತು:- ಎಲೋ, ದೇವರ ಪೂಜೆ-ಪುರಸ್ಕಾರಗಳಿಗಾದರೂ ದುಡ್ಡು ಬೇಕೇ ಬೇಕಲ್ಲವೇ?" ಎಂದು ಹೇಳಲು, ಅವನು:—"ದೇವರು ತನಗೆ ಬೇಕಾದ ದುಡ್ಡನ್ನು ತಾನೇ ಏಕೆ ನಿರ್ಮಿಸಿ ಕೊಳ್ಳಬಾರದು? ಮಂದಿಯ ಹಣದ ಮೇಲೆ ಬಾಳುವ ಅವನು ದೇವರೆಂತಹನು?" ಹಾಗು "ದೇವರ ದುಡ್ಡನ್ನು ಪೂಜಾರಿಯೇ ಎತ್ತಿಹಾಕುತ್ತಿಲ್ಲವೆಂದು ಯಾರು ಹೇಳ ಬೇಕು? ನನ್ನನ್ನಾರಾದರೂ ದೇವಸ್ಥಾನದ ಅಧಿಕಾರಿಯನ್ನಾಗಿ ನಿಯಮಿಸಿದರೆ, ಪೂಜಾರಿಯ ಎಲ್ಲ ಹುಳುಕುಗಳನ್ನು ನಾನು ಬೈಲಿಗೆಳೆಯದೆ ಬಿಡೆನು."

ದೇವಸ್ಥಾನದ ಪ್ರಾಕಾರದಲ್ಲಿ ಯಾವನೊಬ್ಬ ಅಧಿಕಾರಿ ಇಳಿದುಕೊಂಡನೆಂದರೆ ಆತನ ಸರಂಜಾಮು ಹೇಗಿವೆ, ಅವನ ನೌಕರರು ಹೇಗಿರುತ್ತಾರೆ, ಸ್ವಂತ ಯಜಮಾ ನನು ಹೇಗೆ ವರ್ತಿಸುತ್ತಾನೆ? ಮುಂತಾದವುಗಳನ್ನು ಕುಣಕ್ಯಾ ಸೂಕ್ಷ್ಮವಾಗಿ ನಿರೀಕ್ಷಿ ಸುವನು. ಆ ಅಧಿಕಾರಿಯು ದೇವಸ್ಥಾನದಲ್ಲಿ ಹೆಚ್ಚು ಹೊತ್ತು ತಂಗಿದರೆ ಕುಣ ಕ್ಯಾನು ಆತನ ಶಿಪಾಯಿ-ಪಟ್ಟೇದವರೊಡನೆ ನಗೆ-ಕೆಲೆದಾಡುವನು; ಯಾವನೊಬ್ಬನ

ನಡಕಟ್ಟಿನಲ್ಲಿ ಸಿಕ್ಕಿಸಿದ ಖಡ್ಗವು ಹೇಗಿದೆ? ತುಬಾಕಿಯು ಹೇಗಿರುತ್ತದೆ? ಅದನ್ನು ಹಾರಿಸುವದು ಹೇಗೆ? ಭಾಲದಾರ-ಚೋಪದಾರರ ಕೋಲುಗಳಲ್ಲಿ ಗುಪ್ತಿ ಅಂದರೆ ಕಿರಿ-ಅಗಲಾದ ಉಕ್ಕಿನ ಪದನಾದ ಕತ್ತಿಯನ್ನು ಹೇಗೆ ಕೂಡಿಸಿರುತ್ತಾರೆ? ಇವುಗಳನ್ನೆಲ್ಲ ಕೇಳಕೊಳ್ಳಲಿಕ್ಕೆ ಅವನ ಮನಸ್ಸು ರಮಿಸುತ್ತಿತ್ತು, ಹಾಗು ನಾನು ಪಾರಾಯಣದ ಪುಸ್ತಕ ಬಿಚ್ಚಿಕೊಂಡು ಕೂಡ್ರಲು ಇಲ್ಲವೆ ಜಪಮಾಲಿಕೆಯನ್ನು ಹಿಡಿದುಕೊಂಡು ಕೂಡ್ರಲು ಆತನು ತಾನು ಕಂಡು-ಕೇಳಿದ ಆ ಎಲ್ಲ ಸಂಗತಿಗಳ ಪ್ರಶ್ನೆಗಳನ್ನು ನನಗೆ ಕೇಳುತ್ತಿದ್ದನು.

ನಾನು ಅವನಿಗೆ ಸಮಾಧಾನವಾಗುವಂತಹ ಉತ್ತರ ಕೊಡದಿದ್ದರೆ ಇಲ್ಲವೆ ಅಜ್ಞಾನವನ್ನು ಪ್ರಕಟಿಸಿದರೆ ಆತ ನಗುವನು: ಮತ್ತು "ಗುರುಗಳೇ, ನಮ್ಮ ಗೋಸಾವಿ-ಬೈರಾಗಿಗಳದೊಂದು ರಾಜ್ಯವೇ ಏಕಿರಬಾರದರೀ? ಆನೆಯ ಮೇಲೆ ಕೂಡ್ರುವ, ಪಲ್ಲಕ್ಕಿಯಲ್ಲಿ ಕುಳಿತು ಮೆರೆಯುವ ಹಲವು ಜನ ಗೋಸಾವಿ-ಬೈರಾಗಿಗಳನ್ನು ನಾನು ನೋಡಿದ್ದೇನೆ, ಆದರೆ ಒಬ್ಬ ಶಿಪಾಯಿ ಬಂದು ತಡೆದು ಬೆದರಿಸಿದರೆ, ಅವನಿಗೆ ಎದುರು ನಿಂತು ಮಾತಾಡುವ ಧೈರ್ಯವು ಇವರಿಗಾಗಲಿಕ್ಕಿಲ್ಲ. ಇಂಥವರು ಆನೆಯ ಮೇಲೆ-ಅಂಬಾರಿಯ ಮೇಲೆ ಏಕೆ ಕೂಡ್ರಬೇಕು? ಅಥವಾ ಪಲ್ಲಕ್ಕಿ-ಮೇಣೆಗಳನ್ನೇಕೆ ಉಪಯೋಗಿಸಬೇಕರೀ?"

ದೇವಸ್ಥಾನದಲ್ಲಿ ಹರಿಕೀರ್ತನ-ಪುರಾಣಗಳು ಆಗಹತ್ತಿದರ ಅವನು ಅಲ್ಲಿ ಹೋಗಿ ಕೂಡ್ರುವನು, ಹಾಗು ಕೇಳಿಕೊಂಡ ಭಾರತ-ರಾಮಾಯಣದ ಕಥೆಗಳಲ್ಲಿಯ ಒಳಿತು-ಕೆಡಕು, ಸಟಿ-ದಿಟಗಳ ಬಗ್ಗೆ ನನ್ನನ್ನು ಪ್ರಶ್ನಿಸುವನು. ಕಥೆ-ಪುರಾಣಗಳ ಕಡೆಗೆ ದುರ್ಲಕ್ಷಿಸುವದೇ ದೊಡ್ಡಿಸ್ತಿಕೆಯೆಂದು ನಾವು ಗೋಸಾವಿ-ಬೈರಾಗಿಗಳು ತಿಳಿಯುತ್ತೇವೆ; ಮತ್ತು "ಕಥೆ-ಪುರಾಣಗಳಲ್ಲೇನಿದೆ?" ಎಂದು ನಾನು ಅಂದೆನೆಂದರೆ, ಆತನು ಅವುಗಳೊಳಗಿನ ಯುದ್ಧದ ಸಂಗತಿಗಳನ್ನು ಹೇಳಿ, "ನನ್ನ ಮನವಂತೂ ರಮಿಸುತ್ತದೆ; ನಿಮಗೆ ಅವುಗಳು ಹೇಗೆ ರುಚಿಸುವದಿಲ್ಲವೋ ಯಾರು ಬಲ್ಲರು?" ಅವನ ಎಲ್ಲಕ್ಕೂ ಹೆಚ್ಚಿನ ಮೋಜೆಂದರೆ, ಮರಾಟರ ದಂಡುಗಳು, ಕಾಲಾಳುಗಳು, ಕುದುರೆ ಸವಾರರು, ತೋಫಿನ ಗಾಡಿಗಳು ಇವುಗಳನ್ನು ನಿರೀಕ್ಷಿಸುವದಾಗಿತ್ತು. ನಾನು ಪ್ರತಿ ವರ್ಷ ಮಳೆಗಾಲ ತೀರಿದ ಬಳಿಕ ನರ್ಮದಾ ನದಿಗೆ ಒಮ್ಮೆಯಾದರೂ ಪ್ರದಕ್ಷಿಣೆ ಮಾಡದಿರುತ್ತಿರಲಿಲ್ಲ; ಮತ್ತು ತಪ್ಪದೆ ಅದೇ ಕಾಲಕ್ಕೇ ನರ್ಮದೆಯ ಮೇಲ್ಬದಿಗೆ ಎಲ್ಲೆಲ್ಲಿ ಕಾಲುದಾರಿಯು ಇರುತ್ತಿತ್ತೋ, ಅಲ್ಲಲ್ಲಿ ಉತ್ತರ ಹಿಂದುಸ್ತಾನದ ಸವಾರಿಗೆ ನಡೆದಿರುವ ಮರಾಟರ ದಂಡುಗಳು ನರ್ಮದಾ ನದಿ ದಾಟುತ್ತಿರುವದು ಕಂಡುಬರುತ್ತಿತ್ತು

( ೫ )

ಕೊನೆಗೆ ನಾನು ನನ್ನ ಸಂದೇಹವನ್ನು ನಿವಾರಿಸಿಕೊಳ್ಳಲಿಕ್ಕೆಂದು ಒಂದು ವರ್ಷದ ವರೆಗೆ ಕುಣಕ್ಯಾನ ವರ್ತನವನ್ನು ಸೂಕ್ಷ್ಮವಾಗಿ ನಿರೀಕ್ಷಿಸಹತ್ತಿದೆನು. ಅವನಿಗೆ ತಾನೊಬ್ಬನೇ ಎಲ್ಲಿಯಾದರೂ ಹೋಗಬೇಕೆಂದೆನಿಸಿದರೆ ನಾನು ಆತನಿಗೆ ಬೇಡೆನ್ನುತ್ತಿರಲಿಲ್ಲ; ಆದರೆ ಅವನು ಹಿಂದಿರುಗಿ ಬಂದನೆಂದರೆ ಅವನು ಆಗ ಏನೇನು ಮಾಡಿದನೆಂಬದರ ಬಗ್ಗೆ ನಾನೇ ಅವನಿಗೆ ಹಲವು ಪ್ರಶ್ನೆ ಮಾಡಿ ಕೇಳಿಕೊಳ್ಳುತ್ತಿದ್ದೆನು, ಆದರೂ ನಾನು ಆ ಸಂಗತಿಯನ್ನು ಅವನಲ್ಲಿ ಅವಿಶ್ವಾಸವಿದ್ದುದಕ್ಕಾಗಿ ತಿಳಿಯಬಯಸುತ್ತಿರುವೆನೆಂದು ಅವನಿಗೆಂದೂ ಭಾಸವಾಗಗೊಡಲಿಲ್ಲ. ತದ್ವಿರುದ್ಧ ಅವನು ತಾನು ಮಾಡಿದ ಸಂಗತಿಗಳನ್ನು ಹೇಳಿದ್ದನ್ನು ಕೇಳಿ ನನಗೆ ಕೌತುಕವೇ ಅನಿಸುತ್ತದೆಂದೂ, ಅಂತೆಯೇ ನಾನು ಅವನಿಗೆ ಅದನ್ನೆಲ್ಲ ವಿಚಾರಿಸುತ್ತಿರುವೆನೆಂದೂ ಆತನಿಗೆ ಭಾಸವಾಗಗೊಡುತ್ತಿದ್ದೆನು. ಆ ವಿಷಯದಲ್ಲಿ ಕುಣಕ್ಯಾ ನನ್ನೊಡನೆಂದೂ ಕಪಟವನ್ನಾಚರಿಸಲಿಲ್ಲ, ಅದೆಂದೂ ಸುಳ್ಳು ನುಡಿಯಲಿಲ್ಲ. ಎಲ್ಲವನ್ನೂ ನಿಜವಾಗಿ ಹೇಳಿ, ಅವನು ಅದನ್ನೆಲ್ಲ ನಗೆಚೇಷ್ಟೆಯಂತೆ ತೋರಿಬಿಡುವನು, ಮತ್ತು ತಾನು ಏನನ್ನು ಹೇಳುತ್ತಿದ್ದನೋ ಅದನ್ನು ಕೇಳಿ ನನಗೆ ನಗುವು ಬರಬೇಕೆಂಬ ರೀತಿಯಿಂದಲೂ, ವಿನೋದದಿಂದಲೂ ಹೇಳುವನು. ತನ್ನಿಂದ ಘಟಿಸಿದ ಯಾವುದೊಂದು ಸಂಗತಿ ನನಗೆ ಅಂದರೆ ತನ್ನ ಗುರುವಿಗೆ ರುಚಿಸುವುದೋ ಇಲ್ಲವೋ ಎಂಬ ಸಂದೇಹವುಂಟಾದರೆ ಅವನು ಒಳ್ಳೇ ದುಡುಕಿನಿಂದ ನನ್ನನ್ನು ಕುರಿತು:—"ಗುರುಗಳೇ, ನಾನು ಮಾಡಿದ್ದು ವಿಹಿತವಿರಲಿಲ್ಲವೇ? ಆಗ ನಾನು ಮಾಡಿದಂತೆಯೇ ಮಾಡಬೇಕಾಗಿದ್ದಿತಲ್ಲನೇ?" ಆಗ ನಾನು ನನ್ನ ಮನಸ್ಸಿನಲ್ಲಿ ಆಲೋಚಿಸುತ್ತಿದ್ದೆನೇನೆಂದರೆ, ಈತನ ಈಗಿನ ಕೃತ್ಯವಾಡದಲ್ಲಿ ಕೊಂಚ ಕೆಡಕಿದ್ದರೂ ಇವನು ಇದನ್ನೀಗ ಮಾಡಿಬಿಟ್ಟಿರುತ್ತಾನೆ. ಇನ್ನು ಇವನಿಗೆ ಕೆಡಕೆಂದಂದು ಸುಮ್ಮನೆ ವಿಷಾದಪಡಿಸುವದರಲ್ಲೇನು ಲಾಭವಿದೆ? ಹೀಗೆ ಏನಾದರೂ ಕಪಟವಾದರೆ ನನ್ನಿಂದಲೇ ಆಗುತ್ತಿತ್ತು. ಮನಸ್ಸಿನಲ್ಲಿದ್ದುದನ್ನು ಆಡಿ ತೋರಿಸದಿರುವವೇ ಪಾಪವಾಗಿದ್ದರೆ, ಅದು ಆಗಾಗ್ಗೆ ನನ್ನಿಂದಲೇ ಘಟಿಸುತ್ತಿತ್ತು.

ಒಂದಾನೊಂದು ದಿನ ಕುಣಕ್ಯಾ ತನ್ನ ಮೆಚ್ಚಿನ ಹೂಗಳನ್ನೆತ್ತಲು ಅಡವಿಯಲ್ಲಿ ಹೋದಾಗ ನನ್ನ ಮನಸ್ಸಿನಲ್ಲಿ ಹಲವು ಗಂಭೀರ ವಿಚಾರಗಳುಂಟಾಗಿ ನಾನು ಅದೆಷ್ಟೋ ವೇಳೆಯವರೆಗೆ ಚಿಂತಾಮಗ್ನನಾಗಿ ಕುಳಿತೆನು. ಅಂದು ಮೊಟ್ಟಮೊದಲೇ ನನ್ನ ಮನಸ್ಸಿನಲ್ಲಿ ಸ್ಪಷ್ಟವಾದ ವಿಚಾರ ಬಂದುದೇನೆಂದರೆ:—ಈ ಹುಡುಗನಿಗೆ 'ಬೈರಾಗಿಯ ದೀಕ್ಷೆ' ಕೊಟ್ಟು ನಾನಿವನ ಅನಹಿತ ಬೇರೆ ಮಾಡುತ್ತಿಲ್ಲವಷ್ಟೇ? ಲೋಕದಲ್ಲಿ ವೈರಾಗ್ಯಬುದ್ಧಿಯಿರಬೇಕೆಂಬುದೇನೋ ಯೋಗ್ಯವೇ; ಆದರೆ ಅದರ

ಅರ್ಥವಿಷ್ಟೇ ಆದೀತೇನಂದರೆ ಸಂಸಾರದಲ್ಲಿ ಆಸಕ್ತಿಯಿರಿಸಬಾರದು; ಆದರೆ ಆಸಕ್ತಿಯಿಡಲಿಲ್ಲೆಂದು ಮಾನವನು ಸಂಪೂರ್ಣ ಸಂಸಾರವನ್ನೇ ತ್ಯಜಿಸಬೇಕೆಂಬದು ಹೇಗೆ ಸಿದ್ಧವಾಗುತ್ತದೆ? ಬ್ರಹ್ಮಚಾರಿಗಳು ತಮ್ಮ ಪರಂಪರೆಯು ಬ್ರಹ್ಮಚಾರಿಗಳಿಂದಲೇ ಸಜವಾಗಿಯೂ ನಡೆಯುತ್ತದೆಂವೇಕೆ ತಿಳಿಯಬೇಕು? ಸಂಸಾರೀ ಜನರೆಲ್ಲ ಪಾಪಿಗಳೆಂವೆನ್ನಬೇಕೆಂದರೆ, ಗೋಸಾವಿ-ಬೈರಾಗಿ ಸಂಪ್ರದಾಯದೊಳಗಿನ ಎಲ್ಲ ಜನರೂ ಕೇವಲ ಪುಣ್ಯವನ್ನೇ ಸಂಚಯಿಸುತ್ತಿರುವರೆಂದು ಅನುಭವವಿದೆಯೇ? ಇನ್ನು ಸಂಸಾರಿಗಳು ಸ್ವಾರ್ಥಿಗಳೆಂದರೆ, ಮಠ ನಿರ್ಮಿಸಿ ಐಶ್ವರ್ಯ ಗಳಿಸಿ ಬಾಳುವ ನಾಥಪಂಥೀ ಗೋಸಾವಿ-ಬೈರಾಗಿಗಳೇನು ಸ್ವಾರ್ಥರಹಿತರೋ? ಮಠವನ್ನು ಸಜ್ಜುಗೊಳಿಸುವದೆಂದರೆ, ಮನೆಯನ್ನು ಸಮೃದ್ಧಪಡಿಸುವದಕ್ಕಿಂತ ಹೆಚ್ಚು ವಿಹಿತ ಅಥವಾ ಕಡಿಮೆ ಕೆಡಕೆ? ಮಠನಿವಾಸಿಗಳಾದ ಮಹಂತರು ಬರಿಯ ಸ್ವಾರ್ಥಿಗಳಷ್ಟೇ ಅಲ್ಲ; ಆದರೆ ಅಹಂಕಾರದಿಂದ ಉನ್ಮತ್ತರಾದವರೂ ವ್ಯಸನಿಗಳೂ ದಂಭಾಚಾರಿಗಳೂ ಆದಂತಹರೆಷ್ಟೋ ಜನರಿರುತ್ತಾರೆ. ಯಾವ ಸಂಸಾರಿಕರಲ್ಲಿ ಭಿಕ್ಷೆ ಬೇಡಿ ನಾವು ಗೋಸಾವಿ-ಬೈರಾಗಿಗಳು ಉಪಜೀವಿಸುವೆವೋ ಅಂಥ ಸಂಸಾರಿಗಳೇ ಪಾಪಿಗಳೆಂದಾದರೆ, ನಾವು ಅವರ ಕೈಯಿಂದ ಬೇಡುವ ಭಿಕ್ಷೆಯಾದರೂ ಪಾಪಮಯವೆಂದೆನಿಸುವದಲ್ಲವೆ? ಮಾನವನು ಸಂಸಾರ ಮಾಡದಿದ್ದರೆ ಲೋಕವು ಸಾಗುವ ಬಗೆಯುಂಟೇ? ಯಾಕಂದರೆ, ಲೋಕದಲ್ಲಿ ಪ್ರೇಮ ಮಾಡದಿರುವದೆಂದರೆ ದೇವರಲ್ಲಿ ಪ್ರೇಮಮಾಡದಿರುವದು; ಅಥವಾ ಆತನಸಮುಂದು ದೊಡ್ಡ ಪರಾಕ್ರಮದ ಬಗ್ಗೆ ನಿಂದೆ ಮಾಡುವದು ಎಂದೆನಿಸವೆ? ಸೃಷ್ಟಿಯನ್ನು ನಿರ್ಮಿಸಿ ಅದನ್ನು ನಡೆಸುವ ಪರಾಕ್ರಮಕ್ಕಿಂತ ದೇವರ ಬೇರೆ ಪರಾಕ್ರಮವಾವುದು?

ಈ ರೀತಿಯಾಗಿ ಹಲವು ಸಾರೆ ಉಚ್ಚವಾತಾವರಣದಲ್ಲಿ ಪರಿಭ್ರಮಿಸಿ ಕೊನೆಗೆ ನಾನು ಕುಣಕ್ಯಾನಿಗೆ ಬೈರಾಗಿ ಪಂಥದ ಕಾಯಂ ದೀಕ್ಷೆಯನ್ನು ಕೊಟ್ಟು ಆತನ ಇಡೀ ಜನ್ಮವನ್ನು ತೀರ್ಥಾಟನ-ದೇವತಾರ್ಚನಗಳಲ್ಲಿ ಕಳೆಯುವದರಿಂದ, ಅವನಲ್ಲಿಯ ಅನೇಕ ಉತ್ತಮ ಗುಣಗಳ ಬೆಳವಣಿಗೆಗೆ ನಾನು ಆಸ್ಪದಕೊಟ್ಟಂತಾಗುವದೇ? ಸ್ವಂತದ ಮುಕ್ತಿಗೆ ಮುಕ್ತಿ ಸಂಪಾದಿಸುವದೊಂದು ದೂಷಿತ ಸ್ವಾರ್ಥವಲ್ಲವೆ? ಇಂಥ ಒಮ್ಮಾರೆಯ ಧರ್ಮಾಚರಣೆಗಿಂತ ಅವನನ್ನು ಸಂಸಾರಕ್ಕೆ ಹಚ್ಚಿಯೇ ಯಾವನೊಬ್ಬ ಶ್ರೇಷ್ಠ ಕರ್ಮಯೋಗಿಯ ಯಶದೊರೆಕಿಸಿಕೊಡುವದಕ್ಕೆಂದು ನಾನು ಪುಣ್ಯದ ಮೇಲೆ ನೀರು ಬಿಟ್ಟರೆ, ಆತನು ಸ್ವಂತದ ಕಲ್ಯಾಣ ಮಾಡಿಕೊಳ್ಳುವನಲ್ಲದೆ ಅನ್ಯರ ಕಲ್ಯಾಣವನ್ನೂ ಮಾಡಲಾರನೇನು? ಈ ಭರತಖಂಡದೊಳಗಿನ ರಾಜಮಾರ್ಗಗಳಲ್ಲಿ ಆದೆಷ್ಟೋ ಬಗೆಯ ಲೋಕವ್ಯವಹಾರಗಳು ಸಾಗಿರುವದಿಲ್ಲವೇ? ಅವುಗಳಲ್ಲಿ ನನ್ನೀ

ಶಿಷ್ಯನನ್ನು ತೊಡಕಿಸಿದರೆ, ಇವನು ತನ್ನ ಬುದ್ಧಿಯ ಸಾರ್ಥಕವನ್ನು ಚೆನ್ನಾಗಿ ಮಾಡಿಕೊಳ್ಳಲಾಪನೆ?

ಈ ಬಗೆಯಾಗಿ ನಾನು ಹೇಗೆ ಹೆಚ್ಚು ಯೋಚಿಸತೊಡಗಿದೆನೋ ಹಾಗೆ ನನಗೆ ಹೆಚ್ಚೆಚ್ಚು ಅನಿಸಿತೇನಂದರೆ, ನಾನು ಕುಣಕ್ಯಾನಿಗೆ ದೀಕ್ಷೆ ಕೊಟ್ಟು ಬ್ರಹ್ಮಚರ್ಯ ವ್ರತದ ಕೊಳದಲ್ಲಿ ದೂಡುವದು ಯೋಗ್ಯವಾಗುವದಿಲ್ಲ; ಆದರೆ ನಾನು ಈ ಬಗ್ಗೆ ಚಕಾರ ಶಬ್ದಕೂಡ ಅವನೆದುರು ನುಡಿಯಲಿಲ್ಲ. ನಾನು ನನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡೆನೇನೆಂದರೆ ಇವನು ಮೊದಲು ನನಗೆ ಎಲ್ಲಿ ದೊರೆತಿರುವನೋ ಅಲ್ಲಿಗೆ ಇವನನ್ನು ಕರೆದೊಯ್ದು ಬಿಟ್ಟುಬಿಡಬೇಕು; ಮತ್ತು ಹಿಮಾಚಲದ ದಾರಿಹಿಡಿಯಬೇಕು. ಆದರೆ ಆತನಿಂದು ಹದಿನಾಲ್ಕು-ಹದಿನೈದು ವರ್ಷದವನು; ಅಂದರೆ ಲೋಕದವರ ದೃಷ್ಟಿಯಿಂದ ತೀರ ಚಿಕ್ಕವನೇ. ಮತ್ತೆ ಅನಿಸಿತೇನಂದರೆ, ಇವನನ್ನು ಹೀಗೆ ನಿರಾಶ್ರಿತ ಸ್ಥಿತಿಯಲ್ಲಿ ಬಿಟ್ಟುಗೊಟ್ಟರೆ ಇವನೇನು ಮಾಡುವನು? ಹೀಗೆ ನನ್ನದೊಂದು ಮನಸ್ಸು ನನಗೆ ಪ್ರಶ್ನಿಸುವದು; ಕೂಡಲೆ ನನ್ನ ಇನ್ನೊಂದು ಮನಸ್ಸು ಅದಕ್ಕೆ ಸಮರ್ಪಕ ಉತ್ತರವನ್ನೀಯುವದು. ಅದೆಂತೆಂದರೆ:—"ಕೇವಲ ಮೂರೇ ವರ್ಷದವನಿರುವಾಗ, ಸಮುದ್ರದ ಉಸುಗಿನಲ್ಲಿ ಕುಳಿತಿದ್ದಾಗ ಇವನು ಆತ್ಮರಕ್ಷಣ ಮಾಡಿಕೊಳ್ಳಲಿಕ್ಕೆ ಎಷ್ಟರಮಟ್ಟಿಗೆ ಸಮರ್ಥನಿದ್ದನೋ, ಅದಕ್ಕಿಂತಲೂ ಇಂದು ಈತನೆಷ್ಟೋ ಪಟ್ಟು ಹೆಚ್ಚು ಸಮರ್ಥನಾಗಿರುವದಿಲ್ಲವೇ ? ಇತ್ತೀಚೆಗೆ ಹದಿನಾಲ್ಕು-ಹದಿನೈದು ವರ್ಷದ ಹುಡುಗರು ಮಹಾರಾಷ್ಟ್ರದಲ್ಲಿ ದೊಡ್ಡ ಮನುಷ್ಯರ ಹಾಗೆ ವರ್ತಿಸುತ್ತಾರೆ, ತಮ್ಮ ಹೊಟ್ಟೆ ಹೊರಕೊಳ್ಳುತ್ತಾರೆ, ಹಾಗು ರಾಜಕಾರಣದಲ್ಲೂ ತಮ್ಮ ಬುದ್ಧಿಯನ್ನು ಚಲಿಸುತ್ತಾರೆ. ಅಂದಬಳಿಕ ಈ ಪೋರನಾದರೂ ಹಾಗೆ ಅದೇಕೆ ಮಾಡಲಿಕ್ಕಿಲ್ಲ ? "

ಮುಂಚೆ ಪಾನಿಪತ್ತದಲ್ಲಿ ಘನಘೋರ ಸಂಗ್ರಾಮವಾಯಿತು. ಆಗ ಮರಾಟರ ದಂಡಿನಲ್ಲಿ ಅಲ್ಪವಯಸ್ಸಿನ ಅದೆಷ್ಟೋ ಹುಡುಗರು ದಂಡಾಳುಗಳಾಗಿದ್ದರು. ಯುದ್ಧದಲ್ಲಿ ಅವರನ್ನು ಯೋಧರೆಂದೇನೋ ನಿಯಮಿಸಿರಲಿಲ್ಲವಾದರೂ ಆ ಹುಡುಗರು ಕುದುರೆಗಳನ್ನಾರೋಹಿಸಿ ಆತ್ಮವಿಶ್ವಾಸದಿಂದ ರಣಭೂಮಿಯಲ್ಲಿ ಸಂಚರಿಸುತ್ತಿದ್ದರು. ಅವರ ನಡಕಟ್ಟಿನಲ್ಲಿ ಅವರಿಂದ ಎತ್ತಿ ತಿರುಗಿಸುವಂತಹ ಖಡ್ಗಗಳಿರುತ್ತಿದ್ದವು. ಅದೆಷ್ಟೋ ಸರಕಾರೀ ಪಥಕದ ಮುಖ್ಯಸ್ಥರು ಇಂಥ ಅಲ್ಪ ವಯಸ್ಸಿನ ಹುಡುಗರೇ ಆಗಿರುತ್ತಿದ್ದರು; ಮತ್ತು ಅವರಿಗೆ ಸರದಾರಿಕೆಯ ಎಲ್ಲ ಕಾರಭಾರ ಸಾಗಿಸಲು ಬಾರದಿದ್ದರೂ, 'ತಮ್ಮ ಕೈಕೆಳಗಿನ ನೌಕರ-ಚಾಕರರನ್ನು ನಡೆಯಿಸಿಕೊಳ್ಳುವ ಜಾಣ್ಮೆಯು ಅವರಿಗಿದ್ದಿತು. ಇದೇ ಹುಡುಗನು ಯಾವನೊಬ್ಬ ಸರ

ದಾರನ ವಶದಲ್ಲಿದ್ದರೆ ತನ್ನ ಭಾಗ್ಯೋದಯದ ಪ್ರಸ್ಥಾನವನ್ನು ಅಲ್ಪವಯಸ್ಸಿನಲ್ಲಿಯೇ ಇಡುತ್ತಿದ್ದನೆಂದು ಅದಾರು ಅನ್ನಬೇಕು? ಆದ್ದರಿಂದ ಇಂದು ನಾನು ಇವನನ್ನೊಬ್ಬ ನನ್ನೇ ಬಿಟ್ಟುಗೊಟ್ಟರೆ ನಿಜವಾಗಿಯೂ ಈತನ ದುರ್ದೆಶೆಯಾಗಲಾರದು. ಅಂತೆಯೇ ಇವನನ್ನು ಮತ್ತೆ ಕುಣಕೇಶ್ವರ ದೇವಸ್ಥಾನಕ್ಕೊಯ್ದು, ದೇವರೆದುರು ನಿಲ್ಲಿಸಿ, ಇವ ನಿಗೆ ನನ್ನ ಬೇತನ್ನು ತಿಳಿಹೇಳಿ ಇವನಿಂದ ಬೇರೆಯಾಗಬೇಕು; ಮತ್ತು ಇವನು ತನ್ನ ಪ್ರೇಮಪಾಶವನ್ನು ನನ್ನ ಮೇಲೆ ಚೆಲ್ಲಿ ನನ್ನನ್ನೇ ತನ್ನ ಸೆರೆಯಾಳಾಗಿ ಮಾಡಿ ಕೊಳ್ಳುವದನ್ನು ಮನದಂದರೆ, ಇವನನ್ನು **ಹೋಸಪಡಿಸಿಯೇ ಹೊರಟುಹೋಗಬೇಕು** ಈ ಲೋಕ ಹಾಗು ಇದರೊಳಗಿನ ಈತನ ಸ್ವಂತದ ಭವಿತವ್ಯ ಇವುಗಳನ್ನು ನಾನು ನನ್ನಲ್ಲಿಂದ ಅವನ ಸ್ವಾಧೀನಪಡಿಸಬೇಕು, ಆ ಮೇಲೆ ಅವನದವನು ನೋಡ್ಯಾನು!

( ೬ )

ಮುತ್ತಿನ ಸಿಂಪುಗಳನ್ನು ತೆರೆಯುವವರಲ್ಲಿ ಒಬ್ಬನಿಗೆ ಅತ್ಯುತ್ತಮ ದುಂಡಗಾದ-ತೇಜಃಪುಂಜವಾದ ಮುತ್ತಿನ ಕಾಳು ದೊರೆತರೆ, ಬೇರೆಯವರಿಗೆ ಒಳಗೆ ಸತ್ತಿದ್ದ ಹುಳವೇ ಸಿಗುತ್ತದೆ! ಅವಶಂತೆಯೇ ನನ್ನ ಚೇಲಾನ ಪ್ರಕಾರವು ದೇವರ ಮನಸ್ಸಿ ನಂತೆ ಆದೀತು. ಆತನ ಬಗ್ಗೆ ನಾನೇಕೆ ಚಿಂತಿಸಬೇಕು? ಈ ವಿಚಾರವನ್ನು ಗಟ್ಟಿಮಾಡಿಕೊಂಡು ನಾನೊಂದು ದಿನ ಅವನನ್ನು ಕುರಿತು:—"ಕುಣಕ್ಯಾ, ನಡೆ; ಬಹು ದಿನಗಳಿಂದ ಮಹಾರಾಷ್ಟ್ರದೊಳಗಿನ ತೀರ್ಥ-ಕ್ಷೇತ್ರಗಳಿಗೆ ಹೋಗಿಲ್ಲ. ಈ ವರ್ಷ ಅತ್ತ ಕಡೆಗೇ ಹೋಗೋಣ" ಎಂದೆನಲು, ಅದನ್ನು ಕೇಳಿ ಕುಣಕ್ಯಾನಿಗೆ ಬಲು ಸಂತೋಷವಾಯಿತು. ಉತ್ತರ ಹಿಂದುಸ್ಥಾನಕ್ಕಿಂತ ಮಹಾರಾಷ್ಟ್ರದ ಮೇಲೆ ಆತನ ಹುಟ್ಟು ಪ್ರೇಮವು ಹೆಚ್ಚಿಗೇಕಿರಬೇಕು? ಅದರ ಕಾರಣವು ಅವನಿಗೆ ಸ್ವಂತಕ್ಕೆ ಗೊತ್ತಿರದಿದ್ದರೂ ನಾನು ತಿಳಿದಿದ್ದೆನಲ್ಲ? ಅದಿರಲಿ. ಆ ಮೇಲೆ ನಾನು ಕುಣಕ್ಯಾ ನೊಡನೆ ಒಂದೊಂದೇ ತೀರ್ಥಕ್ಷೇತ್ರಗಳನ್ನು ಮಾಡುತ್ತ ಕೊಂಕಣದೊಳಗಿನ ಆ ಕುಣಕೇಶ್ವರ ದೇವಾಲಯಕ್ಕೆ ಬಂದು ತಲುಪಿದೆನು. ಶ್ರೀ ಕುಣಕೇಶ್ವರನು ಕುಣಕ್ಯಾ ನನ್ನು ಈ ಮೊದಲು ನನಗೆ ಲಭಿಸಿಕೊಟ್ಟ ದಿನವು ನನಗೆ ಸಂಪೂರ್ಣವಾಗಿ ನೆನಪಿತ್ತು, ಮತ್ತು ಸರಾಸರಿ ಹನ್ನೆರಡು ವರ್ಷಗಳಿಗೆ ಪ್ರತಿಯೊಂದು ಸಂಗತಿಯ ಬಗ್ಗೆ ಒಂದು ಪುಟ್ಟ ಯುಗಾಂತರವಾಗುತ್ತದೆಂದು ನನ್ನ ಅಜ್ಞ ತಿಳುವಳಿಕೆಯಿದ್ದುದರಿಂದ ಸರಿ ಯಾಗಿ ಅದೇ ದಿನವನ್ನು ನೋಡಿ ನಾನು ಶ್ರೀ ಕುಣಕೇಶ್ವರಕ್ಕೆ ಹೋಗಿ ತಲುಪಿದೆನು.

ಬಳಿಕ ನಾವಿಬ್ಬರೂ ಕೂಡಿ ಅಂದು ಬೆಳಿಗ್ಗೆ ಸಮುದ್ರ ಸ್ನಾನಕ್ಕೆ ತೆರಳಿದೆವು. ಆಗ ಹನ್ನೆರಡು ವರ್ಷಗಳ ಮುಂಚೆ ಕುಣಕ್ಯಾ ಪೋರನು ಆ ಉಸುಗಿನ ಪ್ರದೇಶದಲ್ಲಿ ಎಲ್ಲಿ ತನ್ನ ತಾಯಿಯನ್ನು ಕೂಗುತ್ತ ಅಳುತ್ತ ನಿಂತಿದ್ದನೋ, ಅದೇ ಸ್ಥಳವನ್ನೇ

ನಾನಿಂದು ಸ್ನಾನಕ್ಕಾಗಿ ಯೋಜಿಸಿದ್ದೆನು; ಮತ್ತು ಸ್ನಾನಕ್ಕೆಂದು ಇಬ್ಬರೂ ಕೌಪೀನ ಧರಿಸಿ ನಿಂತುಕೊಂಡಾಗ ನಾನು ಕ್ಷಣಕಾಲವೇ ಸ್ತಂಭಿತನಾದೆನು; ಸಮುದ್ರದ ಕಡೆಗೆ ಟಕಮಕವೆಂದು ನಿರೀಕ್ಷಿಸತೊಡಗಿದೆನು. ಆಗ ನನ್ನ ಮನಸ್ಸಿನಲ್ಲೊಂದು ಹುಚ್ಚು ಆಶೆಯುದಿಸಿತೇನಂದರೆ:—ಕುಣಕ್ಯಾನನ್ನು ಕಂಡು ಆತನ ತಾಯಿಯು ಸಮುದ್ರ ದೊಳಗಿಂದ ಮೇಲಕ್ಕೆ ಬಂದು ಅವನಿಗೆ ಭೆಟ್ಟಿಯಾದಾಳೆಂದು, ಮತ್ತು ಹಾಗಾಯಿ ತೆಂದರೆ ಅವನನ್ನು ಅವಳಿಗೊಪ್ಪಿಸುವಾಗ ನನಗೆಷ್ಟು ಆನಂದವಾದೀತು? ಆದರೆ ಆ ನನ್ನ ಆಶೆಯು ಹುಚ್ಚುಮುಬ್ಬಿನವೇ ಸರಿ. ಅದು ಸಫಲವಾಗುವ ಬಗೆ ಹೇಗೆ? ನನಗೆ ಕ್ಷಣಕಾಲ ಮೋಹವಾವರಿಸಿತೇನಂದರೆ, ನಾವಿಬ್ಬರೂ ಹಾಗೆ ಆ ಉಸುಗಿನ ಬೈಲಲ್ಲಿರುವಾಗಲೇ ಕುಣಿಕ್ಯಾನಿಗೆ ಅವನ ಪೂರ್ವವೃತ್ತ ತಿಳಿಸಬೇಕೆಂದು; ಆದರೆ ಹಾಗೆ ಮಾಡುವದರಿಂದ ಕದಾಚಿತ್ ಅವನಿಗೆ ದುಃಖವಾದೀತು. ಆತನ ಉತ್ಸಾಹೀ ಮನಸ್ಸಿನ ಮೇಲೆ ಉದಾಸೀನತೆಯ ಪಟಲವು ನಿರಂತರವಾಗಿ ಕುಳಿತೀತು, ಎಂಬ ಅಂಜಿಕೆಯಿಂದ ನಾನು ಮನಸ್ಸು ಬಿಗಿಹಿಡಿದೆನು. ಕುಣಕ್ಯಾನಿಗೆ ಏನಾದರೂ ಅಕಲ್ಪಿತ ನೆನಪಾಗಿ ಅವನು ಪೂರ್ವದ ನೆನಪಿನಿಂದ ಅಕ್ಕಪಕ್ಕಗಳಲ್ಲಿ ಟಕಮಕ ನೋಡುತ್ತಿ ರುವನೆಂದು ನನಗೆ ಕ್ಷಣಕಾಲವೇ ಭಾಸವಾಯಿತು, ಆದರೆ ಕೊನೆಗೆ ಅದೆಲ್ಲ ನನ್ನ ಭ್ರಮವೇ ಎಂದು ಖಾತ್ರಿಯಾಯಿತು.

ಕುಣಕ್ಯಾ ದಿಟ್ಟತನದಿಂದ ಸಮುದ್ರದಲ್ಲಿ ಹೊಕ್ಕನು, ಹಾಗು ಸಾಕಷ್ಟು ಈಸಿ ದಂಡೆಗೆ ಬಂದು ತನ್ನ ವಸ್ತ್ರಾಂತರ ಮಾಡಿದನು ಅಂದು ನನ್ನಿಂದ ಹೆಚ್ಚು ವೇಳ ಸ್ನಾನ ಮಾಡಲಾಗಲಿಲ್ಲ. ಆ ಮೇಲೆ ನಾವಿಬ್ಬರೂ ಅಲ್ಲಿಂದ ಎದ್ದು ಮೇಲಕ್ಕೆ ದೇವ ಸ್ಥಾನಕ್ಕೆ ಬಂದು, ದೇವರ ದರ್ಶನ ಪಡೆದೆವು, ಮತ್ತು ಸಭಾಮಂಟಪದೊಳಗಿನ ಒಂದು ಮೂಲೆಯಲ್ಲಿ ತಳವೂರಿದೆವು.

ಮಧ್ಯಾಹ್ನದ ಸಮಯ. ಆಗ ನಿತ್ಯಕ್ರಮದಂತೆ ನಮ್ಮಿಬ್ಬರ ಸಲುವಾಗಿ ಭಿಕ್ಷೆ ಬೇಡಲಿಕ್ಕೆಂದು ಕುಣಕ್ಯಾನೇ ಊರೊಳಗೆ ಹೋದನು, ಹಾಗು ನಾಲ್ಕೆಂಟು ಮನೆ ಗಳಲ್ಲಿ ಬೇಡಿ ತಂದ ಭಿಕ್ಷೆಯನ್ನು ನಾವು ಹೊರಗಿನದೊಂದು ಗಿಡದ ಕೆಳಗೆ ಬೆಯ್ಯಿಸಿ ತಿಂದು, ಮರಳಿ ದೇವಸ್ಥಾನದೊಳಗಿನ ಸಭಾಮಂಟಪಕ್ಕೆ ಬಂದು ಕುಳಿತೆವು.

ಇಷ್ಟರಲ್ಲಿ ಯಾರೋ ಇಬ್ಬರು ಗೃಹಸ್ಥರು ದೇವದರ್ಶನ ಮಾಡಿಕೊಂಡು, ಆ ಸಭಾಮಂಟಪದೊಳಗಿನ ತೆರವಿದ್ದ ಸ್ಥಳದಲ್ಲಿ ತಮ್ಮ ಜಮಖಾನೆಯನ್ನು ಹಾಸಿ ಕೊಂಡು ಮಾತನಾಡುತ್ತ ಕುಳಿತರು. ಅವರುಗಳೊಡನೆ ಒಂದು ಹತ್ತು ವರ್ಷದ ಹುಡುಗೆಯಿದ್ದಿತು. ಅದು ಅವರೊಳಗಿನವನೊಬ್ಬನ ಮಗಳಿರಬೇಕು. ಅವಳ ತಂದೆ ಯು ತನ್ನ ಗೆಳೆಯನೊಡನೆ ಮಾತಾಡುತ್ತಿರುವಾಗ ಬಾಲಸ್ವಭಾವದಂತೆ ಆ ಹುಡುಗಿ

ಯು ಆ ದೇವಮಂದಿರದ ಭಿನ್ನ ಭಿನ್ನ ಭಾಗಗಳಲ್ಲಿ ಅಡ್ಡಾಡಿತು, ಹಾಗು ಆ ಸಭಾಮಂಟಪದ ಮೂಲೆಯಲ್ಲಿ ನಾನೂ ಕುಣಕ್ಯಾನೂ ಕುಳಿತಿದ್ದಲ್ಲಿಗೆ ಬಂದೊಡನೆಯೇ ಕೊಂಚ ವಿಪರೀತ ವೇಷದ ನಮ್ಮಿಬ್ಬ ಬೈರಾಗಿಗಳನ್ನು ಕಂಡು ಆಕೆ ಬೆಚ್ಚಿಬಿದ್ದಳು; ಆದರೆ ಅಂಜದೆ ತುಸ ದೂರದಲ್ಲಿಯೇ ನಿಂತುಕೊಂಡು ನಮ್ಮನ್ನು ನಿರಕಿಸಿ ನೋಡ ಹತ್ತಿದಳು ಅದನ್ನು ಕಂಡು ನಾನು ಒಳ್ಳೇ ಪ್ರೇಮದಿಂದಲೂ ಬಹು ಮೆತ್ತನ್ನ ನುಡಿಗಳಿಂದಲೂ ಅವಳನ್ನು ನನ್ನ ಬಳಿಗೆ ಕರೆದೆನು, ಹಾಗು ನನ್ನ ಬಳಿಯಲ್ಲಿದ್ದ ಒಂದು ಹಣ್ಣು ಮತ್ತು ಎರಡು-ಮೂರು ಉತ್ತತ್ತಿಗಳನ್ನು ಅವಳ ಕೈಗಿತ್ತೆನು. ಆಕೆಯು ಅವನ್ನು ಸ್ವೀಕರಿಸಿದಳು ಕುಣಕ್ಯಾ ತನ್ನ ಕೊರಳಲ್ಲಿಯದೊಂದು ಚಿಕ್ಕ ರುದ್ರಾಕ್ಷಿಯ ಮಾಲೆಯನ್ನು ಅವಳಿಗಿತ್ತನು. ಅದನ್ನು ಕಂಡು ಅವಳಿಗೆ ಚೋಜಿಗವೆನಿಸಲು, ಅವಳು ಅದನ್ನು ಕೈಯಲ್ಲಿ ಹಿಡಿದು ನಿರಕಿಸುತ್ತ ನಿಂತಳು.

ಆವರಿಬ್ಬರೂ ಗೃಹಸ್ಥರು ಅದನ್ನೆಲ್ಲ ಕೌತುಕದಿಂದ ನೋಡುತ್ತಿದ್ದರು. ಆವರೊಳಗಿನವನೊಬ್ಬನು:—"ಬೈರಾಗಿಗಳೇ, ಈ ಹುಡುಗಿಯು ನಿಮ್ಮನ್ನು ಕಂಡು ಅಂಜಲಿಲ್ಲವಲ್ಲ?" ಎಂದೆನಲು, ನಾನವನಿಗೆ:—"ಇವಳು ಹಾಗೇನಾದರೂ ಅಂಜಿದ್ದರೆ ನನಗೆ ಕೆಡಕೆನಿಸುತ್ತಿತ್ತು. ಚಿಕ್ಕ ಬಾಲ-ಬಾಲಿಕೆಯರು ನಮ್ಮನ್ನು ಕಂಡು ಅಂಜುತ್ತಾರೆಂಬದು ಯಾವ ಯಾವಾಗ ನನ್ನ ಅನುಭಕ್ಕೆ ಬರುವದೋ, ಆಗ ನನಗೆ ಅನಿಸಹತ್ತುತ್ತದೇನಂದರೆ, ಆಚಾರಧರ್ಮವೆಂದು ನಾವು ಗೋಸಾವಿ-ಬೈರಾಗಿಗಳು ಗಡ್ಡ-ಮೀಸೆಗಳನ್ನು ಕಾಯಿಸುತ್ತೇವೆಂಬದು ದೇವರಿಗೆ ಸಮ್ಮತವಾದುದಲ್ಲ. ಆದುದರಿಂದ ನಾವವುಗಳನ್ನೆಲ್ಲ ಬೋಳಿಸಿಬಿಡಬೇಕು, ಆದರೆ ನಿಮ್ಮ ಹುಡುಗಿ ದಿಟ್ಟಳಿದ್ದಾಳೆ, ಮತ್ತು ಸುದೈವದಿಂದ ನನ್ನೀ ಚೇಲಾನಿಗಿನ್ನೂ ಗಡ್ಡ-ಮೀಸೆಗಳು ಹುಟ್ಟಿರುವದಿಲ್ಲ, ಅಲ್ಲದೆ ಇವನಿಗೂ ಸಣ್ಣ ಹುಡುಗರ ಅಭಿರುಚಿಯು ಹೆಚ್ಚಾಗಿದೆ" ಎಂದು ಹೇಳಿ, ನಾನು ಕುಣಕ್ಯಾನನ್ನುದ್ದೇಶಿಸಿ:—'ಬಚ್ಚ್ಯಾ, ಹುಡುಗಿ ಚಾಲಾಕಳೆಂದು ತೋರುತ್ತದೆ. ಹೋಗು, ಇವಳನ್ನು ದೇವಸ್ಥಾನದ ಪ್ರಾಕಾರದಲ್ಲೆಲ್ಲ ಅಡ್ಡಾಡಿಸಿಕೊಂಡು ಬಾ ಗಿಡದ ಮೇಲೆಲ್ಲಾದರೂ ಹಣ್ಣು ಕಂಡರೆ ಇವಳಿಗದನ್ನು ಹರಿದು ಕೊಡು."

ನನ್ನ ಆ ಆಜ್ಞೆ ದೊರೆತೊಡನೆಯೇ "ತಂಗೀ, ಬರುತ್ತಿದ್ದರೆ ಬಾ. ಅತ್ತ ಅಡ್ಡಾಡೋಣ" ಎಂದು ಕುಣಕ್ಯಾ ಮುಂದಾಗಿ ಆಕೆಯ ಕೈ ಹಿಡಿದುಕೊಂಡು ಆ ಸಭಾಮಂಟಪದಿಂದಿಳಿದು ಹೋದನು. ಆ ಇಬ್ಬರು ಗೃಹಸ್ಥರಿಗಾದರೂ ಆ ಮಾತು ರುಚಿಸಿತು. ಹೆಣ್ಣುಜಾತಿಯದು! ಅವರಿಬ್ಬರು ಮಾತಾಡುತ್ತ ಕುಳಿತಿರುವಾಗ ಆಕೆ ಬಗೆಬಗೆಯ ಪ್ರಶ್ನೆ ಕೇಳಿ ಅವರ ಸಂಭಾಷಣಕ್ಕಡ್ಡಿಯನ್ನುಂಟುಮಾಡುವ ಸಂಭವ ಹೆಚ್ಚು. ಅಂತೆಯೇ ಆಕೆ ತುಸ ದೂರವಿದ್ದದ್ದೇ ವಿಹಿತವೆಂದು ಆವರಿಗಾಗ ಅನಿಸಿರಬೇಕು.

ಹೇಗೆಯೇ ಇರಲಿ. ಅವಳ ಬಗ್ಗೆ ಯೋಚಿಸಬೇಕಾಗಿಲ್ಲ ಎಂಬ ನಂಬಿಗೆಯಿಂದ ಅವರಿಬ್ಬರೂ ಆಗ ಬಿಚ್ಚು ಮನಸ್ಸಿನಿಂದ ಪರಸ್ಪರರೊಡನೆ ಮಾತಾಡಹತ್ತಿದರು. ಅವರ ಸಂಭಾಷಣೆಯನ್ನು ನಾನು ಕೇಳಿಕೊಂಡೇನೆಂಬ ಸಂದೇಹವು ಅವರಿಗುಂಟಾಗಲಿಲ್ಲ. ಯಾಕಂದರೆ ಮೂರನೆಯವನು ಕೇಳಿಕೊಳ್ಳುವಂತಹ ಗುಪ್ತ ಸಂಗತಿ ಅವರ ಸಂಭಾಷಣದಲ್ಲಿರಲಿಕ್ಕಿಲ್ಲ. ಅಲ್ಲದೆ ಪ್ರತ್ಯಕ್ಷ ಅವರ ಚಿಕ್ಕ ಬಾಲಿಕೆಯೇ ನನ್ನ ಮೇಲೂ ನನ್ನ ಚೇಲಾನ ಮೇಲೂ ನಂಬಿಗೆ ಇಟ್ಟಿರಲು, ಆ ಸಂಭಾಷಣದ ಪ್ರಸಂಗದಲ್ಲಿ ನನ್ನನ್ನು ವಂಚಿಸಬೇಕೆಂದು ಅವರಿಗೂ ಆಗ ಅನಿಸಿರಲಿಕ್ಕಿಲ್ಲ. ಆ ಗೃಹಸ್ಥರ ಹೆಸರುಗಳು ನನಗೆ ಗೊತ್ತಿರಲಿಕ್ಕೆ ಶಕ್ಯವಿರಲಿಲ್ಲ; ಅಲ್ಲವೆ ನನಗಾದರೂ ಅವುಗಳನ್ನು ಕೇಳಿಕೊಂಡೇನು ಮಾಡಬೇಕಾಗಿತ್ತು? ಆದರೆ ನಾನು ಆ ಭಾಷಣವನ್ನು ಕೇಳಿಕೇಳಿದ ಹಾಗೆಲ್ಲ ನನಗದರಲ್ಲಿ ಕೌತುಕವುಂಟಾಯಿತು. ಅಂತೆಯೇ ಅದರ ಸಾರಾಂಶವನ್ನು ಸಂಕ್ಷಿಪ್ತವಾಗಿ ಇಲ್ಲಿ ಕೊಡುವೆನು.

( ೭ )

ಆ ಇಬ್ಬರು ಗೃಹಸ್ಥರು ಪರಮ ಮಿತ್ರರಿದ್ದರೆಂಬುದು ನನಗೆ ಕಂಡು ಬಂದಿತು ಒಬ್ಬನು ತೇಜಃಪುಂಜನು; ಆದರೆ ಕೃಶ ದೇಹದವನಾಗಿದ್ದನು. ಅವನು ತನ್ನ ಮೈಮೇಲೊಂದು ಪಂಜೆಯ ಹೊರತು ಬೇರೆ ಯಾವ ವಸ್ತ್ರಪ್ರಾವರಣಗಳನ್ನೂ ಧರಿಸಿರಲಿಲ್ಲ. ಅವನ ಒಂದು ಕೈಯಲ್ಲಿ ಗಡುತರವಾದ ಕೋಲಿದ್ದಿತು; ಹಾಗು ಇನ್ನೊಂದು ಕೈಯಲ್ಲಿ ತಂಬಿಗೆಯ ಆಕಾರದ ಹಿತ್ತಾಳಿಯ ಲೋಟಾ ಅಥವಾ ಕಮಂಡಲುವಿತ್ತು. ಅವನು ತನ್ನ ಎರಡೂ ಹುಬ್ಬುಗಳ ನಡುವೆ ಶಕ್ತಿಯುಪಾಸಕರಂತೆ ಸಿಂಧೂರದ ಚುಕ್ಕೆಯನ್ನಿಟ್ಟುಕೊಂಡಿದ್ದನು. ಅವನು ಪ್ರತ್ಯಕ್ಷ ಜಡೆ ಇಲ್ಲವೆ ಗಡ್ಡಗಳನ್ನು ಬಿಟ್ಟಿರಲಿಲ್ಲ; ಆದರೂ ಮೀಸೆ-ಗಡ್ಡಗಳು ಹೆಚ್ಚಾಗಿ ಬೆಳೆದದ್ದರಿಂದ ಅವನು ತನ್ನ ಕೂದಲುಗಳ ಬಗ್ಗೆ ಕೊಂಚವೂ ಆಸ್ಥೆ ವಹಿಸುತ್ತಿರಲಿಲ್ಲವೆಂದು ತೋರಿತು. ಅವನ ಅರ್ಧಮರ್ಧ ಕೂದಲುಗಳು ನೆರೆತುಹೋಗಿದ್ದವು, ಆದರೆ ಅದಕ್ಕೆ ವಯೋಮಾನಕ್ಕಿಂತ ದುಃಖ ಇಲ್ಲವೆ ಚಿಂತೆ ಇಂತಹದೇ ಯಾವುದೊಂದು ಕಾರಣವು ಪ್ರಭಾವಿಯಾಗಿರಬೇಕು. ಅವನು ಹೆಚ್ಚೆಂದರೆ ನಾಲ್ವತ್ತರ ಒಳಹೊರಗಿನವನಿರಬೇಕು. ಆದರೂ ಮುಂದೆ ಇಪ್ಪತ್ತು ವರ್ಷಗಳಿಗೆ ಬೀಳಬಹುದಾದ ನೀರಿಗೆಗಳು ಆತನ ಮುಖಚರ್ಯೆಯ ಮೇಲೆ ಅಕಾಲದಲ್ಲೇ ಕಾಣಿಸತೊಡಗಿದ್ದವು. ಆತನು ಯಾವುದೊಂದು ಬಗೆಯ ಯೋಗ ಸಾಧನದ, ತಪಸ್ಸಿನ, ದೇಹದಂಡನದ ಮಾರ್ಗವನ್ನವಲಂಬಿಸಿರಬೇಕು; ಮತ್ತು ಅದರಿಂದಲೇ ಆತನ ತೇಜವು ಅಕಾಲದಲ್ಲುಂಟಾಗಲಿರುವ ವೃದ್ಧಾಪ್ಯದ ಎಲ್ಲ ಚಿಹ್ನಗಳ ಮೇಲೆ ಮಿನಗದಿರುತ್ತಿರಲಿಲ್ಲ. ಆತನ ಕಣ್ಣಲ್ಲಿ ವಿಶೇಷ ಬಗೆಯ ಗಂಭೀರ ವೃತ್ತಿಯಿದ್ದು, ಆತನು ಶೀರ ಸ್ವಲ್ಪ, ಆಲಿಸಿ ಮತ್ತು ತಡೆತಡೆದು ಮಾತಾಡುತ್ತಿದ್ದನು.

ಎರಡನೇ ಗೃಹಸ್ಥನು ಇವನಿಗಿಂತ ಕೇವಲ ಭಿನ್ನವಾಗಿದ್ದನು. ಅವನೂ ಮಧ್ಯಮ ವಯಸ್ಕನು. ಅವನ ಮೋರೆಯ ಮೇಲೂ ತೇಜವಿದ್ದಿತು; ಆದರದು ನಿರಕ್ತಿವರ್ಗದೊಳಗಿನ ದೇಹದಂಡಣದಂಥ ತೇಜವಾಗಿರದೆ, ಪ್ರವೃತ್ತಿ ಮಾರ್ಗದೊಳಗಿನ ಪ್ರಾಯಸ್ಥರದ್ದಾಗಿತ್ತು. ಅವನು ಇತ್ತ ಕೊಂಕಣಕ್ಕೆ ಬಂದಿದ್ದರೂ ಆತನು ತನ್ನ ಶಿಪಾಯಿಗಿರಿಯ ಬ್ರಾಹ್ಮಣಶಾಹೀ ಉಡುಪನ್ನೇ ಶ್ಯೈಮೇಲೆ ಧರಿಸಿಕೊಂಡಿದ್ದನು. ಆ ದೇವರಗುಡಿಯೊಳಗಿನ ಮಂಟಪದಲ್ಲಿ ಕುಳಿತು ತನ್ನ ಮಿತ್ರನೊಡನೆ ಮಾತನಾಡುತ್ತಿದ್ದರೂ ಬಿಗುವಾದ ಚಣ್ಣದ ಮೂಲಕ ಅವನು ವೀರವೊಂಡೆಯಿಂದಲೇ ಕುಳಿತಿದ್ದನು, ಹಾಗು ಅವನ ನಡಕಟ್ಟಿನೊಳಗಿನ ಕತ್ತಿಯು ಒರೆಯು ನೆಲದ ಮೇಲೆ ಜೋತು ಬಿದ್ದಿತ್ತು. ಅವನ ಮಾತಿನಲ್ಲಿ ಆವೇಶ, ಹುಮ್ಮಸ್ಸು, ಉತ್ಸಾಹಗಳು ಸಂಪೂರ್ಣವಾಗಿ ತುಂಬಿದ್ದು, ಕೆಲಸದ ತಗಾವೆಯು ಮೂಲಕ ಮಾತಾಡಲೂ ಕೂಡ ಸಮಯವಿಲ್ಲದವರಂತೆ, ಅವನ ಹರಕುಮುರುಕಾದ ವಾಕ್ಯಗಳನ್ನು ಅವಸರವಸರದಿಂದಲೇ ನುಡಿಯುತ್ತಿದ್ದನು. ಈ ಬಗೆಯಾಗಿ ವೈರಾಗ್ಯವು ಆವರಿಸಿದವನೊಬ್ಬ ಹಾಗು ಪ್ರಪಂಚದಲ್ಲಿ ಇನ್ನೂ ಹೆಚ್ಚು ಆಕ್ರಮಿಸಲಿಚ್ಛಿಸುವ ಮತ್ತು ಪ್ರವೃತ್ತಿಗೆ ಸನ್ಮುಖನಾಗಿರುವ ಇನ್ನೊಬ್ಬ ಹೀಗೆ ಇಬ್ಬಗೆಯ ಮನೋವೃತ್ತಿಯವರಿದ್ದರೂ ಮಿತ್ರಪ್ರೇಮದ ಮೂಲಕ ಅವರ ವೃತ್ತಿಗಳ ಮಧುರ ಮಿಲನವಾಗಿತ್ತು.

ಶಿಪಾಯಿಯ ವೇಷದವನು :—"ಆದಿರಲಿ ಶಾಮರಾವ, ಇನ್ನು ನಾನು ಇಲ್ಲಿಂದಲೇ ನಿನ್ನಿಂದ ರಜೆ ಪಡೆಯಬೇಕು. ಇನ್ನೂ ನಾಲ್ಕು ದಿನ ನಿನ್ನ ಜೊತೆಯಲ್ಲಿ ಕಳಯಲು ದೊರಕಿದ್ದರೆ ಬೇಕಾಗಿತ್ತು. ಒಂದು ವೇಳೆ ಆ ಅವಧಿಯಲ್ಲಿ ನನಗೆ ನಿತ್ಯಕ್ರಮದಂತೆ ಇಬ್ಬರು-ಮೂವರು ಕೊಂಕಣದೊಳಗಿನ ತರುಣ ಪ್ರತಿಭಾಶಾಲಿ ಹುಡುಗರನ್ನು ನನ್ನ ಜೊತೆಗೆ ದೇಶದ ಮೇಲೆ ಒಯ್ಯಲು ದೊರೆಕಿಸಬಹುದಿತ್ತು; ಆದರೆ ಮೊದಲೇ ನಿರ್ಧರಿಸಿಟ್ಟ ಕೆಲಸವು ಕಣ್ಣಿಗೆ ಕಾಣಿಸಿತೆಂದರೆ, ಪ್ರೀತಿಯ ಕೊಂಕಣದೊಳಗಿನ ನನ್ನ ಬೀಡನ್ನೂ ನಾನು ಬೇಗನೆ ಆವರಿಸಿಕೊಳ್ಳಬೇಕಾಗುತ್ತದೆ."

ಅದಕ್ಕೆ ಶಾಮರಾವ :—"ಇತ್ತ ಕಡೆಯ ಕೊಂಕಣದ ಹುಡುಗರನ್ನು ದೇಶದ ಮೇಲೊಯ್ದು ಅವರಿಗೆ ಮಹತ್ವಾಕಾಂಕ್ಷೆಯ ಸೆಳವನ್ನೇ ಹಚ್ಚಿಕೊಡುವದಲ್ಲವೆ? ಕೊಂಕಣದಲ್ಲಿ ಪರಾಕ್ರಮಕ್ಕೆ ಇಂಬು ಇಲ್ಲವೆಂಬುದೇ ಒಟ್ಟಿನಲ್ಲಿ ನಿನ್ನ ಮತವಾಗಿರುವಂತೆ ತೋರುತ್ತದಲ್ಲವೇ ಪಂಡಿತರಾವ?"

ಪಂಡಿತರಾವ :—"ಪರಾಕ್ರಮಕ್ಕೆ ಅವಶ್ಯವಾಗಿರುವ ಬುದ್ಧಿಯು ಕೊಂಕಣ ನಾಡಿನಲ್ಲಿ ಬೇಕಾದಷ್ಟಿದೆ; ಆದರದು ಪ್ರಕಟ ಮತ್ತು ಫಲದ್ರೂಪವಾಗಲು ಬೇಕಾಗುವ ಕ್ಷೇತ್ರವು ಈ ಕೊಂಕಣದಲ್ಲಿಲ್ಲ. ಅದಕ್ಕೇನು ಮಾಡುವದು? ಕಳೆದ ಐವತ್ತು

ವರ್ಷಗಳ ಎರಡು ಪೀಳಿಗೆಗಳಲ್ಲಿ ಈ ಅನುಭವವಿದೆ. ಇತ್ತಣ ಪೋರರು ದೇಶದ ಮೇಲೆ ಹೋದರೆಂದರೆ, ಅವರ ದೃಷ್ಟಿಯು ವಿಸ್ತಾರ ಹೊಂದುತ್ತದೆ. ರಾಜ್ಯಕಾರ ಭಾರ ಪ್ರಪಂಚದೊಳಗಿನ ಒಳಿತು-ಕೆಡಕುಗಳಾದ ಎಲ್ಲ ಸಂಗತಿಗಳ ಬಗ್ಗೆ ಅವರು ಪರಿಚಿತರಾಗುತ್ತಾರೆ, ಮತ್ತು ಕೈಯಲ್ಲಿ ಮೇಣ ತಕ್ಕೊಂಡು ಬೇಕಾದ ಮಾಟದ ಚಿತ್ರ ವನ್ನು ಕೈಯಿಂದ ಹೇಗೆ ನಿರ್ಮಿಸಬೇಕೋ, ಅದರಂತೆಯೇ ಅವನ ಬುದ್ಧಿಗನುಸಾರ ಹಾಗು ಅಷ್ಟು ಪರಾಕ್ರಮ ಮಾಡಲಿಕ್ಕೆ ಅವನಿಗೆ ದೇಶದ ಮೇಲೆ ಸಾಕಷ್ಟು ಅವಕಾಶ ದೊರೆಯುತ್ತದೆ. ಗತ ಎರಡು ಪೀಳಿಗೆಗಳಲ್ಲಿ ಕೊಂಕಣದೊಳಗಿಂದ ನಾಲ್ವತ್ತು-ಐವತ್ತು ಜನ 'ರಂಕ'ರು ದೇಶಕ್ಕೆ ಹೋಗಿ 'ರಾವ'ರಾಗಿರುವದನ್ನು ನಾನು ನೋಡಿರುತ್ತೇನೆ, ಮತ್ತು ನೀನಾದರೂ ಕೇಳಿರಬಹುದು. ಕೊಂಕಣವು ನಮ್ಮ ಮಾತೃಭೂಮಿ. ಅದು ನಮಗೆ ಕುಶಾಗ್ರಬುದ್ಧಿಯನ್ನಿತ್ತು ಋಣಿಯನ್ನಾಗಿ ಮಾಡಿದೆ. ಅದಕ್ಕೆ ಪ್ರತ್ಯುಪಕಾರ ಮಾಡುವ ಅಥವಾ ಅದರ ಋಣ ತೀರಿಸುವ ಮಾರ್ಗವು ನನ ಗದೊಂದೇ ಕಾಣಿಸುತ್ತದೆ. ಅದೇನಂದರೆ, ಶಕ್ಯವಾದಷ್ಟು ಹೆಚ್ಚು ಮಂದಿ ಕೊಂಕ ಣದ ಪೋರರನ್ನು ದೇಶದ ಮೇಲೊಯ್ದು, ಅವರನ್ನು ಉಚ್ಛ್ರಾಯ ಹೊಂದಬಹು ದಾದ ದಾರಿಗೆ ಹಚ್ಚಬೇಕು, ಹಾಗು ಅವರು ದೊಡ್ಡವರಾದ ಮೇಲೆ ಅವರುಗಳಿಂದ ಕೊಂಕಣದ ಹೆಸರು ಪ್ರಸಿದ್ಧವಾಗಬೇಕು. ದೇವರು ನನಗೆ ಸ್ವಂತಕ್ಕೆ ಗಂಡು ಮಗು ಕೊಟ್ಟಿಲ್ಲ; ಕೇವಲ ಇದೊಂದೇ ಹೆಣ್ಣು ಕೊಟ್ಟಿರುತ್ತಾನೆ. ಪ್ರತ್ಯಕ್ಷ ನನ್ನ ವಂಶಜ ರಿಂದ ದೇಶದ ಮೇಲೆ ಕೊಂಕಣದ ಹೆಸರು ಹೆಚ್ಚಿಸುವದು ನನ್ನಿಂದ ಶಕ್ಯವಿಲ್ಲ, ಇನ್ನು ನಿನ್ನನ್ನು ನೋಡಿದರೆ ನೀನೂ ಹೀಗೆಯೇ ಇರುತ್ತೀ!"

ಶಾಮರಾವ:—"ಅಹುದು; ನೀನನ್ನುವದು ನಿಜ. ನಿನಗೆ ಹೆಣ್ಣಾದರೂ ಇದೆ; ಆದರೆ ನಾನು ಚಿಕ್ಕಂದಿನಿಂದಲೇ ಬ್ರಹ್ಮಚರ್ಯವ್ರತ ಸ್ವೀಕರಿಸಿದ್ದರಿಂದ ಲಗ್ನ ಮಾಡಿಕೊಳ್ಳಲಿಲ್ಲ; ಮತ್ತು ಬೇರೆ ಗೋತ್ರದಲ್ಲೇ ಏಕಾಗಲೊಲ್ಲಳು, ನನ್ನ ಹಿರಿಯರ ವಂಶವನ್ನು ಮುಂದರಿಸುವಂತಹ ಭಗಿನಿಯೊಬ್ಬಳು ನನಗಿದ್ದಳು, ಆದರೆ ಅತ್ತ ಣಿಂದಲೂ ನಿರಾಶೆಯಾಗುವ ಪ್ರಸಂಗ ಬಂದಿದೆ."

ಪಂಡಿತರಾಯನು ಉತ್ಸುಕತೆಯಿಂದ:—"ಅದೇನಂದೆ? ಇತ್ತೀಚೆಗೆ ಈ ಕೊಂಕಣದಲ್ಲಿ ನಿನ್ನ-ನನ್ನ ಭೆಟ್ಟಿಯು ಅದೆಷ್ಟೋ ದಿನಗಳಲ್ಲಿ ಆಗಿರುವದಿಲ್ಲ. ಯಾರ ದಾದರೂ ಬಾಲ್ಯದೊಳಗಿನ ಪ್ರೇಮವು ಹೆಚ್ಚು ದೃಢವಾಗಿರುತ್ತದೆಂದೇ ಕೇವಲ ನನ್ನ ನಿನ್ನಲ್ಲಿ ಇಷ್ಟು ದಿನಗಳವರೆಗೆ ಅದು ಉಳಿದಿದೆ; ಆದರೆ ನಿನ್ನ ಕಡೆಯ ಯಾವ ಸಂಗ ತಿಯೂ ಎಷ್ಟೋ ವರ್ಷಗಳಲ್ಲಿ ನನಗೆ ತಿಳಿದಿಲ್ಲ. ನಿನ್ನ ಭಗಿನಿಯಿಂದ ಬೆಳೆಯಬಹು ದಾದ ನಿನ್ನ ವಂಶವು ಕುಂದಿತೇ? ಅದು ಹೇಗೆ?"

ಶಾಮರಾವ:—"ಅದೊಂದು ಬಹು ದುಃಖದ ಮತ್ತು ಅದ್ಭುತವಾದಂಥ ಕಥೆಯೇ ಆಗಿದೆ. ಇಂದಿಗೆ ಹೆಚ್ಚು-ಕಡಿಮೆ ಹನ್ನೆರಡು ವರ್ಷಗಳಾಗಿರಬಹುದು........" ಶಾಮರಾಯನು ಮತ್ತೆ ನೆನೆಸಿಕೊಂಡು:—"ಹೆಚ್ಚು-ಕಡಿಮೆಯೇಕೆ, ಇಂದಿಗೆ ಸರಿಯಾಗಿ ಹನ್ನೆರಡು ವರ್ಷಗಳ ಮುಂಚಿನ ಕಥೆಯಿದು. ಈ ದೇವಾಲಯದ ಕೆಳಗಿನ ಮಗ್ಗಲಿಗೆ ನನ್ನ ಭಗಿನಿಯು ತನ್ನ ಎರಡು-ಮೂರು ವರ್ಷಗಳ ಚಿಕ್ಕ ಮಗುವಿನೊಡನೆ ಅಂದಿನ ಅರ್ಧೋದಯ ಪರ್ವದ ನಿಮಿತ್ತವಾಗಿ ಸಮುದ್ರ ಸ್ನಾನಕ್ಕೆ ಇಲ್ಲಿಗೆ ಬಂದಿದ್ದಳು; ಹಾಗು ದುರ್ದೈವದಿಂದ ಅವರಿಬ್ಬರೂ ಒಂದು ದೊಡ್ಡ ತೆರೆಯೊಡನೆ ಸಮುದ್ರದಲ್ಲಿ ಮಾಯವಾಗಿ ಬಿಟ್ಟರು!"

ಈ ನುಡಿಗಳು ನನ್ನ ಕಿವಿಗೆ ಬಿದ್ದೊಡನೆಯೇ ವಿದ್ಯುತ್ತಿನ ಪೆಟ್ಟಾದಂತೆ ನನ್ನ ಮನಸ್ಸಿಗೆ ಒಮ್ಮೆಲೆ ಧಕ್ಕೆಯಾಯಿತು, ಆ ಪೆಟ್ಟಿನ ಭರದಲ್ಲಿ:—"ಛೇ-ಛೇ, ಹಾಗಲ್ಲ. ನೀವು ಹೇಳುವದು ಸುಳ್ಳು. ಆ ತಾಯಿಯು ಸಮುದ್ರದಲ್ಲಿ ಮುಳುಗಿರಬಹುದು; ಆದರೆ ಹುಡುಗನು ಸಾಯಲಿಲ್ಲ. ಅಕೋ, ಅಲ್ಲಿ ನೋಡಿರಿ. ಅತ್ತ ನಿಮ್ಮ ಹುಡುಗಿಯನ್ನು ಆಡ್ಡಾಡಿಸಿಕೊಂಡು ಬರಲು ಹೋಗಿರುವನು" ಎಂಬ ನುಡಿಗಳು ತೀರ ನನ್ನ ತುಟಿಯ ಮೇಲೆ ಬಂದಿದ್ದವು, ಆದರೆ ಅಷ್ಟರಲ್ಲಿ ನನ್ನ ಮನಸ್ಸು ಅವುಗಳನ್ನು ಹಿಂದೆ ಜಗ್ಗಿ, ನನಗೆ ಹೇಳಿತೇನಂದರೆ:—"ಎಲೋ, ನೀನು ಹೇಳಿ-ಕೇಳಿ ಬಾವಾ-ಬೈರಾಗಿ! ನೀನು ಹೇಳುವ ಸಂಗತಿ ಸಂಪೂರ್ಣ ನಿಜವಿದ್ದರೂ ಕೂಡ ತೋರಲಿಕ್ಕದು ಅದ್ಭುತವಿರುವದರಿಂದ, ಅದನ್ನು ಇವರಾರೂ ನಂಬಲಾರರು. ಅಂದ ಬಳಿಕ ನೀನು ವ್ಯರ್ಥವಾಗಿ ನಗೆಗೀಡೇಕಾಗುತ್ತೀ?" ಈ ಸುವಿಚಾರದಿಂದೆನ್ನಿರಿ, ಸಂದೇಹದಿಂದೆನ್ನಿರಿ ನನ್ನ ನಾಲಿಗೆಯು ಹಿಂಜೆಗ್ಗಿತು; ಮತ್ತು ಅವರುಗಳ ಸಂಭಾಷಣವು ನನಗೆ ಕೇಳಿಸುತ್ತಲೇ ಇಲ್ಲವೆಂಬಂತೆ ನಾನು ನನ್ನ ಕತ್ತನ್ನು ತುಸ ಬೇರೆ ಕಡೆಗೆ ಹೊರಳಿಸಿಕೊಂಡು ಕುಳಿತೆನು, ಆದರ ಅವರೇನೇನು ಮಾತಾಡುತ್ತಾರೆಂಬದನ್ನು ಕೇಳಿಕೊಳ್ಳುವ ಸಲುವಾಗಿ ನನ್ನ ಪಂಚಪ್ರಾಣಗಳ ಶಕ್ತಿಯು ನನ್ನ ಕಿವಿಯಲ್ಲೆ ಒಟ್ಟುಗೂಡಿತು. ನನ್ನ ಏಕಾಗ್ರತೆಯನ್ನು ನಾನು ಮರೆಮಾಜಿಸೆನು, ಆದರೂ ನಾನವರ ಸಂಭಾಷಣದ ಪ್ರತಿಯೊಂದು ಅಕ್ಷರವನ್ನೂ ಕೇಳಿಕೊಳ್ಳುತ್ತಿದ್ದೆನು.

ಶಾಮರಾಯನು ಮತ್ತೆ ಹೇಳಿದನು:—"ಗೆಳೆಯಾ, ನಿನಗೆ ತಿಳಿಸಲು ಅಡ್ಡಿಯಿಲ್ಲ; ಅದೇನಂದರೆ, ನನ್ನ ಭಗಿನಿಗೆ ಗಂಡು ಹುಟ್ಟಿದ ಮೇಲೆ ಅಲ್ಪಾವಧಿಯಲ್ಲೇ ವೈಧವ್ಯವೊದಗಿತು. ಅವಳು ಆ ದುಃಖವನ್ನು ಮನಸ್ಸಿಗೆ ಬಲವಾಗಿ ಹಚ್ಚಿಕೊಂಡಳು; ಹಾಗು ಅದರಲ್ಲಿ ವಿಶೇಷ ಕೆಡಕಿನ ಸಂಗತಿಯೇನಂದರೆ, ತನ್ನ ಮಗನು ತನ್ನ ಗಂಡನಿಗೆ ಮೂಲನಾಗಿ ಹುಟ್ಟಿರುವನೆಂಬ ಭೋಳೇತನದಿಂದ ಅವಳ ಮನಸ್ಸಿನ ತಿಳುವಳಿಕೆ

ಯಾಗಿತ್ತು. ಆದರಿಂದ ತನ್ನ ಮಗನ ಮೇಲೆ ಆಕೆಯ ಪ್ರೇಮವು ಹೆಚ್ಚಾಗಿದ್ದರೂ ಕೂಡ ಅವನ ರೂಪದಿಂದ ವೈಧವ್ಯದ ದುಃಖವು ತನ್ನೆದುರು ಇಡೀ ಜನ್ಮದಲ್ಲಿ ಇ ಯುವದೆಂದು ಬಗೆದು, ಅವಳ ಪುತ್ರಪ್ರೇಮದಲ್ಲಿ ನಡುನಡುವೆ ದುಃಖಭಾವನೆಯ ಅಲ್ಲೋಲ-ಕಲ್ಲೋಲವಾಗುತ್ತಿತ್ತು. ನಾನು ಬಗೆಬಗೆಯಿಂದ ಅವಳಿಗೆ ತಿಳುವಳಿಕೆ ಹೇಳುವ ಪ್ರಯತ್ನ ಮಾಡುತ್ತಿದ್ದೆನು:—'ತಂಗೀ, ಚಿಕ್ಕಂದಿನಲ್ಲಿ ಪಿತೃಸುಖಕ್ಕೆರ ವಾದ ಹುಡುಗರನ್ನು ಮುಂದೆ ಹೆಸರುವಾಸಿಗಳನ್ನಾಗಿ ಮಾಡಿ ದೇವರು ಅವರ ಹಾನಿ ಯನ್ನು ತುಂಬಿಕೊಡುವನು. ನಿನ್ನ ಮಗನ ವಿಷಯ ಕೂಡ ಹಾಗೆಯೇ ಇರಲಾರ ದೆಂದು ಅದಾರು ಹೇಳಬೇಕು? ನೀನು ಅವನ ಮೇಲೆ ತಾಯಿಯ ಮತ್ತು ತಂದೆಯ ಹೀಗೆ ಇಮ್ಮಡಿ ಪ್ರೇಮ ಮಾಡುತ್ತೀರು. ಅವನ ಬಗ್ಗೆ ಇಮ್ಮಡಿ ಪ್ರಯತ್ನಿಸು, ಅಂದರೆ ಅವನು ಮುಂದೆ ಹೆಸರುವಾಸಿಯಾಗಿ ತನ್ನ ಹಾಗು ತನ್ನ ತಂದೆಯ ಹೀಗೆ ಉಭಯತರ ಕೀರ್ತಿಯನ್ನೂ ಗಳಿಸುವನು; ಹಾಗು ನಿನ್ನ ದುಃಖವನ್ನೂ ಕೊನೆ ಗಾಣಿಸುವನು' ಎಂದು ಹೇಳಿದಾಗೆಲ್ಲ ಅವಳು ತದ್ವಿರುದ್ಧವಾಗಿ:—'ಅಣ್ಣಾ, ನಮ್ಮ ವಂಶದ ಮೇಲೆ ದೇವರ ಕೋಪವೇ ಆದಂತಿದೆ. ಅಂತೆಯೇ ಅವನು ನನಗೆ ಹೇಗೆ ವೈಧವ್ಯವನ್ನಿತ್ತನೋ, ಹಾಗೆಯೇ ಬ್ರಹ್ಮಚರ್ಯವ್ರತ ಸ್ವೀಕರಿಸುವ ಬುದ್ಧಿಯನ್ನು ನನಗಿತ್ತಿರುವನು. ಹಾಗಿರದಿದ್ದರೆ ನೀನು ನಮ್ಮ ಹಿರಿಯರ ಒಬ್ಬೊಂಟಿಗ ಮಗನು. ಮನೆಯ ಸಂಸಾರಬಳ್ಳಿಯನ್ನು ಕಮರಿಸುವ ಬುದ್ಧಿಯು ನಿನಗೇಕುಂಟಾಗಬೇಕು?' ತಾತ್ಪರ್ಯವಿಷ್ಟೇ, ನನ್ನ ಯಾವ ಯುಕ್ತಿವಾದದಿಂದಲೂ ಅವಳಿಗೆ ಸಮಾಧಾನವಾಗ ಲಿಲ್ಲ. ಮಗನನ್ನು ಕಂಡು ವೈಧವ್ಯ ದುಃಖವು ಅವಳಿಗೆ ಅನಿಸುತ್ತಿದ್ದರೂ ಅವಳು ಆತನ ಘಾತವನ್ನೆಂತು ಬಗೆದಾಳು? ಆದರೆ ಸ್ವಂತದ ದುಃಖವು ಸಹನವಾಗದೆಂದು ತನ್ನಷ್ಟಕ್ಕೆ ತಾನು ಸತ್ತುಹೋಗಬೇಕೆಂಬ ಸಿದ್ಧತೆಯಿದ್ದವರಂತೆ ಅವಳು ಯಾವಾ ಗಲೂ ಉದಾಸವೃತ್ತಿಯಿಂದಲೇ ಇರುವಳು. ಅದರಿಂದ ನಡೆದುದೆಲ್ಲವೂ ಸಂಭವ ನೀಯವಾಗಿಯೇ ತೋರುತ್ತದೆ. ಮಗನನ್ನು ಕೈಯಿಂದ ಹಿಡಿದುಕೊಂಡು ಸಮುದ್ರ ಸ್ನಾನ ಮಾಡುತ್ತಿರುವಾಗ, ತೆರೆಯೊಡನೆ ಅವರಿಬ್ಬರೂ ಒಳಗೆ ಜಗ್ಗಿರಲಿಕ್ಕೆ ಸಾಕು, ಇಲ್ಲವೆ ಬೇಕೆಂತ ತಮ್ಮಿಬ್ಬರ ಬಲಿದಾನವನ್ನು ಅವಳು ತಾನಾಗಿ ಇತ್ತಿರಬೇಕು!"

**ಇಷ್ಟು ಹೇಳಿ ಶಾಮರಾಯನು ಸ್ತಬ್ಧನಾದನು; ಆದರೆ ಪಂಡಿತರಾಯನು ಏನೋ ಜ್ಞಾಪಿಸಿದಂತೆ:—"ಆದರೆ ಗೆಳೆಯಾ, ಮೂರನೇ ಸಂಭವವನ್ನು ನೀನು ಹೇಳಲೇ ಇಲ್ಲವಲ್ಲ?" ಶಾಮರಾವ:—"ಆದೇನಪ್ಪಾ?"**

ಪಂಡಿತರಾವ:—"ಅದು ಹೀಗೆ. ನಿನ್ನ ಭಗಿನಿಯು ಗತಿಸಿದಳು; ಆದರೆ ಆ ಹುಡುಗನು ಸ್ನಾನಕ್ಕೆ ಹೋಗದೇನೇ ಉಸುಗಿನಲ್ಲಿ ಕುಳಿತನು. ನಿನ್ನ ಭಗಿನಿಯು ಇಲ್ಲದಂತಾದರೂ ಆಕೆಯ ಮಗ-ನಿನ್ನ ಅಳಿಯ-ಮಾತ್ರ ಬದುಕಿದನು!"

ಆಗ ಶಾಮರಾಯನು ಕೊಂಚವೇ ನಕ್ಕು :—"ಹಾಗಾದರೆ ನಾಲ್ಕನೆಯದೂ ಒಂದು ಸಂಭವವಿಲ್ಲವೇನು ? ನನ್ನ ಭಗಿನಿಯೂ ಅಳಿಯನೂ ಜೀವದಿಂದಿದ್ದು, ಅವರೆಲ್ಲೋ ಗುಪ್ತವೇಷದಿಂದ ಜೀವಿಸುತ್ತಿರುವರೆಂದು; ಆದರೆ ಈ ಸಂಭವಾಸಂಭವಗಳ ಒಣ ತರ್ಕಗಳಿಂದೇನು ಪ್ರಯೋಜನ? ನಿನ್ನ ಅಂಬೋಣದಂತೆ ನನ್ನ ಅಳಿಯನು ಉಳಿದು ಅವನು ಯಾರಿಗಾದರೂ ದೊರೆತಿದ್ದರೆ, ಅವರು ಅವನನ್ನು ನಮ್ಮ ಕಡೆಗೆ ತಲುಪಿಸುತ್ತಿರಲಿಲ್ಲವೇ ? ಅವನನ್ನು ಕದ್ದೊಯ್ದರೆ, ಅವನಿಂದ ಯಾರಿಗೆ ಏನು ಲಾಭವಾಗುತ್ತಿತ್ತು ? ಅದರಿಂದ ಅವರಿಬ್ಬರೂ ಒಮ್ಮೆಲೆ ಸಮುದ್ರಾಸ್ತ್ರ್ಯಪ್ಯಂತು ಆದದ್ದೇ ನಿಜವಿರಬೇಕು. ಕೊಂಕಣದ ಹುಡುಗರನ್ನು ದೇಶದ ಮೇಲೊಯ್ದು ಹೆಸರುವಾಸಿಗಳನ್ನಾಗಿ ಮಾಡುವ ನಿನ್ನ ಹುಮ್ಮಸ್ಸನ್ನು ನೀನು ಈಗಲೇ ಆಡಿ ತೋರಿಸಿದೆ. ಅದರ ಮೇಲಿಂದ ನನಗೆ ಹೊಳೆದ ಹಾಗು ನಿಜವಾಗಿ ಘಟಿಸಿದ್ದನ್ನೇ ಹೇಳುತ್ತೇನೆ. ನನ್ನ ಭಗಿನಿಗೆ ಧೈರ್ಯಕೊಟ್ಟು ನಾನು ಹೇಳುತ್ತಿದ್ದೆನೇನಂದರೆ :--ತಂಗೀ, ನಿನ್ನ ಮಗನು ಮುಂದೆ ಕೀರ್ತಿವಂತನಾಗುವನೆಂದು. ಪಂಡಿತರಾವ, ಆಗ ನನ್ನ ಮನಸ್ಸಿನಲ್ಲಿ ನಿಜವಾಗಿಯೂ ಅನಿಸುತ್ತಿತ್ತೇನಂದರೆ, ನಿನ್ನೀ ಉತ್ಕರ್ಷ ಸಮಯದಲ್ಲಿ ಆ ಹುಡುಗನನ್ನು ಇಂದಿಲ್ಲ ನಾಳೆ ನಿನ್ನ ಸ್ವಾಧೀನ ಪಡಿಸಬೇಕು; ಅಂದರೆ ನೀನೇ ಅವನನ್ನು ಹೆಸರುಗಳಿಸುವಂತೆ ಮಾಡುವೆಯೆಂದೂ ಮತ್ತು ಅವನು ನನ್ನ ಭಗಿನಿಯ ದುಃಖದ ಪರಿಮಾರ್ಜನಗೊಳಿಸುವನೆಂದೂ ಯೋಚಿಸಿದ್ದೆನು; ಆದರೆ ಆ ಆಶೆಯನ್ನು ನಾನಿಂದು ಅದಾರ ಸಲುವಾಗಿ ಮಾಡಲಿ ?"

ಹೀಗೆ ಹೇಳಿ, ಒಂದು ನಿಟ್ಟುಸಿರುಗರೆದು ಶಾಮರಾಯನು ಈ ದುಃಖದ ವಿಷಯ ಮುಗಿಯಿತೆಂದು ಸೂಚಿಸಿದನು; ಆದರೆ 'ಆಖ್ಯಾತಿ ಪೃಚ್ಛತಿ' ಅಂದರೆ 'ಹೇಳುತ್ತಾನೆ ಮತ್ತು ಕೇಳುತ್ತಾನೆ' ಇದೇ ಮಿತ್ರಪ್ರೇಮದ ಲಕ್ಷಣವಲ್ಲವೇ ? ಇದರಂತೆ ಶಾಮರಾಯನು ಮತ್ತೆ :—"ಎಲೋ, ಪಂಡಿತರಾಯಾ, ನೀನು ಈ ಸಣ್ಣ ಚಿಕ್ಕ ಬಾಲಿಕೆಯನ್ನು ಸಂಗಡ ಕರೆದುಕೊಂಡು ಎಲ್ಲೆಲ್ಲಿ ತಿರುಗಾಡುವವನು ? ಇವಳನ್ನು ಇವಳ ಅಜ್ಜಮ್ಮನ ಮನೆಯಲ್ಲಿಟ್ಟಿದ್ದರೆ ಒಳಿತಾಗುತ್ತಿರಲಿಲ್ಲವೇ ? ನೀವು ವೀರಪುಂಗವರು. ಒಮ್ಮೆ ಸವಾರಿಯು ಮೇಲೆ ಹೊರಟರೆಂದರೆ ಎತ್ತಿಂದ ಎತ್ತೋ ಅಲೆಯುವವರು; ದಾಳಿಗೂ ಯುದ್ಧಕ್ಕೂ ತೆರಳುವವರು. ಅಂಥ ಕಾಲಕ್ಕೆ ತಮ್ಮ ಮೆಚ್ಚಿನ ಮತ್ತು ಪ್ರೀತಿಯ ಜನರನ್ನು ಸಂಗಡ ಕರದೊಯ್ಯುವದೆಂದರೆ, ಕೊರಳಿಗೆ ಗುದಿ ಕಟ್ಟಿಕೊಂಡಂತೆಯೇ ಆಗುವದಿಲ್ಲವೇ ?"

ಪಂಡಿತರಾಯ :—"ಶಾಮರಾವ, ನೀನನ್ನುವದು ನಿಜವು; ಆದರೆ ನನ್ನಿಂದ ಮಗಳನ್ನು ಕಣ್ಮರೆ ಮಾಡಲಾಗುವದಿಲ್ಲ. ಇನ್ನು ನಾನು ಒಂದೇಸವನೆ ದಾಳಿ-

ಯುದ್ಧಗಳಲ್ಲಿಯೇ ತೊಡಗಿಕೊಳ್ಳುತ್ತೇನೆಂತಲ್ಲ, ಅಲ್ಲದೆ ಪ್ರತಿಯೊಂದು ಸವಾರಿಯಲ್ಲಿ ಇಲ್ಲವೆ ದಾಳಿಯಲ್ಲಿ ಯಾರವಾದರೂ ಕುಟುಂಬಗಳು ಜೊತೆಗೆ ಇದ್ದೇ ಇರುತ್ತವೆ. ಮರಾಟರ ಸಿಪಾಯಿಗಿರಿಯಲ್ಲಿ ಕ್ರೂರತನದಷ್ಟೇ ಕುಟುಂಬವತ್ಸಲತೆಯೂ ಇರುತ್ತದೆ. ಆದರಲ್ಲೂ ನನ್ನ ಮಗಳ ವೃತ್ತಿಯಾದರೂ ವೀರವೃತ್ತಿಯೇ ಕಾಣುತ್ತದೆ. ಇವಳೆಂದೂ ಮನೆಯಲ್ಲಡಗಿರಲಾರಳು. ನಮ್ಮ ಮರಾಟರ ಹೆಂಗಸರು ಟೊಂಕಕ್ಕೆ ಖಡ್ಗ ಕಟ್ಟಿಕೊಂಡು ಯುದ್ಧಕ್ಕೆ ತೆರಳುವದಿಲ್ಲೆಂಬದು ನಿಜವು; ಆದರೂ ರಾಜಕಾರಣದಂತೆ ರಣಕೌಶಲ್ಯದ ಕೆಲಸದಲ್ಲೂ ಅವರು ಉತ್ಸಾಹದಿಂದ ಲಕ್ಷ್ಯವಿರಿಸುತ್ತಾರೆ. ಅಲ್ಪಾವಧಿಯಲ್ಲೇ ನಾನವಳ ಮದುವೆ ಮಾಡಬೇಕಾಗಿದೆ. ಆಗ ಅವಳ ವೃತ್ತಿಗೆ ಸಲ್ಲುವಂತಹ ಯಾವನೊಬ್ಬ ಅಳಿಯ ದೊರೆತನೆಂದರೆ, ನಾನವಳ ಚಿಂತೆಯೊಳಗಿಂದ ಮುಕ್ತನಾದೇನು. ನಾನು ಕೊಂಕಣದ ಅಭಿಮಾನಿಯಿದ್ದರೂ ಹೆಂಗಸರನ್ನು ಕೊಂಕಣಿಗರಂತೆ ಮನೆಗೆಲಸ-ಗದ್ದೆಗೆಲಸಗಳಲ್ಲೇ ದುಡಿಸಿ, ಅವರನ್ನು ಬುದ್ಧಿಹೀನರನ್ನಾಗ ಮಾಡಬೇಕೆಂಬದು ನನಗೆ ರುಚಿಸುವದಿಲ್ಲ ಕೊಂಕಣದ ಗಂಡಸರು ಹೇಗೋ, ಅದರಂತೆಯೇ ಕೊಂಕಣದ ಹೆಂಗಸರೂ ದೇಶದ ಮೇಲೆ ಹೋದ ಬಳಿಕ ಹಲವು ವಿಧವಾಗಿ ತಮ್ಮ ಬುದ್ಧಿ ವೈಭವವನ್ನು ಪ್ರಕಟಗೊಳಿಸುತ್ತಾರೆಂಬದನ್ನು ನಾನು ಕಂಡುಕೊಂಡಿರುತ್ತೇನೆ. ತಾತ್ಪರ್ಯವಿಷ್ಟೇ, ಹುಡುಗೆಯನ್ನು ಜೊತೆಗೆ ಕರೆದೊಯ್ಯುವದರಿಂದಲಾದರೂ ನನ್ನ ಹಾಗು ಅವಳ ಉಭಯತರ ಲಾಭವೂ ಇದೆ ನಿನ್ನ ಸೋದರಳಿಯ ಜೀವಿಸಿದ್ದರೆ, ಆತನನ್ನು ನನ್ನ ಮಗನಂತೆ ನನ್ನ ಜೊತೆಗೆ ಕರೆದೊಯ್ಯುತ್ತಿದ್ದೆನು; ಆದರೆ ದೈವಗತಿಯೇ ವಿಚಿತ್ರವಾಗಿದೆ!"

ಆ ಉಭಯತರಲ್ಲಿ ಇಷ್ಟು ಮಾತುಗಳು ನಡೆದಿರುವಾಗಲೇ ಕುಣಕ್ಯಾ ಪಂಡಿತರಾಯನ ಮಗಳ ಕೈ ಹಿಡಿದುಕೊಂಡು ಅಕ್ಕಪಕ್ಕಗಳಲ್ಲಿ ತಿರುಗಿ ಹಿಂದಿರುಗಿ ಬಂದನು, ಆದರೆ ಬರುವಾಗ ಆತನು ಬರಿಗೈಯಿಂದ ಹಿಂದಿರುಗಲಿಲ್ಲ. ಆತನು ಅವಳಿಗಾಗಿ ಬಕುಲದ ಮತ್ತು ಪಾರಿಜಾತದ ಬೊಗಸೆಗಟ್ಲೆ ಸುಂದರ ಹೂಗಳನ್ನೂ ನೇರಿಲ-ಕವಳಿ ಹಣ್ಣುಗಳನ್ನೂ ದೊರೆಕಿಸಿಕೊಂಡು ಬಂದಿದ್ದನು. ಅವುಗಳೊಡನೆ ಆ ಹುಡುಗಿಯನ್ನು ಆತನು ಆ ಉಭಯತರೆದುರೊಯ್ದು ನಿಲ್ಲಿಸಿ, "ಸಂಬಾಳಿಸಿರೀಕೆಯನ್ನು" ಎಂದು ಹೇಳಿ ನನ್ನ ಬಳಿಗೆ ಬಂದನು. ಅವನ ಜೊತೆಗೆ ಆ ಹುಡುಗೆಯು ಒಳ್ಳೆಯ ಉತ್ಸಾಹದಿಂದಲೂ ಆನಂದದಿಂದಲೂ ತಿರುಗಾಡಿದಳೆಂಬುದು ಆಕೆಯ ಮುಖಚರ್ಯೆಯಿಂದಲೇ ಕಂಡುಬರುತ್ತಿತ್ತು. ಆ ಹಲವು ಹಣ್ಣುಗಳನ್ನು ಕುಣಕ್ಯಾ ದೊರೆಕಿಸಿಕೊಟ್ಟದ್ದಕ್ಕಾಗಿ ಆ ಬಾಲಸ್ವಭಾವದ ಹುಡುಗಿಗೆ ಯಾವುದೊಂದು ಅಲಭ್ಯ ಲಾಭವಾದಂತೆಯೇ ಅನಿಸಿತು, ಮತ್ತು ತಾನು ಅತ್ತಿತ್ತ ಅಡ್ಡಾಡುತ್ತಿರುವಾಗ ತನ್ನ ಸಂಗಡಿಗನು ಗಿಡದ

ಮೇಲೆ ಎಷ್ಟು ಲಗುಬಗೆಯಿಂದ ಏರುತ್ತಿದ್ದನು? ಮಂಗಗಳನ್ನೂ ಕಾಡು ದನ-ಕರುಗಳನ್ನೂ ಎಷ್ಟು ದಿಟ್ಟತನದಿಂದ ಬೆದರಿಸಿ ಓಡಿಸುತ್ತಿದ್ದನು? ಗಿಡಬಳ್ಳಿಗಳ ಮುಳ್ಳುಗಳಿಂದ ಮೈಗೆ ತೆರೆದರೂ ರಕ್ತಬಂದರೂ ಅದನ್ನು ಸಹಜವಾಗಿ ಟೊಂಕಕ್ಕೆ ಸುತ್ತಿದ್ದ ಅರಿವಿಗೆ ಒರೆಸಿ ಮತ್ತೆ ಮುಂದಕ್ಕೆ ಹೇಗೆ ಹೋಗುತ್ತಿದ್ದನು? ಇವೆಲ್ಲ ಭಿನ್ನ ಭಿನ್ನ ಸಂಗತಿಗಳನ್ನು ಅವಳು ಕೌತುಕದಿಂದ ತನ್ನ ತಂದೆಗೆ ಹೇಳಹತ್ತಲು, ಆ ಉಭಯ ಮಿತ್ರರಿಗೂ ಬಲು ಮೋಜೆನಿಸಿತು.

ಕಡೆಗೆ ಶಾಮರಾಯನು:—"ಪಂಡಿತರಾಯಾ, ನೀನಿನ್ನು ಈ ಕುಣಕೇಶ್ವರದಿಂದ ಮತ್ತೆಲ್ಲಿಗೆ ಹೊರಡುವೆ?" ಎಂದು ಕೇಳಲು, ಪಂಡಿತರಾಯನು:—"ನನಗೋಸುಗ ಒಂದು ದೊಡ್ಡ ನಾವೆಯು ಬೇಕಂತ ಒತ್ತಿನೊಳಗಿನ ನನ್ನ ಮನೆಯ ಬಂದರದಲ್ಲಿ ಲಂಗರ ಹಾಕಿಟ್ಟಿದೆ, ನಾನು ಇಂದು ರಾತ್ರಿಯೇ ನೀರು ಇಳಿಯುಹತ್ತಿದೊಡನೆ ನನ್ನ ಆ ಖಾಸ ಬಂದರದಿಂದ ನನ್ನ ನಾವನ್ನು ವಿಜಯದುರ್ಗದ ಕಡೆಗೆ ನಾಗಿಸುವವನಿದ್ದೇನೆ."

ಇಷ್ಟು ಮಾತುಗಳು ನಡೆಯುತ್ತಿರುವಾಗ ಸೂರ್ಯನು ಮಧ್ಯಾಕಾಶದಿಂದ ಪಡುವಣದ ಇಳುಕಲಿಗೆ ಬಿದ್ದನು. ಕೂಡಲೆ ಆ ಉಭಯತರೂ ಮತ್ತೊಮ್ಮೆ ದೇವದರ್ಶನ ಪಡೆದು, ಮಿತ್ರಪ್ರೇಮದಿಂದ ಒಬ್ಬರನ್ನೊಬ್ಬರು ಆಲಿಂಗಿಸಿದರು. ಶಾಮರಾಯನು ಅಲ್ಲಿಂದ ದಕ್ಷಿಣ ದಿಕ್ಕಿನ ಮಾರ್ಗ ಹಿಡಿದನು, ಹಾಗು ಪಂಡಿತರಾಯನು ತನ್ನ ಮಗಳ ಕೈ ಹಿಡಿದುಕೊಂಡು ದೇವಸ್ಥಾನದ ಮೆಟಗಟ್ಟೆಯ ಬಳಿಗೆ ನಿಂತಿದ್ದ ತನ್ನ ಆಳಿನ ಹೆಗಲ ಮೇಲೆ ಅವಳನ್ನು ಎತ್ತಿ ಕೂಡ್ರಿಸಿ, ಅವಳೊಡನೆ ಉತ್ತರ ದಿಕ್ಕಿನ ದಾರೀ ಹಿಡಿದು ನಡೆದನು.

( ೮ )

ಅವರಿಬ್ಬರೂ ಹೊರಟು ಹೋದ ಬಳಿಕ ಇನ್ನು ನಾನೇನು ಮಾಡಬೇಕೆಂಬ ನಿರ್ಧರವನ್ನು ಆ ಕೂಡಲೆ ಮನಸ್ಸಿನಲ್ಲಿ ಮಾಡಿದೆನು. ಅದು ಅಷ್ಟು ಬೇಗನೆ ಹೇ-ಗಾಯಿತೆಂಬದು ನನ್ನದು ನನಗೇ ಆಶ್ಚರ್ಯವೆನಿಸುವದು; ಆದರೆ ದೇವರ ಪ್ರೇರಣೆಯೂ ಹೀಗೆಯೇ ಕ್ಷಣಮಾತ್ರದಲ್ಲಿ ಆಗುತ್ತಿರುತ್ತದೆ. ಈಶ್ವರೀ ಪ್ರೇರಣೆಯೆಂದರೆ, ವಿದ್ಯುಲ್ಲತೆಯ ಹೊಳಪಲ್ಲವೇನು? ಪಂಡಿತರಾಯನು ಮೊಗದಿರುವಿ ನಾಲ್ವತ್ತು-ಐವತ್ತು ಹೆಜ್ಜೆ ನಡೆದು ಹೋಗಿರಬೇಕು. ಅಷ್ಟರಲ್ಲೇ ನಾನು ನನ್ನ ಆಸನವನ್ನೂ ಕಮಂಡಲುವನ್ನೂ ಎತ್ತಿಕೊಂಡೆನು; ಒಟ್ಟಿಗೆಳದೊಂದು ಸಣ್ಣ ಗಂಟನ್ನು ಬಗಲಿಗೆ ಹಾಕಿದೆನು; ಹಾಗು ಕುಣಕ್ಯಾನ ಕೈ ಹಿಡಿದು, ಆತನನ್ನು ದೇವಾಲಯದ ಗರ್ಭಗುಡಿಯ ಕಡೆಗೆ ಕರೆದೊಯ್ದೆನು; ಮತ್ತು:—"ಕುಣಕ್ಯಾ, ದೇವರನ್ನು ನಮಿಸು;

ಹಾಗು ನಾನು ಹೇಳುವಂತೆ ಇನ್ನುಮುಂದೆ ನಡೆಯುತ್ತೇನೆಂದು ದೇವರ ಮುಂದೆ **ಆಣೆ ಮಾಡು**" ಎಂದೆಂದೆನು.

ಇಂಥ ಇಬ್ಬಗೆಯ ಆಚರಣವನ್ನು ನಾನು ಈ ಮೊದಲೆಂದೂ ಮಾಡದ್ದನ್ನೂ ಇಂದು ಮಾಡಿರುವದನ್ನೂ ನೋಡಿ ಕುಣಕ್ಯಾ ಒಂದಿಷ್ಟು ಬೆಪ್ಪಾದನ. ಆತನು ದೇವರಿಗಂತೂ ನಮಿಸಿಯೇ ನಮಿಸಿದನು. ನಾನು ಹಾಗೆ ಮಾಡೆಂದು ಹೇಳಿರದಿದ್ದರೂ ಅವನು ನಮಿಸದಿರುತ್ತಿರಲಿಲ್ಲ; ಯಾಕೆಂದರೆ ಅದಹನ ರೂಢಿಯ ಕೆಲಸವಾಗಿತ್ತು, ಆದರೆ 'ನಾನು ಹೇಳುವಂತೆ ಕೇಳುವೆನು' ಎಂದು ಬಾಯಿಂದ ಉಚ್ಚರಿಸಿ, ದೇವರ ಆಣೆ ಮಾಡುವದು ಅವನಿಗಿಂದು ತೀರ ಹೊಸದೆಂದು ಚೋಜಿಗವೆನಿಸಿತು.

ಆಗ ಆತನು ನನ್ನ ಮೋರೆಯನ್ನು ದಿಟ್ಟಿಸಿ ನೋಡುತ್ತ :—" ಬೈರಾಗಿಗಳೇ, ನಾನು ನಿಮ್ಮ ಅಪ್ಪಣೆಯನ್ನು ಇದುವರೆಗೆಂದಾದರೂ ಉಲ್ಲಂಘಿಸಿರುವೆನೇ? ನಿಮ್ಮ ಆಜ್ಞೆಯೇ ದೇವರ ಅಪ್ಪಣೆ! ಅಂದಬಳಿಕ ಇಂದು ನನ್ನಿಂದ ಆಣೆ ಮಾಡಿಸಿ ಎಂದೂ ಕೇಳದಂತಹ ಜಾಮೀನನ್ನೇಕೆ ಕೇಳುತ್ತಿರುವಿರಿ ?"

ಆಗ ಅವನಿಗೇನು ಉತ್ತರ ಕೊಡಬೇಕೆಂಬುದೇ ತಿಳಿಯಲಿಲ್ಲ. ಅದರಿಂದ ನಾನವನ ಮೋರೆಯ-ಮೈಮೇಲೆ ಕೈಯಾಡಿಸುತ್ತ :—" ಅದನ್ನೆಲ್ಲ ನಾನು ನಿನಗೆ ಬಿಚ್ಚಿ ಹೇಳುವೆನು; ಅದರೆ ಅದು ಈಗಲ್ಲ; ದಾರಿ ನಡೆಯುವಾಗ. ನಿನಗೆ ಆಣೆ ಮಾಡ ಹೇಳಿದ್ದು ನೀನು ನನ್ನ ಆಜ್ಞೆಯನ್ನು ಪಾಲಿಸಲಿಕ್ಕಿಲ್ಲೆಂತಲ್ಲ, ಆದರೆ ನಾನು ನನ್ನ ಮನಃಸಂಕಲ್ಪವನ್ನುಚ್ಚರಿಸುತ್ತಿರುವಾಗ ನಿನ್ನ ಬಾಯಿಂದಲೂ ದೇವರ ನಾಮ ಹೊರಟಿತೆಂದರೆ, ನನ್ನ ಸಂಕಲ್ಪಕ್ಕೆ ಇಮ್ಮಡಿ ಬಲವುಂಟಾದೀತು."

ಈ ನನ್ನ ಅಂಬೋಣದ ಬೋಧವು ಅವನಿಗೆ ಹೆಚ್ಚಾಗಿ ಆಗಿರಲಿಕ್ಕಿಲ್ಲ, ಆದರೆ ನನ್ನ ಅವಸರ ಹಾಗು ಮೋರೆಯ ಮೇಲೆ ಕಾಣುವ ಆವೇಶ ಇವುಗಳನ್ನು ಕಂಡು, ಮರುಮಾತನಾಡದೆ, ಕುಣಕ್ಯಾನು ಕೂಡಲೆ ನಾನು ಹೇಳಿದ ಶಬ್ದಗಳನ್ನು ಉಚ್ಚರಿಸಿದನು. ಆ ಕೂಡಲೆ ನಾನೂ ಮುಗಿಸಿಬಿಡಬೇಕೆಂದು ಅವನ ತಲೆಯ ಮೇಲೆ ಕೈಯಿರಿಸಿ ಆಶೀರ್ವದಿಸಿದೆನು; ಹಾಗು ಅವನ ಕೈಹಿಡಿದು ಒಮ್ಮೆಲೆ ಆ ದೇವಾಲಯದಿಂದ ಹೊರಬಿದ್ದೆನು. ಅಷ್ಟು ಅವಸರ ಮಾಡುವ ನನ್ನ ಕಾರಣವಿಷ್ಟೇ, ನಾನು ಪಂಡಿತರಾಯನನ್ನು ನನ್ನ ಕಣ್ಮರೆಯಾಗಗೊಡುವಂತಿರಲಿಲ್ಲ. ಅವನಿಗೆ ತಿಳಿಯದ ಹಾಗೆ, ಆದರೂ ಅವನ ಬೆನ್ನಹಿಂದೆಯೇ ಅವನು ತೆರಳಿದತ್ತ ನಾವು ತೆರಳುವದಿತ್ತು. ಅವನು ನನಗೆ ಕೇವಲ ಕಾಣಿಸುವಷ್ಟೇ ದೂರ ನಾನಿರುತ್ತಿದ್ದೆನು. ಆದ್ದರಿಂದ ನಾನು ಕುಣಕ್ಯಾನೊಡನೆ ಮೆಲ್ಲಮೆಲ್ಲನೆ ಮಾತನಾಡುತ್ತಿದ್ದುದರ ಅರಿವು ಕೂಡ ಪಂಡಿತರಾಯನಿಗೆ ಹತ್ತಲು ಶಕ್ಯವಿರಲಿಲ್ಲ; ಮತ್ತು ನಾನವನ ಹಿಂದೆ ಬೇಕಂತ ಹೊರಟಿರು

ತ್ತೇನೆಂಬ ಕಲ್ಪನೆಯೂ ಅವನಿಗೆ ಉಂಟಾಗುವ ಕಾರಣವಿರದ್ದರಿಂದ, ಆತನು ಹಿಂದಿರುಗಿ ನನ್ನ ಕಡೆಗೆ ಯಾವಾಗಲೂ ನೋಡಲೇ ಇಲ್ಲ.

ಇಷ್ಟು ಜಾಗ್ರತೆ ವಹಿಸಿದ ಬಳಿಕ ನಾನು ನನ್ನ ವಿಚಾರಗಳನ್ನು ಕುಣಕ್ಯಾನಿಗೆ ಮೆಲ್ಲಮೆಲ್ಲನೆ ಹೇಳತೊಡಗಿದೆನು :—" ಬೇಟಾ, ನೀನು ಯಾವಾಗಲೂ ನನಗೆ ಚಿಕ್ಕವನೇ ಆಗಿದ್ದರೂ ಮುಂದೆ ನೀನೇನು ಮಾಡಬೇಕೆಂಬುದರ ವಿಚಾರವನ್ನು ನೀನು ಈಗಿನಿಂದಲೇ ಮಾಡಬೇಕು " ಎಂದೆನಲು,

ಆತನು :—" ಗುರುಗಳೇ, ಅವರಲ್ಲಿ ವಿಚಾರವನ್ನೇನು ಮಾಡುವದು ? ನೀವು ಗುರುಗಳು, ನಾನು ನಿಮ್ಮ ಪ್ರೀತಿಯ ಚೇಲಾ ! ಇದಕ್ಕಿಂತ ಆಚೆಗಿನ ಲೋಕವನ್ನು ನಾನು ಗಣಿಸುವದೇ ಇಲ್ಲ ನಿಮ್ಮ ಸೇವೆಯನ್ನು ಆಜನ್ಮ ಮಾಡಬೇಕೆಂಬುದೇ ನನ್ನ ವಿಚಾರವು."

ಅದಕ್ಕೆ ನಾನು :—" ನೀನಿದನ್ನು ಮೋರೆಯ ಇಚ್ಛೆಗೆ ಮಾತಾಡುತ್ತೀ ಎಂದು ನಾನೆನಲಾರನು, ಆದರೆ ಕುಣಕ್ಯಾ, ನಿಜವಾಗಿ ಹೇಳು, ಈ ಬೈರಾಗಿ-ಗೋಸಾವಿ ವೇಷದಿಂದಲೂ ವೃತ್ತಿಯಿಂದಲೂ ಶೇಷಾಯುಷ್ಯ ಕಳೆಯಬೇಕೆಂದು ನಿನಗನಿಸುವದೇನು ? ನಾನು ನಿನಗ ದೋಷವೇಯುವದಿಲ್ಲ ಯಾಕಂದರೆ ನಾನು ನಿನ್ನನ್ನು ನನ್ನ ಚೇಲಾ ಮಾಡಿಕೊಂಡಿದುದು ನಿನ್ನ ಅಜ್ಞಾನಾವಸ್ಥೆಯಲ್ಲಿ; ನೀನು ಸಜ್ಞಾನನೂ ದೊಡ್ಡವನೂ ಆದ ಬಳಿಕ ನಿನ್ನನ್ನು ಚೇಲಾ ಎಂದು ನಾನು ಸ್ವೀಕರಿಸಿರುವದಿಲ್ಲ. ಆದರೂ ಕೂಡ ನೀನು ಇದುವರೆಗೂ ನನ್ನಲ್ಲಿ ಸನ್ನಿಷ್ಠೆಯಿಂದ ವರ್ತಿಸಿರುತ್ತೀ, ಮತ್ತು ಅದನ್ನು ಮುಂದೆಯೂ ಹಾಗೆಯೇ ಇರಿಸುತ್ತೀ ಎಂಬದರಲ್ಲಿ ಸಂದೇಹವಿಲ್ಲ, ಆದರ ನಿನ್ನ ಬುದ್ಧಿ ಹಾಗು ನಿನ್ನ ಸ್ವಭಾವಗಳನ್ನು ಅನುಲಕ್ಷಿಸಿ ನಿನ್ನ ಆಯುಷ್ಯಕ್ಕೆ ಯೋಗ್ಯಮಾರ್ಗ ಹಚ್ಚುವ ಹೊಣೆಯು ನನ್ನ ಮೇಲಿದೆ. ಅಂತೆಯೇ ಇದುವರೆಗೆ ಅವುಗಳನ್ನು ಲಕ್ಷಿಸಿ ನಾನು ನನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿರುತ್ತೇನೇನಂದರೆ, ನಿನಗೆ ಬ್ರಹ್ಮಚರ್ಯದ ದೀಕ್ಷೆ ಕೊಡದೆ, ಗೃಹಸ್ಥಾಶ್ರಮದ ದೀಕ್ಷೆ ಕೊಡಬೇಕು."

ಅದಕ್ಕೆ ಕುಣಕ್ಯಾ :—" ಆದರೆ ಗುರುಗಳೇ, ಅದರಿಂದ ನಿಮ್ಮ ಜೊತೆಯನ್ನು ಬಿಟ್ಟು ಬಿಡಬೇಕಾದೀತಲ್ಲ ! ಅದರ ಗತಿಯೇನು ?"

ನಾನು :—" ನನ್ನ ದೇಹದ ಜೊತೆ ಇದೇನೂ ಲೋಕದೊಳಗಿನ ನಿಜವಾದ ಒಂದೇ ಜೊತೆಯಲ್ಲ. ಮಾನವರಿಗೆ ಮನೋಮನಗಳಿಂದ ಜೊತೆಯಿರಿಸಬರುತ್ತದೆ. ನೀನಿನ್ನು ಮುಂದೆ ಎಲ್ಲಿದ್ದರೂ ಕೂಡ ನಾನು ಮನಸ್ಸಿನಿಂದ ನಿನ್ನ ಜೊತೆಗಿರುತ್ತೇನೆಂದು ತಿಳಿ; ಮತ್ತು ನಿನಗೆ ನನ್ನ ಅವಶ್ಯಕತೆಯು ವಿಶೇಷವಾಗಿ ಅನಿಸಿದಾಗ ಇಲ್ಲವೆ ನನ್ನ

ಸಹಾಯದ ಆವಶ್ಯಕತೆಯೆನಿಸಿದಾಗ ನೀನು ಏಕಾಗ್ರಮನಸ್ಸಿನಿಂದ ನನ್ನನ್ನು ಸ್ಮರಿಸು. ನಿನ್ನ ಸ್ಮರಣವು ನನಗೆ ತಿಳಿಯಬೇಕೆಂಬ ದೈವಿಕ ಶಕ್ತಿಯು ನನ್ನಲ್ಲಿದ್ದೇ ಇದೆ ಎಂತಲ್ಲ; ಆದರೆ ನಿನ್ನ ವಿಷಯದಲ್ಲಿ ಇದುವರೆಗೆ ಹೇಗೆ ಅಕಲ್ಪಿತ ಯೋಗಾಯೋಗಗಳು ಘಟಿಸಿರುವವೋ, ಅವುಗಳ ಮೇಲಿಂದ ನಿನ್ನ-ನನ್ನ ಸ್ಮರಣೆಯಿಂದ ನಿನ್ನ-ನನ್ನ ಸಮಕ್ಷ ಭೆಟ್ಟಿಯಾಗಬೇಕೆಂಬ ಯೋಗಾಯೋಗವು ದೇವರ ದಯೆಯಿಂದ ಘಟಿಸಬಹುದೆಂದು ನನ್ನ ಮನಸ್ಸು ನನಗೆ ಹೇಳುತ್ತದೆ. ಗೋಸಾವಿ-ಬೈರಾಗಿಗಳ ಆಯುಷ್ಯ್ರಮಣದಲ್ಲಿ ನಿನಗೆ ಶ್ರದ್ಧೆಯಿರುವದಿಲ್ಲ; ಆದರೆ ಆ ಬಗ್ಗೆ ನಾನು ನಿನಗೆ ದೋಷವೀಯುವದಿಲ್ಲ. ಮಾನವನ ಬುದ್ಧಿಯು ಅವನ ಅಭಿರುಚಿ, ಅವನ ಇಚ್ಛೆ ಇಲ್ಲವೆ ಪೂರ್ವಜನ್ಮ ಸಂಸ್ಕಾರ ಇವುಗಳನ್ನು ಅವಲಂಬಿಸಿರುತ್ತವೆಂಬುದೇ ನಿಜ. ಯಾಕಂದರೆ, ಹಗಲಿರುಳೂ ನಿನಗೆ ನನ್ನ ಸಹವಾಸವಿದ್ದರೂ ನಿನ್ನ ಬುದ್ಧಿಯು ಬೈರಾಗಿತನಕ್ಕಿಂತ ಲೌಕಿಕ ವ್ಯವಹಾರಗಳಲ್ಲೇ ಹೆಚ್ಚು ಓಡುವದೆಂಬದನ್ನು ನಾನು ಮೊದಲೇ ತಿಳಿದಿರುತ್ತೇನೆ; ಮತ್ತು ನನ್ನ ಮನಸ್ಸಿನಲ್ಲೂ ಹೊಸ ಪ್ರೇರಣೆಯಾಗಿರುವದೇನಂದರೆ, ನನ್ನ ಚೇಲಾನು, ನನ್ನ ಸಚ್ಛಿಷ್ಯನು ಕೌಪೀನ ಧರಿಸಿ, ತೀರ್ಥಾಟನೆ ಮಾಡುವದಕ್ಕಿಂತ ಶಿಪಾಯಿಗಿರಿ-ಸರದಾರಿಕೆಗಳನ್ನು ಮಾಡಿ ಮಹಾರಾಷ್ಟ್ರದ ಹೆಸರನ್ನು ಹಿಂದುಸ್ಥಾನದ ತುಂಬ ಮೆರೆಯಿಸಲಿಕ್ಕೆ ನೆರವಾಗಬೇಕು; ಮತ್ತು ಲೌಕಿಕದೊಳಗಿನ ವೈಭವವನ್ನೆಲ್ಲ ಭೋಗಿಸಬೇಕು. ಈ ಕೆಲಸದಲ್ಲಿ ನಾನು ನಿನಗೆ ಸಹಾಯ ಮಾಡಬಹುದಾದಂತಹ ಒಬ್ಬ ಮನುಷ್ಯನ ಉಡಿಯಲ್ಲಿ ನಿನ್ನನ್ನು ಹಾಕುವ ಸಂಧಿಯು ಇಂದು ನನಗೆ ಲಭಿಸುವ ಯೋಗವಿದ್ದಂತಿದೆ. ಇನ್ನು ಮುಂದೆ ನೀನು ನಿನ್ನ ಲೌಕಿಕ ಚರಿತ್ರದಲ್ಲಿ ಆತನನ್ನೇ ಗುರುವೆಂದು ತಿಳಿ "

ಕುಣಕ್ಯಾ:—" ಅಂಥ ಗುರುವು ನನಗಾರು ದೊರೆತಾರು ? "

ಆಗ ದೂರದಲ್ಲಿ ಸಾಗಿದ್ದ ಪಂಡಿತರಾಯನ ಕಡೆಗೆ ಬೊಟ್ಟುದೋರಿ ನಾನು:— " ಇನ್ನು ಮುಂದೆ ದೇವರು ನಿನಗೂ ಅವನಿಗೂ ಜೊತೆಗೂಡಿಸುವಂತೆ ತೋರುತ್ತದೆ. ಅವನು ನಿನ್ನ ಭಾಗ್ಯೋದಯ ಮಾಡಬಹುದೆಂದು ನನಗನಿಸುತ್ತದೆ. ದೈವವು ನಮ್ಮನ್ನು ಪರೀಕ್ಷಿಸುವಂತೆ ತೋರುತ್ತದೆ. ನಾವಾದರೂ ದೈವವನ್ನು ಪರೀಕ್ಷಿಸಬೇಕು. ಆ ಗೃಹಸ್ಥನು ಇಂದಿಗೆ ಪೇಶ್ವೆಯರ ಪ್ರಧಾನ ಇಲ್ಲವೆ ದೊಡ್ಡ ಸರದಾರನಿರುವನೆಂತಲ್ಲ; ಆದರೆ ಕೊಂಕಣದ ಉತ್ಸಾಹೀ ಹುಡುಗರನ್ನು ದೇಶದ ಮೇಲೊಯ್ದು ಅವರನ್ನು ಹೆಸರುವಾಸಿಗಳಾಗುವಂತೆ ಮಾಡುವ ಉಮೇದು ವಹಿಸಿರುವವನು ಆತನಾಗಿರುತ್ತಾನೆ. ಒಂದು ವೇಳೆ ಅವನ ಉಮೇದನ್ನು ಸಫಲಗೊಳಿಸುವ ನಾಲ್ಕು ಮಂದಿ ಬೇರೆ ಹುಡುಗರು ಈ ಮೊದಲೇ ದೊರೆತಿದ್ದರೆ, ನೀನೂ ಒಬ್ಬ

ಐದನೆಯುವನಾದೀ; ಇಲ್ಲವೆ ಆ ನಾಲ್ಕು ಜನ ಬೇರೆ ಹುಡುಗರಿಗಿಂತ ನೀನೇ ಅವನ ಉಮೇದನ್ನು ಸಫಲಗೊಳಿಸಲಿಕ್ಕಿಲ್ಲೆಂದು ಹೇಗೆ ಹೇಳಲಾದೀತು ? "

ಕುಣಕ್ಯಾ :—" ಆದರೆ ನೀವು ನನಗಾಗಿ ಅವರಲ್ಲಿ ಮಾತು ತೆಗೆಯುವದೂ ಅವರು ಅದಕ್ಕೆ ಸಮ್ಮತಿಸುವದೂ ಇದು ಆಗದ ಮಾತು. ಅಂದಬಳಿಕ ನನ್ನನ್ನು ಅವರೆಡೆಗೆ ಕರೆದೊಯ್ದು ನನ್ನ ಬಗ್ಗೆ ಅವರಿಗೆ ಶಿಫಾರಸು ಮಾಡುವವರಾರು ? "

ನಾನು : —" ಕುಣಕ್ಯಾ, ನೀನು ಕೇಳಿದ್ದು ವಿಹಿತವು. ಸ್ವಂತದ ಶಿಫಾರಸ್ಸಿಗಾಗಿ ಬೇರೆಯವರನ್ನವಲಂಬಿಸುವ ಮನುಷ್ಯನು ಲೋಕದಲ್ಲಿ ಯಾವ ಶತಕೃತ್ಯ ಮಾಡುವನೆಂಬದು ತಿಳಿದದ್ದೇ ಇದೆ; ಆದ್ದರಿಂದ ಅವನಲ್ಲಿ ನಿನ್ನ ಶಿಫಾರಸನ್ನು ನೀನೇ ಮಾಡಿಕೊಳ್ಳಬೇಕೆಂದು ನಾನು ಬಯಸುತ್ತೇನೆ; ಮತ್ತು ಅದನ್ನು ನೀನು ಚೆನ್ನಾಗಿ ಮಾಡುವಿಯೆಂದು ನನ್ನ ನಂಬಿಗೆಯೂ ಇದೆ. ನಡಕ್ಕೆ ಹಗ್ಗ ಕಟ್ಟಿಕೊಂಡ ಮನುಷ್ಯನು ತನ್ನಷ್ಟಕ್ಕೆ ತಾನು ಎಷ್ಟೋ ಚೆನ್ನಾಗಿ ಮತ್ತು ಕೌಶಲ್ಯದಿಂದ ಈಸಿದರೂ ಕೂಡ ಅದರ ಶ್ರೇಯಸ್ಸು, ಅವನಿಗೆ ಧೈರ್ಯವೀಯುವ ಆ ಹಗ್ಗವನ್ನು ಕೈಯಲ್ಲಿ ಹಿಡಿದಿರುವ ದಂಡೆಯ ಮೇಲೆ ಕುಳಿತಿದ್ದ ಮನುಷ್ಯನಿಗೇ ಜನರು ಕೊಡುತ್ತಾರೆ. ನಿನ್ನ ಕರ್ತೃತ್ವದ, ಪರಾಕ್ರಮದ ಶ್ರೇಯಸ್ಸನ್ನು ನಾನು ಪಡೆಯಬೇಕಾಗಿಲ್ಲ. ನಡಕ್ಕೆ ಹಗ್ಗ ಕಟ್ಟದಲೇ ನಾನು ನಿನ್ನನ್ನು ಈ ಲೌಕಿಕ ಸಂಸಾರದ ಹೊಳೆಯಲ್ಲಿ ದೂಡಿಬಿಡತಕ್ಕವನಿದ್ದೇನೆ. "

ನನ್ನೀ ಭಾಷಣವನ್ನು ಕೇಳುತ್ತಿರುವಾಗ ಕುಣಕ್ಯಾನ ಮನಸ್ಸಿನಲ್ಲಿ ನಿಜವಾಗಿಯೂ ಒಂದು ವಿಶೇಷ ಪ್ರಕಾರದ ಉಮೇದು ಉಂಟಾಗುತ್ತಿರಬೇಕೆಂದು ಅನಿಸಿತು. ಆತನ ಗುರುನಿಷ್ಠೆಯು ಸುಳ್ಳಿರದಿದ್ದರೂ ಅವನ ಮನಸ್ಸಿನ ಬಯಕೆಗೆ ನನ್ನ ಆಜ್ಞೆಯ ಬೆಂಬಲದೊರೆತದ್ದರಿಂದ ಹಾಲೊಳಗೆ ಸಕ್ಕರೆ ಬೆರೆಸಿದಂತೆಯೇ ಆಗಿರಬೇಕು. ಆದ್ದರಿಂದ ಗುರುನಿಷ್ಠೆಯ ಸಾಮಾನ್ಯವಾದ ಔಪಚಾರಿಕ ಮಾತನ್ನು ಅವನು ಕೂಡಲೆ ಬಿಟ್ಟುಬಿಟ್ಟನು; ಮತ್ತು ನನ್ನ ಹೊಸ ಸೂಚನೆಗೆ ಅವನು ಬಹು ತೀವ್ರ ಸಿದ್ಧತೆ ತೋರಿಸಿದನು. ಅದನ್ನು ನೋಡಿದರೆ ಕುಣಕ್ಯಾನಿಗೆ ' ರೋಗಿ ಬಯಸಿದ್ದೂ ಹಾಲೂ-ಅನ್ನ; ವೈದ್ಯ ಹೇಳಿದ್ದೂ ಹಾಲೂ-ಅನ್ನ ' ಎಂಬಂತಾಯಿತೆಂದು ಯಾವನೊಬ್ಬ ಲೌಕಿಕನು ಅನ್ನದಿರುತ್ತಿರಲಿಲ್ಲ.'

ಕುಸ್ತಿಯ ಅಂಗಳವನ್ನು ಸೇರುವ ಕಾಸಿ ಹಾಕಿದ ಪೈಲವಾನನು ಮೊದಲು ತನ್ನ ವಸ್ತಾದನ ಪಾದಗಳನ್ನು ನಮಿಸಿ ಕುಸ್ತಿಗೆ ಹೋಗುತ್ತಿರುವದು ನಿಜ; ಆದರೆ ಆ ಕಾಲಕ್ಕೆ ಆತನ ಸ್ವಂತದ ಬಲವು ಸ್ವಂತದ ಉಮೇದಿಯು ಹಾಗು ಮಹತ್ವಾಕಾಂಕ್ಷೆಯ ಆತ್ಮವಿಶ್ವಾಸದ್ದೇ ಇರುತ್ತದೆ. ನಡುಮನೆಯಲ್ಲೇ ಈ ಕೈಯಿಂದ ಆ ಕೈಗೆ

ಎತ್ತಾಡಿ ಪ್ರೇಮಲ ತಾಯಿ-ತಂದೆಗಳಿಂದ ಪೋಷಿಸಲ್ಪಟ್ಟ ಹುಡುಗನಿಗೆ ಮನೆಬಿಟ್ಟು ಹೊರಡುವದೆಂದರೆ ಸಂಕಟವೆನಿಸಿಸೀತು; ಆದರೆ ಇಂದಿಗೆ ಹತ್ತು-ಹನ್ನೆರಡು ವರ್ಷಗಳವರೆಗೆ ನನ್ನ ಸಂಗಡ ಯಾವನು ಕೌಪೀನ ಧರಿಸಿ ತೀರ್ಥ-ಯಾತ್ರೆಗಳನ್ನು ಮಾಡಿದನೋ, ಭಿಕ್ಷೆಯ ಮೇಲೆಯೇ ಉದರನಿರ್ವಹಣವನ್ನು ಸಾಗಿಸಿದನೋ, ಅಡವಡವಿಗಳಲ್ಲಿ ತಿರುಗಾಡಿದನೋ, ಮಳೆ-ಗಾಳಿಗಳನ್ನು ಲೆಕ್ಕಿಸಲಿಲ್ಲವೋ ಮತ್ತು ಪ್ರಸಂಗ ವಿಶೇಷದಲ್ಲಿ ಕೇವಲ ಕಲ್ಲುಹಾಸಿಗೆಯ ಮೇಲೆಯೇ ನಿದ್ರಿಸಿದ್ದನೋ ಅಂಥವನನ್ನು ನಾನಿಂದು ದೂರ ಮಾಡಿ, ಲೌಕಿಕ ಸಂಸಾರದಲ್ಲಿ ಸಂಚರಿಸಲು ಅಟ್ಟಿದರೆ ಆತನು ಅಂಜಿಯಾನು ಇಲ್ಲವೆ ಗಾಬರಿಗೊಂಡಾನೆಂಬುದು ಶಕ್ಯವೇ ಇರಲಿಲ್ಲ, ಮತ್ತು ಅದಕ್ಕಾಗಿಯೇ ನನಗಾದರೂ ಅವನನ್ನು ಮಾಯೆಯ ಹಸಿವೇಟಿನಿಂದ ಹರಿದು ಹವೆಯಲ್ಲಿ ದೂರ ಗಿರಕಿ ಹೊಡೆಯಲಿಕ್ಕೆಂದು ತೂರುವಾಗ ಕೊಂಚವೂ ಕಠಿಣವೆನಿಸಲಿಕ್ಕಿಲ್ಲ. ಯಾವುದು ಕಠಿಣವೋ ಅದನ್ನಾತನು ಈ ಮೊದಲೇ ಮಾಡಿಬಿಟ್ಟಿದ್ದನು. ಹೊಳೆಯಲ್ಲಿ ಈಸುವವನಿಗೆ ಬಾವಿಯಲ್ಲೀಸುವದು ಹೇಗೆ ಕಠಿಣವೆನಿಸೀತು? ಹೇಳುವದಿಷ್ಟೇ, ನಾನು ಆತನ ಶ್ರೇಯಸ್ಸಿನ ಹುಂಡಿಯನ್ನು ಆತನ ಯಾವ ಆತ್ಮವಿಶ್ವಾಸದ ಮೇಲೆ ಬರೆದೆನೋ, ಅದನ್ನವನು ಸ್ವೀಕರಿಸಿದನು. ಅದು ಪೊಬ್ಬಾಟವಿಲ್ಲವಂತೆ ಸ್ವೀಕರಿಸಲಾದೀತು-ಪಚಾಯಿಸಲಾದೀತು-ಎಂಬುದರ ಬಗ್ಗೆ ನನಗೆ ಖಾತ್ರಿಯೆನಿಸುತ್ತಿತ್ತು

ಆ ಹೊಸ ಕಾರ್ಯಕ್ರಮದ ಪ್ರಾರಂಭವನ್ನು ಅವನು ಹೇಗೆ ಮತ್ತು ಎ[illegible] ಮಾಡಬೇಕೆಂಬವರ ವಿಚಾರವನ್ನು ನಾನು ಮಾಡುತ್ತಲೇ ಇದ್ದೆನು, ಹಾಗು ಅದನ್ನು ಪೂರೈಸುವ ಬಗ್ಗೆ ಪರಿಸ್ಥಿತಿಯಿಂದ ಯಾವ ಹೆಚ್ಚಚ್ಚು ಸೂಚನೆಗಳು ದೊರೆಯುವವೋ, ಅವುಗಳನ್ನು ತತ್ಪರತೆಯಿಂದ ಸ್ವಾ[illegible]ವ ಬಗ್ಗೆ ಮನಸ್ಸಿನ ಸಿದ್ಧತೆಯಿರಿಸಿ, ಪಂಡಿತರಾಯನ ಮೇಲಿನ ದೃ[illegible] ತಪ್ಪದವೆ ನಾವು ಅವನ ಹಿಂದಿನಿಂದ ನಡೆದೆವು.

ನಾವೆಲ್ಲರೂ ಒಂದು ದೊಡ್ಡ ಘಟ್ಟ ಹತ್ತಿದ ನಂತರ ನಮಗೆ ಕೊಂಕಣದೊಳಗಿನ ಒಂದು ತೋಟಪಟ್ಟಿಯ ಹಳ್ಳಿಯು ಕಾಣಿಸಿತು. ಆ ಗ್ರಾಮವು ಸಮುದ್ರದ ಒತ್ತಿಗೆ ಹೊಂದಿ ದೂರದ ವರೆಗೆ ಹಬ್ಬಿದ್ದು, ಸಮುದ್ರದ ಸೌಳು ನೀರಿನಿಂದ ಹೊಲ-ಗದ್ದೆಗಳೂ ತೋಟಗಳೂ ಮುಳುಗಬಾರದೆಂದು ಆ ಊರ ಜನರೆಲ್ಲರೂ ಸೇರಿ ಒತ್ತಿನ ಕಡೆಗೆ ಒಂದು ಬಹು ಅಗಲ-ಉದ್ದ-ಎತ್ತರದ ಒಡ್ಡನ್ನು ಕಟ್ಟಿದ್ದರು. ಆ ಒಡ್ಡಿನ ಒಂದು ತಿರುವಿನಲ್ಲಿ ನಾವಿನಿಂದ ಇಳಿಯಲಿಕ್ಕೂ ಹತ್ತಲಿಕ್ಕೂ ದೊಡ್ಡ ದೊಡ್ಡ ಕಲ್ಲುಗಳನ್ನು ಚೆಲ್ಲಿ ಬಂದರದ ಹಾಗೆ ಅನುಕೂಲತೆ ಮಾಡಿದ್ದರು; ಹಾಗು ಅದೇ ಬಂದರದಲ್ಲೇ ಒಂದು ಚಿಕ್ಕ ಹಡಗದಂತಹ ಅಂದರೆ ದೊಡ್ಡ ನಾವು ಲಂಗರ ಹಾಕಿದ್ದ

ರಿಂದ ಸ್ಥಿರವಾಗಿ ನಿಂತದ್ದು ನನಗೆ ಕಾಣಿಸಿತು. ಪಂಡಿತರಾಯನು ಬಂದರದ ದಾರಿಯನ್ನು ಬಿಟ್ಟು ತೆಂಗು-ಹಲಸುಗಳ ತೋಟದೊಳಗಿಂದ ತನ್ನ ಮನೆಯ ಕಡೆಗೆ ಹೊರಳಿದನು; ಆಗ ಮಾತ್ರ ನಾವು ಅವನನ್ನನುಸರಿಸುವದನ್ನು ಬಿಡಬೇಕಾಯಿತು; ಆದರೆ ಇಂದು ರಾತ್ರಿ ಇದೇ ಬಂದರದಲ್ಲಿ, ಲಂಗರ ಹಾಕಿರುವ ಇದೇ ನಾವಿನಿಂದ ಅವನು ವಿಜಯದುರ್ಗಕ್ಕೆ ಹೊರಡುತ್ತಾನೆಂದು ಸಂಪೂರ್ಣವಾಗಿ ತರ್ಕಿಸಿಕೊಂಡು, ನಾನು ಬೇರೆ ದಿಕ್ಕಿಗಿರುವ ಗಿಡ-ಮರಗಳೊಳಗೆ ಹೊಕ್ಕೆನು, ಆದರೆ ಅಲ್ಲಿಂದ ಆ ಬಂದರವು ಸ್ಪಷ್ಟವಾಗಿ ಕಾಣಿಸುತ್ತಿತ್ತು; ಮತ್ತು ಈ ಮೊದಲು ಯಾವ ನನ್ನ ಕಣ್ಣುಗಳು ಪಂಡಿತರಾಯನ ಬೆನ್ನು ಬಿಟ್ಟಿದ್ದಿಲ್ಲವೋ ಅವು ಇನ್ನು ಆ ಬಂದರದೊಳಗಿನ ಆ ನಾವಿನ ಮೇಲೆ ಸಕ್ತ ಪಹರೆಯನ್ನಿರಿಸಿದವು.

ಹಣ್ಣು-ಕಾಯಿಗಳಿಂದ ತುಂಬಿದ್ದ ಆ ತೋಟದಲ್ಲಿ ಬೈರಾಗಿ ವೃತ್ತಿಯ ಒಬ್ಬಿಬ್ಬರಿಗೆ ಅಲ್ಲಿ ಏನು ಕೊರತೆಯಾಗಬೇಕು ? ನಮ್ಮ ಹಸಿವೆಯ ನಿವಾರಣವು ಸಹಜವಾಗಿಯೇ ಆಯಿತು; ಮತ್ತು ಕುಣಕ್ಯಾನ ವಿಯೋಗದ ಸಮಯವು ಇನ್ನು ತೀರ ಸಮೀಪಿಸಿತೆಂದೆನಿಸಲು, ಆತನಲ್ಲಿ ಮೊದಲಿಗಿಂತಲೂ ಹೆಚ್ಚು ನಂಬಿಗೆಯಿರಿಸಿ, ಅವನು ತನ್ನ ಮುಂದಿನ ಆಯುಷ್ಯಕ್ರಮಣಕ್ಕೆ ಹೋಗಿ ಹತ್ತಬೇಕೆಂಬ ಕಾಲ್ಪನಿಕ ಪಾಠಗಳನ್ನು ನಾನು ಆತನಿಗೆ ಹೇಳುತ್ತ ಕಾಲಕ್ರಮಿಸಿದೆನು. ಸಂಸಾರದೊಳಗಿನ ಪಾಠಗಳನ್ನು ಕಲಿಸುವಂತಹ ಅನುಭವವು ನನಗೆ ನಿಜವಾಗಿಯೂ ಇರಲಿಲ್ಲ. ಆದ್ದರಿಂದ ಆ ಅಧಿಕಾರವೂ ನನ್ನದಲ್ಲ. ಮಗಳು ಗಂಡನ ಮನೆಗೆ ಹೊರಟಾಗ, ತಾಯಿಯು ಅವಳಿಗೆ ಉಪದೇಶಿಸುತ್ತಿರುವದು ಸ್ವಂತದ ಅನುಭವದಿಂದ. ಅವಳಿಗಾ ಅಧಿಕಾರ ಬಂದಿರುತ್ತವೆ; ಆದರ ನನಗೆ ಸಂಸಾರದ ಅನುಭವವಿರದಿದ್ದರೂ ಪ್ರೇಮದ ಅನುಭವವಿದ್ದಿತು. ಅಂತೆಯೇ ನಾನು ಆ ಕೆಲಸದ ಶಿಕ್ಷಣ ಕೊಡುವಾಗ ನಾನು ವಿಶೇಷವೇನೂ ಮಾಡುತ್ತಿಲ್ಲವೆಂದು ನನಗನಿಸಿತು.

ಪಂಡಿತರಾಯನಿಗೂ ಕುಣಕ್ಯಾನಿಗೂ ಗಂಟುಬೀಳುವಾಗ ನನ್ನ ಮಧ್ಯಸ್ತಿಕೆಯಿರಕೂಡದೆಂದು ನಾನು ನಿರ್ಧರಿಸಿದ್ದೆನು, ಅಂತೆಯೇ ಆ ನಾವು ಸಾಧಾರಣವಾಗಿ ಯಾವಾಗ ಹೊರಟೀತು, ಎಲ್ಲಿಂದ ಹೊರಟೀತು ? ಮತ್ತು ಕುಣಕ್ಯಾ ಪಂಡಿತರಾಯನಿಗೆ ತನ್ನಷ್ಟಕ್ಕೆ ತಾನು ಹೇಗೆ ಭೆಟ್ಟಿಯಾಗಬೇಕು ? ಇವೆಲ್ಲವುಗಳ ಬಗ್ಗೆ ನಾನೊಂದು ಯೋಜನೆಯನ್ನು ಮನಸ್ಸಿನಲ್ಲಿಯೇ ನಿರ್ಧರಿಸಿ ಅದನ್ನು ಅವನಿಗೆ ತಿಳಿಸಿದೆನು; ಅದು ಅವನಿಗೆ ಸಮ್ಮತವಾಯಿತು. ಅಂದು ಹುಣ್ಣಿವೆಯಾಗಿರದಿದ್ದರೂ ಸ್ವಚ್ಛವಾದ ಬೆಳದಿಂಗಳು ಬಿದ್ದಿರದಿದ್ದರೂ ಒತ್ತಿನಲ್ಲಿ ಒತ್ತುತ್ತಿರುವ ಸಮುದ್ರದ ನೀರು ಹೊಳೆಯುತ್ತಿದ್ದಿತು. ಅದರ ಮೇಲೆ ಆ ನಾವು ಮಂದಗತಿಯಿಂದ ಮೇಲೆ-ಕೆಳಗೆಂದು ಅಲಾ ತ

ತ್ತಿತ್ತು. ಮಧ್ಯರಾತ್ರಿಯಾದ ಬಳಿಕ ಓಹಟಿಗೆ ಪ್ರಾರಂಭವಾಗಲು, ಪಂಡಿತರಾಯು ನೂ ಆತನ ಜೊತೆಯು ಇಬ್ಬರು-ಮೂವರು ಜನರೂ ಆ ನಾವಿನ ಕಡೆಗೆ ಬರಲಿಕ್ಕೆ ಹೊರಟರೆಂಬದನ್ನು ತಿಳಿದು, ನಾನು ಕುಣಕ್ಯಾನೊಡನೆ ಆ ನಾವಿನ ದಿಕ್ಕಿಗೆ ನಾವಿನ ಮಾರ್ಗದಲ್ಲಿ ಇನ್ನೂರು-ಮುನ್ನೂರು ಹೆಜ್ಜೆ ದೂರ ಹೋಗಿ ನಿಂತುಕೊಂಡೆನು. ಬಂದ ಜನರೆಲ್ಲರೂ ನಾವಿನಲ್ಲಿ ಹತ್ತಿದರು. ಅಂಬಿಗರು ಲಂಗರವನ್ನೆತ್ತಿಕೊಂಡರು. ಪಂಡಿತರಾಯನನ್ನು ಆ ಬಂದರದ ವರೆಗೆ ಕಳಿಸ ಬಂದಿದ್ದ ಜನರು ತಮ್ಮ ತಮ್ಮ ಮನೆಗೆ ಹಿಂದಿರುಗಿದರು.

ಆಗ ಗಾಳಿಯು ಸುತರಾಂ ಇರದ್ದರಿಂದ ಅಂಬಿಗರು ಕೇವಲ ತಮ್ಮ ಹುಟ್ಟು ಗಳಿಂದಲೇ ಆ ನಾವನ್ನು ದಂಡೆಗುಂಟ ಸಾಗಿಸುತ್ತಿದ್ದರು. ಆ ನಾವು ಮಂದಗತಿ ಯಿಂದ ಒಡ್ಡಿನ ಬಳಿಯಿಂದ ನಮ್ಮ ಕಡೆಗೆ ಬಂದದ್ದನ್ನು ಕಂಡ ಕೂಡಲೆ ನಾನು, ಕುಣಕ್ಯಾನ ತಲೆಯ ಮೇಲೆ ಕೈಯಿರಿಸಿ:—"ಬೇಟಾ, ದೇವರ ನಾಮವನ್ನುಚ್ಚರಿ ಸುತ್ತ ಇನ್ನು ಈ ನಾವಿನಲ್ಲಿ ಹಾರಿಕೋ" ಎಂದು ಹೇಳಿದೆನು.

ಆ ನಾವಿನೊಳಗಿನ ಜನರಿಗೆ ನಾವಿಬ್ಬರೂ ಹಾಗೆ ಆ ಒಡ್ಡಿನ ಮೇಲೆ ನಿಂತು ದುದು ಕದಾಚಿತ್ ಕಾಣಿಸಿರಲಿಕ್ಕಿಲ್ಲ. ಕಂಡಿದ್ದರೂ ಸಮುದ್ರದ ಭರತಿಯ ಮೂಲಕ ಆ ಒಡ್ಡು ಒಡೆದರೆ ಕೂಡಲೆ ತಿಳಿಸಲಿಕ್ಕೆಂದು ಇರಿಸಿದ್ದ ಕಾವಲುಗಾರರೇ ನಾವಾಗಿರ ಬಹುದೆಂದು ಆ ನಾವು ನಮ್ಮ ಎದುರಿಗೆ ಬರುವ ವರೆಗೂ ಅದರೊಳಗಿನ ಯಾರೂ ನಮ್ಮ ಕಡೆಗೆ ಲಕ್ಷ್ಯವಿರಿಸಿರಲಿಕ್ಕಿಲ್ಲ. ಆಗ ನಮ್ಮ ಲಕ್ಷ್ಯವಾದರೂ ನಮ್ಮ ಕಾರ್ಯ ಸಾಧಿಸುವದರ ಕಡೆಗೇ ಇತ್ತು, ನಮ್ಮ ಕಡೆಗೆ ಯಾರಾದರೂ ನೋಡುವರೋ ಇಲ್ಲ ವೋ ಎಂಬದರ ಕಡೆಗೆ ಅದಿರಲೇ ಇಲ್ಲ. ಅಂತೆಯೇ ಕುಣಕ್ಯಾ ಒಮ್ಮೆಲೆ ಆ ನಾವಿ ನೊಳಗಿನ ಹಲಗೆಯ ಮೇಲೆ ಹಾರಿಕೊಂಡನು, ಮತ್ತು ಅವನು ಒಳಗೆ ಸುರಕ್ಷಿತ ವಾಗಿ ಹಾರಿಕೊಂಡದ್ದನ್ನು ಕಂಡೊಡನೆಯೇ ನಾನು "ಜಯ ಶಂಕರ" "ಜಯ ಭೋಲಾನಾಥ" ಎಂದು ಗಟ್ಟಿಯಾಗಿ ಉಚ್ಚರಿಸಿ, ಆ ನಾವಿನ ಹಿಂಬದಿಗೆ ಒತ್ತಿನಲ್ಲಿ ಹಾರಿಕೊಂಡು ವೇಗದಿಂದ ಈಸಿ, ಪರ ತೀರವನ್ನು ತಲುಪಿದೆನು.

ಈ ಬಗೆಯಾಗಿ ಹನ್ನೆರಡು ವರ್ಷಗಳ ಸಹವಾಸದ ನಂತರ ಕುಣಕ್ಯಾನಿಗೂ ನನಗೂ ವಿಂಗಡವಾಯಿತು. ಅವನ-ನನ್ನ ಮುಂದಿನ ಭೆಟ್ಟಿ ಎಲ್ಲಿ, ಯಾವಾಗ ಮತ್ತು ಹೇಗೆ ಆಯಿತೆಂಬದರ ಸಂಗತಿಯಾದರೂ ಹೀಗೆಯೇ ಮನೋರಂಜಕ ವಾಗಿದೆ; ಅಂತೆಯೇ ನಾನು ಅದನ್ನು ಮುಂದೆ ಎಂದಾದರೂ ನಮ್ಮ ವಾಚಕರಿಗೆ ತಿಳಿ ಸಿಯೇ ತಿಳಿಸುವೆನು.

## ನಾವಿಕಜೀವನದಲ್ಲಿ ಪ್ರವೇಶ.

( ೧ )

ಶ್ರೀ ಕುಣಕೇಶ್ವರನ ಜಾತ್ರೆಯಲ್ಲಿ ಇಡೀ ಹಗಲೆಲ್ಲ ಆದ ಶ್ರಮದಿಂದ ಪಂಡಿತ ರಾಯನು ಹೆಚ್ಚಾಗಿ ದಣಿದಿದ್ದನು. ನಾವು ಸಾಗಹತ್ತಲು ಅವನಿಗೆ ಬಿಡುವೆನಿಸಿತು. ಮನಸ್ಸು ಏಕಾಗ್ರವಾಯಿತು. ನಾವು ನಡೆದ ದಿಕ್ಕಿನ ವಿರುದ್ಧ ದಿಕ್ಕಿಗೆ ಮೋರೆ ಮಾಡಿಕೊಂಡು ಆ ಕಾರಿರುಳೊಳಗಿನ ಸಮುದ್ರದ ದೃಶ್ಯವನ್ನು ನೋಡುತ್ತ ಬಿದ್ದು ಕೊಂಡಿದ್ದನು. ಇಷ್ಟರಲ್ಲಿ ಅವನ ತಲೆಯ ಬಳಿಯ ಹಲಗೆಯ ಮೇಲೆ ಅದೇನೋ ಬಂದು ಬಿದ್ದ ಸಪ್ಪಳವಾಯಿತು. ಆ ನಾವು ತೀರ ಸಣ್ಣದಿರಲಿಲ್ಲ. ಅದರಿಂದ ಆ ಪೆಟ್ಟಿನಿಂದ ಅದು ಅಷ್ಟೊಂದು ಅಲ್ಲಾಡಲಿಲ್ಲ, ಆದರೆ ನೀರ ಮೇಲಿನ ವಾಹನದ ತೂಕವು (Balance) ಬಹು ಸೂಕ್ಷ್ಮವಾಗಿರುತ್ತದಾದ್ದರಿಂದ ಅದರ ಯಾವ ಕಡೆಗೆ ಭಾರವು ಬೀಳುವದೋ ಆ ಕಡೆಗೆ ಅದು ಕೊಂಚವಾದರೂ ಒಲೆಯದಿರುವ ದಿಲ್ಲ. ನಾವೆಯಲ್ಲಿ ಏನೋ ಬಿದ್ದ ಸಪ್ಪಳದಿಂದ ನಾವೆಯ ಚುಕ್ಕಾಣಿ ಹಿಡಿಯು ವವನು ಬೆಚ್ಚಿ ಬಿದ್ದು "ಇವೇನು?" ಎಂದು ಕೂಗಿದನು. ಕೂಡಲೆ ಪಂಡಿತ ರಾಯನು ಹಿಂದಿರುಗಿ ನೋಡಲು, ಟೊಂಕದ ಮೇಲಿನ ಎಲ್ಲ ದೇಹವು ಬತ್ತಲೆ ಯಾಗಿದ್ದ ಒಬ್ಬ ಜಟಾಧಾರಿ ಪೋರನು ಹಲಗೆಯ ಮೇಲೆ ನಿಂತುಕೊಂಡು ತನ್ನ ಜೋಲಿ ಸಂಬಾಳಿಸುತ್ತಿದ್ದನು.

ತನ್ನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿದ್ದ ಮಗಳನ್ನು ಬದಿಗೆ ಎತ್ತಿಟ್ಟವನೇ ಪಂಡಿತರಾಯನು ಎದ್ದು ನಿಂತು ಆ ಪೋರನ ಎರಡೂ ರಟ್ಟೆಗಳನ್ನು ಹಿಡಿದು, ಆ ತಾರಾಮಂಡಲದ ಪ್ರಕಾಶದಲ್ಲಿ ಆತನ ಮೋರೆಯನ್ನು ನಿರಕಿಸಿ ನೋಡಹತ್ತಿದ್ದನು. ಆತನ ಒಬ್ಬ ನೌಕರನೂ ಇಬ್ಬರು ಅಂಬಿಗರೂ ಆ ಪೋರನ ಎದುರಿಗೆ ಬಂದು:—"ನೀನಾರು? ಈ ನಾವೆಯಲ್ಲೇಕೆ ಹಾರಿಕೊಂಡೆ? ಹೇಳು ವೆಯೋ ಇಲ್ಲವೋ?" ಹೀಗೆ ವಿಧವಿಧವಾಗಿ ಕೇಳಿ ಗೊಂದಲವನ್ನೆಬ್ಬಿಸಿದರು. ಆಗ ಪಂಡಿತರಾಯನು ತನ್ನ ಜನರನ್ನು ಕುರಿತು:—"ತಡೆಯಿರಿ; ಸುಮ್ಮನಾಗಿರಿ; ಗೊಂದಲವೆಬ್ಬಿಸಬೇಡಿರಿ. ಈತನಾರೆಂಬದು ತನ್ನಷ್ಟಕ್ಕೆ ತಾನೇ ತಿಳಿಯುವದು" ಎಂದು ಹೇಳಿದನು. ಅವನ ಆ ಶಾಂತಿಯ ಕಾರಣವಿಷ್ಟೇ, ಆ ಪೋರನ ಮುಖ ವನ್ನು ನಿರಕಿಸಿ ನೋಡಲು, ಅವನು ಕುಣಕೇಶ್ವರ ಮಂದಿರಲ್ಲಿ ಭೆಟ್ಟಿಯಾಗಿದ್ದ ಹಾಗು ತನ್ನ ಮಗಳನ್ನು ತಿರುಗಾಡಿಸಿಕೊಂಡು ಬಂದಿದ್ದ ಬೈರಾಗಿಯ ಜೊತೆಯ ಹುಡುಗನೆಂದು ಅವನಿಗೆ ಚೆನ್ನಾಗಿ ಸ್ಮರಿಸಿತು.

ಕೊಂಕಣ ದೇಶದಲ್ಲಿ ಯಾವುದೊಂದು ಅಕಲ್ಪಿತ ಸಂಗತಿಯು ಘಟಿಸಿತೆಂದರೆ, ಅದನ್ನು ಭೂತಚೇಷ್ಟೆಯೆಂದು ತಿಳಿಯುವದರ ಕಡೆಗೇ ಅಲ್ಲಿಯ ಜನರ ಪ್ರಥಮ

ಪ್ರವೃತ್ತಿಯಾಗಿರುತ್ತದೆ. ಅಂಬಿಗರೇ ಮೊದಲಾದ ಜನರು ಅಶಿಕ್ಷಿತರೂ ಭೋಳೇ ಭಾವಿಕರೂ ಆಗಿರುತ್ತಿರುವದರಿಂದ ನಾವಿನಲ್ಲಿ ಹಾರಿಕೊಂಡವನು ಮನುಷ್ಯನೆಂಬದು ಕಾಣುತ್ತಿದ್ದರೂ ಅದು ಭೂತವೆಂದೇ ಅವರು ಕೆಲ ಹೊತ್ತು ಮನಸ್ಸಿನಿಂದ ತಿಳಿಯುವವರು. ಅವರು ಆಗ ಹಾಗೆ ಕಕ್ಕಾವಿಕ್ಕಿಯಾದುದನ್ನು ಕಂಡು ಪಂಡಿತರಾಯನು: "ಇವನು ಈ ಅಪರಾತ್ರಿಯಲ್ಲಿ ಹೀಗೆ ಆಕಸ್ಮಿಕವಾಗಿ ನಾವಿನಲ್ಲಿ ಹಾರಿಕೊಂಡದ್ದೊಂದಿರಲಿ; ಆದರೆ ಈ ಪೋರನನ್ನು ನಾನು ಈ ಮೊದಲು ಕಂಡಿರುತ್ತೇನೆ. ನೀವು ಈ ಬಗ್ಗೆ ಅಂಜಬೇಡಿರಿ" ಎಂದು ಧೈರ್ಯ ಹೇಳಿ, ಆ ಮೇಲೆ ತಾನು ಸ್ವತಃ ಕೆಳಗೆ ಕುಳಿತು, ಆ ಹುಡುಗನನ್ನು ತನ್ನೆದುರಿಗೆ ಕುಳ್ಳಿರಿಸಿಕೊಂಡನು, ಮತ್ತು ನಾವಿಕರಿಗೆ ತಮ್ಮ ಕೆಲಸಕ್ಕೆ ತೊಡಗಲು ಹೇಳಿದನು.

ಮುಂದೆ ಅಲ್ಪಾವಧಿಯಲ್ಲೇ ಓಹಟಿಯ ಪ್ರವಾಹದ ಮೇಲೆ ಆ ನಾವು ತನ್ನಷ್ಟಕ್ಕೆ ತಾನೇ ಸಾಗಹತ್ತಿತು. ಆಗ ನಾವಿಕರು ನಾವನ್ನು ಒತ್ತಿನ ದಂಡೆ ಬಿಡಿಸಿ ಮಧ್ಯ ಪಾತ್ರಕ್ಕೆ ತಂದರು; ಹಾಗು ಅವರೂ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಸ್ವಸ್ಥವಾಗಿ ಕುಳಿತರು. ಒರಿಯ ಚುಕ್ಕಾಣಿ ಹಿಡಿಯುವವನು ಮಾತ್ರ ಚುಕ್ಕಾಣಿವಿನ ಮೇಲೆ ಕೈಯಿರಿಸಿ, ತನಗೆ ಬೇಕಾದ ಕಡೆಗೆ ನಾವನ್ನು ತಿರುಗಿಸಿ, ಗತಿಯನ್ನು ಆಗಾಗ್ಗೆ ಬದಲಿಸುತ್ತಿದ್ದನಷ್ಟೇ.

ಈ ಮಧ್ಯದಲ್ಲಿ ನಡೆದ ಗೊಂದಲದಿಂದ ಪಂಡಿತರಾಯನ ಮಗಳು ಎಚ್ಚತ್ತಳು; ಆದರೆ ಪಂಡಿತರಾಯನು ಅವಳನ್ನು ಚುಕ್ಕು ಒಡೆದು:—"ಮಲಗು, ತಂಗೀ, ಮಲಗು; ವಿಶೇಷವೇನೂ ಇಲ್ಲ" ಎಂದು ಹೇಳಿದ ಕೆಲ ನಿಮಿಷಗಳಲ್ಲೇ ಆಕೆಗೆ ಮತ್ತೆ ನಿದ್ದೆ ಹತ್ತಿತು. ಪಂಡಿತರಾಯನು ಈ ಮೊದಲು ನಾವಿನ ಮೇಲೆ ಆಡ್ಡಾಗಿ ಕಾರಿರುಳಿನಲ್ಲಿ ಕಾಣುವ ಸಮುದ್ರದ ದೃಶ್ಯ ನೋಡುವದು ಮಾತ್ರ ನಿಂತು ಹೋಯಿತು. ಅವನ ವಿಚಾರಗಳಿಗೊಂದು ಹೊಸ ವಿಷಯವೇ ದೊರೆಕಿತು. ಅದರಿಂದ ಅವನು ಆ ಪೋರನೊಡನೆ ಮಾತನಾಡಲುಪಕ್ರಮಿಸಿದನು:—

"ಏನೋ ತಮ್ಮಾ, ನಿನ್ನೆ ಕುಣಕೇಶ್ವರದಲ್ಲಿ ಆ ಬೈರಾಗಿಯೊಡನೆ ಇದ್ದವನು ನೀನೇ ಅಲ್ಲವೇ?" "ಅಹುದು."

"ಹಾಗಾದರೆ ನೀನೊಬ್ಬನೇ ಇತ್ತೆತ್ತ ಬಂದೆ?"

"ನಾನೊಬ್ಬನೇ ಬಂದಿಲ್ಲ. ಈ ನಾವೆಯಲ್ಲಿ ನಾನು ಹಾರಿಕೊಳ್ಳುವವರೆಗೂ ನನ್ನ ಗುರುಗಳು-ಬೈರಾಗಿಗಳು-ನನ್ನೊಡನೆ ಆ ಒಡ್ಡಿನ ಮೇಲೆ ನಿಂತುಕೊಂಡಿದ್ದರು. ನಾನು ನಾವಿನೊಳಗೆ ಹಾರಿಕೊಂಡೊಡನೆಯೇ ಅವರು ಸ್ವತಃ ಚುಕ್ಕಾಣಿವಿನ ಕಡೆಗೆ ಒತ್ತಿನಲ್ಲಿ ಹಾರಿಕೊಂಡರು; ಮತ್ತು ಅಗೋ, ಅತ್ತ ನೋಡಿರಿ; ಒತ್ತಿನಲ್ಲಿ

ಈಸುತ್ತ ಅವರು ಆಚೇ ದಂಡೆಗೆ ತಲುಪಿದ್ದು, ಆ ಬದಿಯ ಒಡ್ಡಿನ ಮೇಲೆ ಹೋಗುತ್ತಿರುವರು. ನೀರಲ್ಲಿ ದುಮುಕುವಾಗ 'ಜಯ ಶಂಕರ' 'ಜಯ ಭೋಲಾನಾಥ' ಎಂದು ಅವರು ಕೂಗಿದ್ದನ್ನು ತಾವು ಕೇಳಲಿಲ್ಲವೇ ?"

"ಹೌದು, ಕೇಳಿದಂತಾಯ್ತು; ಆದರೆ ನಿನ್ನ ಹಾರಿಕೆಯಿಂದ ನಮ್ಮ ಲಕ್ಷ್ಯವೆಲ್ಲ ಇತ್ತ ಕಡೆಗೇ ಹೊರಳಿತು. ಅದಿರಲಿ. ನೀನು ಹೀಗೆ ಈ ನಾವೆಯಲ್ಲೇಕೆ ಹಾರಿಕೊಂಡೆ ?"

"ಈ ನಾವೆಯೊಳಗಿಂದ ನಾನು ನಿಮ್ಮೊಡನೆ ಬರಬೇಕಾಗಿತ್ತು, ಮತ್ತು ಹಾಗೆ ನನ್ನನ್ನು ನಿಮ್ಮೊಡನೆ ಕರೆದೊಯ್ಯಿರೆಂದು ನಿಮ್ಮನ್ನು ಕೇಳಿದ್ದರೆ ನೀವು ನನ್ನ ಮಾತನ್ನು ಲಕ್ಷಿಸುತ್ತಿರಲಿಲ್ಲ."

"ಅದೇಕಪ್ಪಾ! ನಿನ್ನನ್ನೇ ಏಕೆ, ನಿನ್ನ ಗುರುವನ್ನೂ ಬಡಪಾಯಿಗಳಾದ ಯಾತ್ರಿಕರೆಂದು ನಾನು ನಮ್ಮ ನಾವಿನೊಳಗಿಂದ ವಿಜಯದುರ್ಗದ ವರೆಗೂ ಒಯ್ಯುತ್ತಿದ್ದೆನಲ್ಲ!"

"ಅಹುದು; ಅದು ನಿಜವೇ. ಹಣ-ಕಾಸು ಕೊಡದೆ, ತಿಕೀಟು ಪಡೆಯದೆ ಬೇಕಾದವರ ವಾಹನ-ರೈಲುಗಳಲ್ಲಿ ಅಡ್ಡಾಡುವದು ಯಾತ್ರಿಕರಿಗೆ ರೂಢಿಯೇ ಇರುತ್ತವೆ, ಆದರೆ ನಾನು ಯಾತ್ರಿಕನೆಂದು ಹೊರಟಿರಲಿಲ್ಲ. ಆದುದರಿಂದ ನೀವು ಯಾತ್ರಿಕರನ್ನು ಬಿಟ್ಟಿಯಾಗಿ ನಿಮ್ಮ ನಾವಿನೊಳಗಿಂದ ಒಯ್ಯುವ ಸಜ್ಜನರಿರುತ್ತೀರೆಂಬದು ನನಗೆ ಹೊಳೆಯಲಿಲ್ಲ."

"ನಿನ್ನಂತೆ ನಿನ್ನ ಗುರುವಾದರೂ ಈ ನಾವೆಯಲ್ಲೇಕೆ ಹಾರಿಕೊಳ್ಳಲಿಲ್ಲ?"

"ಈ ಪ್ರದೇಶದಿಂದ ನಮ್ಮ-ಅವರ ಮಾರ್ಗಗಳು ಭಿನ್ನವಾಗತಕ್ಕವಿದ್ದವೆಂದು ಅವರು ಇದರಲ್ಲಿ ಹಾರಿಕೊಳ್ಳಲಿಲ್ಲ. ಅವರು ಈ [illegible]ನ್ನು ದಾಟಿದ ಬಳಿಕ ಕಾಶಿ-ಪ್ರಯಾಗಗಳ ಕಡೆಗೆ ಕಾಲುದಾರಿಯಿಂದ ತೆರಳಲಿರುವರು, ಆದರೆ ನನಗಿನ್ನು ಯಾವ ಯಾತ್ರೆಗೂ ಹೋಗತಕ್ಕದ್ದಿಲ್ಲ. ಅವರು 'ಚೇಲಾ' ಎಂದು ನನಗೆ ತಮ್ಮ ದೀಕ್ಷೆ ಕೊಡುವದನ್ನು ರಹಿತ ಪಡಿಸಿ, ಇನ್ನು 'ಸಂಸಾರ ಮಾಡ ಹೋಗು' ಎಂದು ಆಶೀರ್ವದಿಸಿ ನನ್ನನ್ನಿಲ್ಲಿ ಬಿಟ್ಟುಕೊಟ್ಟಿರುತ್ತಾರೆ."

"ಹಾಗಾದರೆ ಹೀಗೆ ಅಸಂಭಾವ್ಯ ಕಗ್ಗೋಲ-ಮುಗ್ಗೋಲ ಪಾಟನಿಂದ ಈ ನಾವೆಯಲ್ಲಿ ಅಪರಾತ್ರಿಯಲ್ಲಿ ಹಾರಿಕೊಳ್ಳೋಣವು ಸಂಸಾರದಲ್ಲಿ ಪ್ರವೇಶಿಸುವ ಮೊದಲನೇ ಪಾಠವೆಂದು ನೀನು ಅನುಸರಿಸಿದೆಯೋ ಏನು ?"

"ಇಲ್ಲ. ನನಗೆ ನನ್ನ ಗುರುವು ಅಪ್ಪಣೆ ಮಾಡಿದನೇನಂದರೆ, ಈ ಗೃಹಸ್ಥರು ನಿನಗೆ ನಿನ್ನ ಮುಂದಿನ ಆಯುಷ್ಯದಲ್ಲಿ ಮಾರ್ಗದರ್ಶಿಗಳಾಗುವರೆಂದೂ ನಿನ್ನ

ಕಲ್ಯಾಣ ಮಾಡುವರೆಂದೂ. ಕುಣಕೇಶ್ವರನ ಮಂದಿರದಲ್ಲಿ ನೀವು ನಿಮ್ಮ ಮಿತ್ರ ನೊಡನೆ ಮಾತನಾಡುವಾಗ ಕೊಂಕಣದೊಳಗಿನ ತರುಣ ಹುಡುಗರನ್ನು ದೇಶ ಕ್ಕೊಯ್ದು ನೀವು ಅವರಿಗೆ ನೌಕರಿ-ಚಾಕರಿ ದೊರೆಕಿಸಿ ಕೊಡುತ್ತೀರಿ; ಅನ್ನಕ್ಕೆ ಮಾರ್ಗ ಮಾಡಿಕೊಡುತ್ತೀರಿ. ಕೆಲಸ ಕಲಿಸುತ್ತೀರಿ; ಅವರಿಂದ ಪರಾಕ್ರಮ ಮಾಡಿಸುತ್ತೀರಿ ಎಂದು ತಿಳಿಯಿತು. ಅಂತೆಯೇ ನನ್ನ ಗುರುವು ನನಗೆ ತನ್ನ ಚೇಲಾತನವನ್ನು ಬಿಡಲಿಕ್ಕೂ ಈ ಹೊಸ ಗುರುವಿನ ಚೇಲಾ ಆಗಲಿಕ್ಕೂ ಅಜ್ಞೆ ಮಾಡಿರುವನು."

"ಬೇಕಾದವರ ಚೇಲಾ ಆಗಿ ಶಿಷ್ಯತ್ವವನ್ನು ವಹಿಸುವ ನಿನ್ನ ಮಾರ್ಗವು ಅಪೂರ್ವ ಮತ್ತು ಸಾಹಸದ್ದಾಗಿ ತೋರುತ್ತದೆ; ಆದರೆ ನೀನು ನಿನ್ನೆ ಹಗಲಿನಲ್ಲಿ ಯೇ ನನ್ನನ್ನು ಕಂಡು ನನ್ನೊಡನೆ ಬರುವ ನಿನ್ನ ಇಂಗಿತವನ್ನು ನನಗೆ ತಿಳಿಸ ಬಹುದಿತ್ತಲ್ಲ?"

"ನಾನು ಆ ಬೈರಾಗಿಯ ಪೋರನು; ಕೊಂಕಣದ ಹುಡುಗನಲ್ಲ; ಯಾವ ನೊಬ್ಬ ಉತ್ತರ ಹಿಂದುಸ್ತಾನದ ಹುಡುಗನೆಂದು ತಮಗೆನಿಸಬಹುದಿತ್ತು. ಬೈರಾಗಿ-ಗೋಸಾವಿಗಳ ಎಳೆತವೆಲ್ಲ ಉತ್ತರದ ಕಡೆಗೇ; ಇತ್ತ ಕೆಳಗೆ ಕೊಂಕಣ ನಾಡಿನಲ್ಲಿ ಅವರು ಹೆಚ್ಚಾಗಿ ಕಂಡುಬರುವದಿಲ್ಲ; ಮತ್ತು ನಮ್ಮ ಗುರುಗಳು ನನಗೆ ಹೇಳಿದ ರೇನಂದರೆ, ನೀನು ಕೊಂಕಣದ ಪೋರನಿರುತ್ತೀ. ಅದರಿಂದ ಆ ಗೃಹಸ್ಥರು ಅಂದರೆ ನೀವು ನನ್ನ ಮೇಲೆ ಕೃಪೆಯಿರಿಸಿ, ನಿಮ್ಮ ಆಶ್ರಯದಲ್ಲಿರಿಸಿಕೊಂಡು ನನ್ನನ್ನು ಹೆಸರುವಾಸಿಯನ್ನಾಗ ಮಾಡುತ್ತೀರೆಂದು.... ..."

"ಆದರೆ ನಿನ್ನ ಗುರುವು ಕೊಂಕಣದ ಪೋರನೆಂದ ಮಾತ್ರಕ್ಕೆ ನನಗದು ಖಾತ್ರಿಯಾಗುವ ಬಗೆ ಹೇಗೆ?"

"ಅಹುದು. ಅದೇನೋ ನಿಜ; ಆದರೆ ನನ್ನ ಗುರುಗಳೆಂದೂ ಸುಳ್ಳಾಡು ತ್ತಿರುವದಿಲ್ಲ."

"ಒಳ್ಳೇ ಶಿಷ್ಯನಿಗೊಪ್ಪಬಹುದಾದುದನ್ನೇ ನೀನು ಹೇಳಿದೆ, ಆದರೆ ನಿನ್ನ ಗುರುವಂತೂ ನನ್ನ-ನಿನ್ನ ಗಂಟು ಹಾಕಿ ಹೊರಟು ಹೋದನು! ಈಗ ಕೇವಲ ನನ್ನ-ನಿನ್ನಲ್ಲೇ ಗಂಟು ಬಿದ್ದಿದೆ; ಅಂದಬಳಿಕ ನೀನು ಕೊಂಕಣದ ಪೋರನೇ ಎಂಬದನ್ನು ನೀನು ನನಗೆ ಹೇಗೆ ಖಾತ್ರಿಕೊಡುವೆ?"

ಇದನ್ನು ಕೇಳಿ ಆ ಪೋರನು ತೆಪ್ಪಗಾದನು; ಆದರೆ ಅವನು ಕೊಂಚವೇ ಯೋಚಿಸಿ:—"ನಾನು ಚಿಕ್ಕವನಿದ್ದೇನೆ; ಆದುದರಿಂದ ನನ್ನ ಗುರುಗಳ ಮಾತನ್ನು ನಂಬಿ ನನ್ನನ್ನು ಕೊಂಕಣದ ಪೋರನೇ ಎಂದೆನ್ನಿರಿ. ಇನ್ನೊಮ್ಮೆ ನನಗೆ ನನ್ನ ಗುರುಗಳ ಭೆಟ್ಟಿಯಾದಾಗ, ನಾನು ಈ ಬಗ್ಗೆ ಅವರ ಸಮಕ್ಷವೇ ನಿಮ್ಮ ಖಾತ್ರಿ

ಮಾಡಿ ಕೊಟ್ಟೇನು. ನನ್ನ ಮಟ್ಟಿಗೆ ನಾನು ಇಂದಿಗೆ ನಿಮಗೆತಿಳಿಸುವೆನೇನಂದರೆ ನನಗೆ ಕೊಂಕಣ ಪ್ರಾಂತವು ಹೆಚ್ಚು ರುಚಿಸುತ್ತದೆಂದೇ ನನ್ನನ್ನು ಕೊಂಕಣದ ಹುಡುಗನೆಂದಂಬು ಬಿಡಿರಿ."

"ಭಲೆ! ಭಲೆ! ನೀನು ಹೇಳಿದ ಕಾರಣವು ಯೋಗ್ಯವಿದೆ; ಆದರೆ ನಿನಗೆ ಕೊಂಕಣವು ರುಚಿಸಲಿಕ್ಕೇನು ನೀನು ಇಲ್ಲಿ ಈ ಮೊದಲೆಂದಾದರೂ ವಾಸಿಸಿದ್ದೆಯಾ?"

"ಇಲ್ಲ; ಮತ್ತು ಅಂತೆಯೇ ಚೋಜಿಗವೆನಿಸುವುದೇನಂದರೆ—ನಾನು ಕೊಂಕಣದೊಳಗೆ ಚಿಕ್ಕಂದಿನಲ್ಲಿ ವಾಸಿಸಿರದಿದ್ದರೂ ನನಗೆ ಕೊಂಕಣವು ರುಚಿಸುತ್ತದೆ!"

ಈ ಪೋರನಿಗಿನ್ನು ಹಲವು ಅಡ್ಡತಿಡ್ಡ ಪ್ರಶ್ನೆಗಳನ್ನು ಕೇಳಿ ಇವನನ್ನು ಕುಂಠಿತನನ್ನಾಗಿ ಮಾಡುವದರಲ್ಲರ್ಥವಿಲ್ಲ. ಇವನು ತನ್ನಲ್ಲಿ ಸೇರಲಿಕ್ಕೆಂದು ಈ ವಿಲಕ್ಷಣ ಮಾರ್ಗವನ್ನು ಹಿಡಿದಿದ್ದರೂ ಈತನು ನಿರುಪದ್ರವಿಯಾದ ಪ್ರಾಣಿಯೇನೋ ನಿಜ. ಹುಡುಗ ಎಳಕನಾಗಿ ಕಾಣುತ್ತಾನೆ. ಆದರೂ ಉತ್ತರಕ್ಕೆ ಪ್ರತ್ಯುತ್ತರ ಕೊಡುವಂತಹ ಚಾಲಾಕ ಬುದ್ಧಿಯುವನಾಗಿರುವನು; ಹಾಗು ಮಹಾರಾಷ್ಟ್ರ ಭಾಷೆ ಯನ್ನು ಚೆನ್ನಾಗಿ ಆಡುವನು. ಆದುದರಿಂದ ಈತನು ಪ್ರತ್ಯಕ್ಷ ಕೊಂಕಣದಲ್ಲಿರು ವವನಲ್ಲದಿದ್ದರೂ ಕೊಂಕಣದಲ್ಲಿ ವಾಸಿಸುವವರ ಆಪ್ತೇಷ್ಟನಾಗಿರಬೇಕು; ಅಥವಾ ಯಾರೊಬ್ಬ ಭೋಳೇ ಭಾವಿಕ ತಂದೆ-ತಾಯಿಗಳು ಹರಕೆ ತೀರಿಸಲೆಂದು ಇವನನ್ನು ಆ ಬೈರಾಗಿಯ ವಶಪಡಿಸಿರಬೇಕು, ಮತ್ತು ಆ ಬೈರಾಗಿಯಾದರೂ ಶ್ರೀ ಕುಣಕೇಶ್ವರ ಮಂದಿರದೊಳಗಿನ ನಮ್ಮ ಸಂಭಾಷಣದಿಂದ ಎಳೆ ಹಚ್ಚಿ ನನ್ನೊಡನೆ ಹೀಗೆ ಸಂಧಾನ ಕಟ್ಟಿರೆಂದು ಇವನಿಗೆ ಸಲಹೆಯಿತ್ತಿರಬೇಕು. ಇತ್ಯಾದಿ ವಿವೇಕದ ವಿಚಾರವನ್ನು ಮನಸ್ಸಿನಲ್ಲಿ ತಂದುಕೊಂಡು ಪಂಡಿತರಾಯನು ಕೊನೆಗೆ ಆ ಹುಡುಗನಿಗೆ ಸ್ವಾಭಾ ವಿಕವಾದ ಮತ್ತು ಪ್ರಾಮುಖ್ಯವಾದ ಒಂದೇ ಒಂದು ಪ್ರಶ್ನೆಯನ್ನು ಕೇಳಿದನು. ಅದೇನಂದರೆ:—"ಒತ್ತನ್ನು ಈಸಿ ಹೋದ ಬೈರಾಗಿಯು ನಿನ್ನ ಗುರುವು; ಆದರೆ ನಿನ್ನ ತಂದೆ-ತಾಯಿಗಳಾರು?"

ಆಗ ಕುಣಕ್ಯಾನು ಆಕಾಶದ ಕಡೆಗೆ ನೋಡಿ, ಕೈಮುಗಿದು ನಡುಗುವ ದನಿ ಯಿಂದ:—"ನನ್ನ ತಂದೆ-ತಾಯಿಗಳಾರು ಎಂಬುದು ದೇವರ ಆಣೆಯಾಗಿಯೂ ದೇವರೇ ಬಲ್ಲ! ಆ ಬೈರಾಗಿಯೇನೂ ನನ್ನ ತಂದೆಯಲ್ಲ; ಆದರೂ ಕೂಡ ನನ್ನ ತಂದೆ-ತಾಯಿಗಳಾರೆಂಬದನ್ನು ಅವರು ನನಗೆಂದೂ ಹೇಳಿಲ್ಲ; ಮತ್ತು ಅವರ ಪ್ರೇಮದ ಸಲುವಾಗಿ ನಾನಾದರೂ ಇದನ್ನು ನಾನವರಿಗೆಂದೂ ಕೇಳಿಲ್ಲ."

ದಿಟ್ಟ ಭಾವನೆಯ ಈ ಪ್ರಾಮಾಣಿಕ ಉತ್ತರವನ್ನು ಕೇಳಿ ಇನ್ನು ಈತನಿಗೆ ಯಾವುದನ್ನೂ ಕೇಳಕೂಡದೆಂದು ಪಂಡಿತರಾಯನು ನಿರ್ಧರಿಸಿದನು; ಮತ್ತು:—

"ಏನೇ ಇರಲಿ. ನನಗಂತೂ ನೀನು ಸಜ್ಜನನೆಂದೇ ಕಾಣುತ್ತೀ. ನಾನು ನಿನ್ನನ್ನು ನನ್ನ ಜೊತೆಗಂತೂ ಒಯ್ದೇ ಒಯ್ಯುತ್ತೇನೆ, ಆದರೆ ಮುಂದೆ ನಿನ್ನದೇನಾಗುವದು, ಅಥವಾ ನಾನು ನಿನಗೆಂತು ಸಹಾಯವೀಯುವೆನು? ಅದೆಲ್ಲ ವಿಚಾರ ಈಗ ಬೇಡ. ನಾವುಗಳು ವಿಜಯದುರ್ಗಕ್ಕೆ ತಲುಪಲು ಇನ್ನೂ ಎಷ್ಟೋ ವೇಳೆ ಹಿಡಿದೀತು. ಬೆಳಗಂತೂ ಹರಿದೇ ಹರಿದೀತು, ಆದ್ದರಿಂದ ನೀನೀಗ ಮಲಗಿಕೋ, ನಾನೂ ಮಲಗುತ್ತೇನೆ" ಎಂದು ಹೇಳಿ, ತನ್ನ ಬಳಿಯಲ್ಲಿದ್ದ ಒಂದು ಜಮಖಾನಿಯನ್ನು ಕುಣಕ್ಯಾನ ಕಡೆಗೆ ಎಸೆದನು; ಹಾಗು ತಾನು ನಾವೆಯ ಮೇಲೆ ನೌಕರನು ಹಾಸಿಟ್ಟಿದ್ದ ತನ್ನ ಹಾಸುಗೆಯ ಮೇಲೆ ಅಡ್ಡಾದನು. ಮೇಲೆ ಆಕಾಶದಲ್ಲಿ ಬೆಳದಿಂಗಳೊಳಗೆ ಕಾಣುವ ಪ್ರಕಾಶವನ್ನು ನೋಡನೋಡುತ್ತಿರುವಾಗಲೆ ಆತನಿಗೆ ನಿದ್ದೆ ಹತ್ತಿತು, ಆದರೆ ಅವನು ತಾನು ಮಲಗುವ ಮುಂಚೆ ನಾವೆಯ ಅಂಬಿಗರಿಗೂ ತನ್ನ ಚಾಕರರಿಗೂ ಬಜಾಯಿಸಿಟ್ಟಿದ್ದನೇನಂದರೆ, ಈ ಪೋರನು ನಮ್ಮ ನಾವೆಯಲ್ಲಿ ಹಾರಬಾರದಾಗಿದ್ದರೂ ಕೂಡ ಹಾರಿಬಿಟ್ಟಿರುತ್ತಾನೆ, ಆದರೆ ಈ ಬಗ್ಗೆ ಈತನ ಕಡೆಗೇನೂ ಮಾತಿಲ್ಲ. ವಿಕ್ಷಿಪ್ತರಾದ ಗೋಸಾವಿ-ಬೈರಾಗಿಗಳಂತಹ ಗುರುಗಳಿದ್ದರೆಂದರೆ, ಅವರುಗಳ ಚೇಲೇಗಳು ಹೀಗೆಯೇ ಏನಾದರೊಂದು ವಿಧದ ಅಘಟಿತ ಕಾರ್ಯ ಮಾಡುವದೊಂದು ಲೋಕದ ರೀತಿಯೇ ಆಗಿದೆ ಇನ್ನು ನೀವಿವನಿಗೇನೂ ಅನ್ನಬೇಡಿರಿ. ಇವನನ್ನು ಸ್ವಸ್ಥವಾಗಿ ಮಲಗಗೊಡಿರಿ. ನಾಳೆ ಬೆಳಿಗ್ಗೆ ವಿಜಯದುರ್ಗಕ್ಕೆ ತಲುಪಿದ ಮೇಲೆ ಮುಂದೆ ಈತನ ವ್ಯವಸ್ಥೆಯನ್ನೇನು ಮಾಡುವದೆಂಬದನ್ನು ನಾನಾಗಲಿ ಇವನೇ ಸ್ವಂತಾಗಲಿ ನಿರ್ಧರಿಸುವೆವು

( ೨ )

ಆ ನಾವೆಯು ಮರು ದಿವಸ ವಿಜಯದುರ್ಗಕ್ಕೆ ತಲುಪಿತು ಬೆಳಿಗ್ಗೆ ಪಂಡಿತರಾಯನ ಮಗಳು ಎಚ್ಚತ್ತ ಬಳಿಕ ಅತ್ತಿತ್ತ ನೋಡುತ್ತಿರುವಾಗ ಅವಳ ದೃಷ್ಟಿಯು ಆ ಪೋರನ ಮೇಲೆ ಬಿತ್ತು. ಕೂಡಲೆ ಅವಳು ಆತನನ್ನು ಗುರ್ತಿಸಿದಳು, ಮತ್ತು ತನ್ನ ತಂದೆಯನ್ನು ಕುರಿತು:—"ಅಪ್ಪಾ, ನಿನ್ನೆಯ ದಿನ ಇದೇ ಹುಡುಗನು ನಮಗೆ ದೇವಮಂದಿರದಲ್ಲಿ ಕೂಡಿದ್ದನು ಈತನೇ ನನಗೆ ಹೂಗಳನ್ನು ಕೊಯ್ದುಕೊಟ್ಟನು; ನೇರಿಲ, ಕದಳಿ ಹಣ್ಣುಗಳನ್ನು ತಂದು ಕೊಟ್ಟನು. ಅಪ್ಪಾ, ಇವನು ನಮ್ಮೊಡನೆಯೇ ಬರುವನಲ್ಲವೇ?" ಮತ್ತು ತಂದೆಯು ಉತ್ತರಕ್ಕಾಗಿ ತಡೆಯದೆ, ಅವಳೇ ಆ ಪೋರನನ್ನು ಕುರಿತು:—"ಬೈರಾಗೀ, ನಮ್ಮೊಡನೆ ನಡೆ. ವಿಜಯದುರ್ಗದಲ್ಲಿ ದೇವಾಲಯಗಳಿವೆ, ಹೂವಿನ ಗಿಡಗಳಿವೆ; ಮತ್ತು ನೇರಿಲ-ಕದಳೀ ಹಣ್ಣುಗಳೂ ಇರಬಹುದು." ಎಂದಂದಳು.

ತನ್ನ ಮಗಳ ಆ ನುಡಿಗಳನ್ನು ಕೇಳಿದ ಬಳಿಕ ಆ ಪೋರನನ್ನು ತಮ್ಮೊಡನೆ ಒಯ್ಯಬೇಕೋ ಅಥವಾ ಇವನನ್ನು ನಡುವೆ ಎಲ್ಲಾದರೂ ಇಳಿಸಬೇಕೋ ಎಂಬ ಪ್ರಶ್ನೆಯೇ ಪಂಡಿತರಾಯನಲ್ಲುದ್ಭವಿಸಲಿಲ್ಲ. ಅದರಿಂದ ಮುಂದೆ ಏನೂ ಮಾತ ನಾಡವೆ ಅವನು ಆತನನ್ನು ತನ್ನೊಡನೆ ಕರೆದೊಯ್ದನು.

ಪಂಡಿತರಾಯನ ನಾವೆಯು ವಿಜಯದುರ್ಗ ಬಂದರಕ್ಕೆ ತಲುಪಿದಾಗ ಸ್ವಚ್ಛ ವಾಗಿ ಬೆಳಗಾಗಿತ್ತು. ಕೊಂಕಣದೊಳಗಿನ ವಸಂತ ಋತುವಿನ ಪ್ರಾತಃಕಾಲವು ಅತ್ಯಂತ ಸುಪ್ರಸನ್ನವೂ ಉಲ್ಲಾಸದಾಯಕವೂ ಆಗಿರುತ್ತದೆ. ಶೀತಲ ಆದರೂ ಬೆಚ್ಚಗಿನ ಗಾಳಿ ಬೀಸಲಿಕ್ಕೆ ಪ್ರಾರಂಭವಾಗಿರುತ್ತದೆ. ಹಲವು ಜಾತಿಯ ಹೂಗಳ ಹಾಗು ಮುಗುಳುಗಳ ಸಮ್ಮಿಶ್ರ ಸುಗಂಧವು ಆನಂದವನ್ನುಂಟು ಮಾಡುತ್ತದೆ. ಅದರಂತೆಯೇ ಇಡೀ ವರ್ಷದ ಬೇರೆ ಯಾವ ಕಾಲದಲ್ಲೂ ಕಿವಿಗೆ ಕೇಳಿಸದಿದ್ದ ಅನೇಕ ಜಾತಿಯ ಸವಿ ಆಲಾಪಗಳನ್ನು ಆ ಋತುವಿನಲ್ಲಿ ಪಕ್ಷಿಗಣಗಳು ಮೊಟ್ಟ ಮೊದಲೇ ಮಾತಹತ್ತುತ್ತವೆ ಆಹಹ! ಎಂಥ ನಾಜೂಕ ಸ್ವರವೈಚಿತ್ರ್ಯವದು? ಮತ್ತು ಎಷ್ಟು ಸವಿಯಾದ ಕಿಲಿಬಿಲಿಯದು? ಅವುಗಳ ಸರತಿಯ ಮೇಲಿನ ಸರತಿಯ ಆಲಾಪಗಳನ್ನು ಕೇಳಿದರೆ ಶ್ರೀಗಣೇಶೋತ್ಸವದಲ್ಲಿ ವೇದಪಠಣಕ್ಕಾಗಿ ಎದುರು ಬದುರು ಕುಳಿತ ಹಾರುವರೋ ಎಂಬಂತೆನಿಸುತ್ತಿತ್ತು. ಅದರಂತೆಯೇ ಆ ಕಡೆಯ 'ಸತ್ತುವರಹಾಬು' ಕರ್ರಕರ್ರ ಎಂದು ಧ್ವನಿಗೈಯ್ಯುತ್ತ ತನ್ನ ಪರೋಪಕಾರೀ, ಆದರೆ ಶ್ರೀಮಂತ ಜೀವನದ ಆಖ್ಯಾಯಿಕೆಯನ್ನು ಕೇಳಿಕೊಳ್ಳುವವರ ಕಿವಿಗೆ ಆದು ಚೆನ್ನಾಗಿ ಕೇಳಿಸುತ್ತಿರುತ್ತದ.

ಒಂದಂವಲ್ಲಿ ಸುಭೇದಾರನ ಕಚೇರಿಯೊಳಗಿನ ಇಬ್ಬರು ಆಳುಗಳು ನಿಂತು ಕೊಂಡಿದ್ದರು. ಕೂಡಲೆ ಅವರು ನಾವೆಯೊಳಗಿನ ಪಂಡಿತರಾಯನ ಸಾಮಾನನ್ನೆಲ್ಲ ಕೆಳಗಿಳಿಸಿಕೊಂಡರು. ಒಬ್ಬನು ನರ್ಮದೆಯ ಕೈ ಹಿಡಿದು ಅವಳನ್ನು ನಾವೆಯಿಂದ ಮೆಲ್ಲನೆ ಕೆಳಗಿಳಿಸಿಕೊಂಡನು. ಇನ್ನೊಬ್ಬನು ಪಂಡಿತರಾಯನಿಗೆ ಕೈಕೊಟ್ಟನು; ಆದರೆ ಕುಣಕ್ಯಾನು ಮಾತ್ರ ಯಾರ ಕೈಯ ಪ್ರತೀಕ್ಷೆಯನ್ನೂ ಮಾಡದೆ, ಚೆಂಡಿ ನಂತೆ ಟಣ್ಣನೆ ನಾವೆಯಿಂದ ದಂಡೆಗೆ ಹಾರಿಕೊಂಡನು. ಆ ಆಳುಗಳೊಡನೆ ಎಲ್ಲರೂ ದುರ್ಗವನ್ನು ಹೊಕ್ಕು ಸುಭೇದಾರನ ವಾಡೆಯನ್ನು ಪ್ರವೇಶಿಸಿದರು.

ಆ ವಾಡೆಯಲ್ಲಿ ಸದರಿನ ಮೇಲೆ ಪಂಡಿತರಾಯನ ಭಗಿನೀಪತಿಯಾದ ಹರಿ ಶಾಸ್ತ್ರಿಗಳು ಶುಚಿರ್ಭೂತರಾಗಿ ಕೈಯಲ್ಲಿ ಜಪಮಾಲೆಯನ್ನು ಧರಿಸಿಕೊಂಡು ಬೀಗನ ಮಾರ್ಗವನ್ನೇ ನಿರೀಕ್ಷಿಸುತ್ತ ಕುಳಿತಿದ್ದರು. ಅಗಮಿಸಿದವರೆಲ್ಲರೂ ಕೈಕಾಲು ತೊಳೆದರು. ಬಳಿಕ ನರ್ಮದೆಯು ನೆಟ್ಟಗೆ ನಡುಮನೆಗೆ ನಡೆದಳು. ಪಂಡಿತ

ರಾಯನು ತನ್ನ ಉಡುಪನ್ನು ಬಿಚ್ಚಿಟ್ಟನು; ಹಾಗು ಚಂಚಿಯನ್ನು ಬಿಚ್ಚಿಕೊಂಡು ಕುಳಿತನು. ಕುಣಕ್ಯಾ ಅಪರಿಚಿತನೆಂದು ಆ ಸದರಿನ ಮೇಲೆ ಕೂಡ್ರದೆ, ಬಾಗಿಲ ಬಳಿಯಲ್ಲೇ ನಿಂತುಕೊಂಡನು; ಮತ್ತು ಅಲ್ಲಿಗೆ ಬರುಹೋಗುವವರನ್ನೂ ದನ-ಕರು ಗಳನ್ನೂ ದಿಟ್ಟಿಸಿ ನಿರೀಕ್ಷಿಸತೊಡಗಿದನು. ಅಲ್ಲಿಂದ ಆ ವಿಜಯದುರ್ಗದ ೯.ತ್ತಿನ ಕೆಲ ಭಾಗವು ಆತನಿಗೆ ಕಾಣಿಸುತ್ತಿತ್ತು.

ಹರಿಶಾಸ್ತ್ರಿಗಳು ತಮ್ಮ ಕೈಯೊಳಗಿನ ಜಪಮಾಲಿಕೆಯನ್ನು ಎದುರಿಗಿನ ಹೊತ್ತಿಗೆಯ ಮೇಲಿರಿಸಿದರು. ಆ ಬಳಿಕ ಹರಿಶಾಸ್ತ್ರಿಗೂ ಪಂಡಿತರಾಯನಿಗೂ ಸಂಭಾಷಣಕ್ಕಾರಂಭವಾಯಿತು.

“ಪಂಡಿತರಾವ, ಒಳ್ಳೇ ಗರ್ಗಾಚಾರ್ಯನ ಮುಹೂರ್ತದಲ್ಲೇ ಗೃಹಪ್ರವೇಶವಾದಂತಾಯಿತಲ್ಲ!” ಹೀಗೆಂದು ಹರಿಶಾಸ್ತ್ರಿಗಳು ಹಸನ್ಮುಖದಿಂದ ನುಡಿದರು.

“ಶಾಸ್ತ್ರಿಗಳೇ, ಮುಹೂರ್ತವನ್ನು ಆ ಗರ್ಗಾಚಾರ್ಯನೇ ಬಲ್ಲ; ಅಥವಾ ನೀವು ಬಲ್ಲಿರಿ. ನಾವೇನು ಹೇಳಿ-ಕೇಳಿ ದಂಡಾಳುಗಳು. ನಮ್ಮ ಚಲನ-ವಲನಗಳು ಮುಹೂರ್ತಕ್ಕೆಂದು ಎಂದೂ ತಡೆಯಲಾರವು. ಬೇಕಾದರೆ ಮುಹೂರ್ತವೇ ನಮ್ಮ ಚಲನ-ವಲನಗಳನ್ನು ಬೆನ್ನಟ್ಟಿ ಬಂದು ಸಾಧಿಸಿಕೊಳ್ಳಬೇಕು!”

“ಅದಿರಲಿ. ಹೋದ ಕಡೆಗಳಲ್ಲೆಲ್ಲ ಸುಖಸಂಚಾರವಾಯಿತಷ್ಟೇ?”

“ಆಯಿತು. ಇಷ್ಟೇ ಅಲ್ಲ, ಅವಕಾಶದಲ್ಲೇ ಅವಕಾಶ ಮಾಡಿಕೊಂಡು ಶ್ರೀ ಕುಣಕೇಶ್ವರನ ದರ್ಶನವನ್ನೂ ಪಡೆದೆನು. ಅದಕ್ಕಾಗಿ ಅರ್ಧ ದಿನವನ್ನು ವ್ಯಯಿಸ ತುಸ ಅಡ್ಡ ದಾರಿ ಕೂಡ ಹಿಡಿಯಬೇಕಾಯಿತು.”

ದೇವರ ಹೆಸರು ಹೊರಟ ಕೂಡಲೆ ‘ಜಯಶಂಕರ ಜಯಶಂಕರ’ ಎಂದು ಗಟ್ಟಿಯಾಗಿ ಗರ್ಜಿಸಿ, ಕೈಜೋಡಿಸಿ ಶಾಸ್ತ್ರಿಗಳು ಆ ದಿಕ್ಕಿನ ಕಡೆಗೆ ನಮಸ್ಕರಿಸಿದರು. ಬಳಿಕ:—“ನಿಮ್ಮ ಜೊತೆಗೆ ಬಂದಿರುವ ಈ ಪೋರನಾರು?” ಎಂದು ಕೇಳಿದರು.

“ಶಾಸ್ತ್ರಿಗಳೇ, ಇವನು ಕುಣಕೇಶ್ವರನ ಪ್ರಸಾದ!” ಎಂದು ಹೇಳಿ, ಪಂಡಿತರಾಯನು ಗಟ್ಟಿಯಾಗಿ ನಕ್ಕನು.

“ಅಂದರೆ?” ಶಾಸ್ತ್ರಿಗಳ ಉತ್ಸುಕತೆಯು ಹೆಚ್ಚಿದ್ದರಿಂದ ಪ್ರಶ್ನಿಸಿದರು. ಆಗ ಪಂಡಿತರಾಯನು ಕುಣಕ್ಯಾನನ್ನು ಕರೆದನು. ಆತನು ಬಂದ ಕೂಡಲೆ ಅವನನ್ನು ಬಳಿಯಲ್ಲಿ ಕೂಡ್ರಿಸಿಕೊಂಡು ಅವನು:—“ಶಾಸ್ತ್ರಿಗಳೇ, ಕಂಡುಕೊಳ್ಳಿರಿ ಈ ಕುಣಕೇಶ್ವರನ ಪ್ರಸಾದವನ್ನು! ನಾನು ನನ್ನ ಮನೆಯ ಬಂದರದಿಂದ ಹೊರಡುವಾಗ ಇವನು ನನ್ನೊಡನಿರಲಿಲ್ಲ ನಮ್ಮ ನಾವು ಮೂರು-ನಾಲ್ಕು ನೂರು ಮಾರು ದೂರ ಹೋದ ಬಳಿಕ ಈತನು ಒತ್ತಿನ ಒಡ್ಡಿನ ಮೇಲಿಂದ ನಮ್ಮ ನಾವಿನಲ್ಲಿ ಹಾರಿ

ಕೊಂಡನು. ಹೀಗೆಂದು ಮಾತಿಗೆ ಮೊದಲು ಮಾಡಿ ಪಂಡಿತರಾಯನು ಕುಣ ಕೇಶ್ವರ ಮಂದಿರದಲ್ಲಿ ಕುಣಕ್ಯಾ ಕಣ್ಣಿಗೆ ಕಾಣಿಸಿದಾಗಿನಿಂದ ಎಲ್ಲ ಸಂಗತಿಯನ್ನು ಉಪ್ಪು-ಕಾರ ಹಚ್ಚಿ ಶಾಸ್ತ್ರಿಗಳಿಗೆ ನಿವೇದಿಸಿದನು; ಮತ್ತು ನಾವೆಯಲ್ಲಿ ಕುಣಕ್ಯಾ ನೊಡನೆ ನಡೆದ ತನ್ನ ಸಂಭಾಷಣವನ್ನೂ ಅವರಿಗೆ ತಿಳಿಸಿದನು.

ಆದರೆ ಅದನ್ನು ಕೇಳುತ್ತಿರುವಾಗ ಶಾಸ್ತ್ರಿಗಳ ಅರ್ಧ ಲಕ್ಷ್ಯವು ಪಂಡಿತರಾಯನ ಮಾತಿನ ಕಡೆಗಿದ್ದರೆ ಇನ್ನುಳಿದ ಲಕ್ಷ್ಯವು ಕುಣಕ್ಯಾನ ಮುಖಚರ್ಯದ ಕಡೆಗಿದ್ದಿತು.

ಅವರು ಟಕಮಕವೆಂದು ಆತನ ಮುಖಲಕ್ಷಣಗಳನ್ನು ನಿರೀಕ್ಷಿಸುತ್ತಿದ್ದರು. ಇಷ್ಟೇ ಅಲ್ಲ, ಪಂಡಿತರಾಯನು ತಿಳಿಸತಕ್ಕ ಸಂಗತಿಯು ಮುಗಿಯುತ್ತಲೆ ಅವರು ತುಸ ಮುಂದೆ ಸರಿದು ಬಂದು ಕುಣಕ್ಯಾನ ಕೈಯನ್ನು ತಮ್ಮ ಕೈಯಲ್ಲಿ ತಕ್ಕೊಂಡರು; ಹಾಗು ಅವನ ಅಂಗೈಯೊಳಗಿನ ಗೆರೆಗಳನ್ನು ನಿರೀಕ್ಷಿಸತೊಡತೆದರು.

ಸಂಭಾಷಣಕ್ಕೆ ತನ್ನಿಂದ ತಡೆಯುಂಟಾಗದೆ, ಮನೆಯೊಳಗೆ ಹೋಗಿಬರಲಿಕೆ. ದೊರೆತ ಈ ಆಯತ್ತ ಸಂಧಿಯನ್ನು ಪಂಡಿತರಾಯನು ಸಾಧಿಸಿಕೊಂಡನು. ಅಷ್ಟರಲ್ಲಿ ಅವನು ತನ್ನ ಪ್ರಾತಃಕೃತ್ಯಗಳನ್ನು ಮುಗಿಸಿಕೊಂಡನಲ್ಲದೆ, ಮನೆಯ ಹೆಣ್ಣುಮಕ್ಕ ಳೊಡನೆ ನಾಲ್ಕು ಕ್ಷೇಮಸಮಾಚಾರದ ಮಾತುಗಳನ್ನೂ ಆಡಿದನು.

ಹರಿಶಾಸ್ತ್ರಿಗಳು ಯಾರದೇ ಕೈಯನ್ನು ಹಿಡಿದು ನೋಡಿ ಸಾಮುದ್ರಿಕ ಚಿಕಿತ್ಸೆ ಮಾಡಹತ್ತಿದರೆಂದರೆ ಅವರು ಆ ಮೊದಲಿನ ತಮ್ಮ ಎಲ್ಲ ವ್ಯವಧಾನವನ್ನು ಮರೆತೇ ಬಿಡುತ್ತಿದ್ದರು. ಒಂದೆರಡು ಗಳಿಗೆಯ ವರೆಗೂ ಅವರ ಚಿತ್ತವು ಏಕಾಗ್ರವಾಗಿ ಬಿಡು ತ್ತಿತ್ತು. ಅದರಂತೆಯೇ ಇಂದೂ ಆಯಿತು. ಕೈಯನ್ನು ಪರೀಕ್ಷಿಸುವದಾದ ಬಳಿಕ ಅವರು ಕುಣಕ್ಯಾನ ಪಾದಗಳನ್ನು ಪರೀಕ್ಷಿಸಿದರು, ಬೆಳಕಿನ ಕಡೆಗೆ ಮೋರೆದಿರುವಿ ಅವರು ಅವನ ಕಣ್ಣುಗಳನ್ನು ಪರೀಕ್ಷಿಸಿದರು. ಆತನ ತಲೆಯನ್ನೂ ಇತ್ತಿಂದ ಅತ್ತ ಹೊರಳಿಸಿ ನೋಡಿದರು; ಹಾಗು ವಿಚಾರ ಮಾಡುತ್ತ ಕುಳಿತರು.

ಪಂಡಿತರಾಯನು ನಡುಮನೆಯಿಂದ ಪಡಸಾಲೆಗೆ ಬಂದನು. ಅಲ್ಲಿ ಕುಣಕ್ಯಾ ಶಾಸ್ತ್ರಿಗಳಿಗೆ ತೀರ ಪರಿಚಿತನಂತೆ ಹೊಂದಿ ಕುಳಿತಿದ್ದನು. ಅದನ್ನು ಕಂಡು ಅಚ್ಚರಿ ಗೊಂಡ ಅವನು:—"ಎಲೋ ಪೋರಾ, ನೀನಂತೂ ಶಾಸ್ತ್ರಿಗಳನ್ನು ಕೇವಲ ನಿನ್ನ ಮಿತ್ರರನ್ನೇ ಮಾಡಿಕೊಂಡೆಯಲ್ಲ!" ಎಂದಂದನು.

ಅದಕ್ಕೆ ಶಾಸ್ತ್ರಿಗಳು:—"ಪಂಡಿತರಾವ, ಕುಣಕೇಶ್ವರ ನನಿಮ್ಮ ಪ್ರಸಾದವು ಬಳಿಯಲ್ಲಿರಿಸಿಕೊಳ್ಳತಕ್ಕಂಥಹದಿರುತ್ತದೆ.!" ಎಂದರು.

ಆದರೆ ಅವರು ಮತ್ತೇನು ಹೇಳುವರೋ-ಹಸ್ತಲಕ್ಷಣದಿಂದ ಏನಾದರೂ ಶುಭಾಶುಭವಿದ್ದಂತೆಯೇ ಕುಣಕ್ಯಾನ ಎದುರಿಗೆ ಆಡಿತೋರಿಸಬಾರದೆಂಬ ಉದ್ದೇಶ

ದಿಂದ ಪಂಡಿತರಾಯನು ಅವನನ್ನು ಕುರಿತು:—“ಪೋರಾ, ನಿನ್ನ ಪ್ರಾತರ್ವಿಧಿಗಳಾಗಿರುವದಿಲ್ಲವಿನ್ನೂ. ಹೋಗಿ ಬಾ, ಅತ್ತ ಸಮುದ್ರನೊತ್ತಿನ ಬದಿಗೆ. ಬರುವಾಗ ಕೆಲವು ಹೂಗಳನ್ನು ಎತ್ತಿಕೊಂಡು ಬರಲಿಕ್ಕೆ ಮರೆಯದಿರು.”

ಕೂಡಲೆ ಕುಣಕ್ಯಾ ಅಲ್ಲಿಂದೆದ್ದ; ಹಾಗು ನೆಟ್ಟಗೆ ನಡೆದ. ಒತ್ತಿನ ಕಡೆಗೆ ಹೋಗುವ ದಾರಿಯಾವದು? ಮುಂತಾದುದರ ಬಗ್ಗೆ ಆತನೇನೂ ವಿಚಾರಿಸಲಿಲ್ಲ. ತನ್ನ ಚಿಕಿತ್ಸಕ ಬುದ್ಧಿಯ ಆಧಾರದ ಮೇಲೆ ಒಳ್ಳೇ ಆತ್ಮವಿಶ್ವಾಸದಿಂದ ಅವನು ಅತ್ತ ಹೊರಟೇ ಹೋದ.

ಅವನು ದೂರ ಹೊರಟು ಹೋದ ಮೇಲೆ ಪಂಡಿತರಾಯನು:—“ಶಾಸ್ತ್ರಿಗಳೇ, ಕುಣಕೇಶ್ವರನ ಪ್ರಸಾದರೂಪಿಯಾದ ಈ ಪೋರನ ಬಳಿಯಲ್ಲಿರಿಸಲು ಯೋಗ್ಯನೆಂದು ಆಗಲೆ ಅಂದಿರಲ್ಲ? ಅದರ ಅರ್ಥವೇನು? ಅವನ ಹಸ್ತಸಾಮುದ್ರಿಕ ನೋಡಲಿಕ್ಕೆ ನಿಮಗೆ ಸಾಕಷ್ಟು ಅವಕಾಶ ದೊರೆಯಿತಷ್ಟೇ?”

“ಪಂಡಿತರಾವ!” ಶಾಸ್ತ್ರಿಗಳು ನಕ್ಕು:—“ನಮ್ಮ ಹಸ್ತಸಾಮುದ್ರಿಕವು ನಮ್ಮ ಮಟ್ಟಿಗೇ ನಿಮ್ಮಂತಹ ಅಶ್ರದ್ಧೆಯ ಜನರಿಗೆ ಅದರ ಲಾಭವನ್ನು ಪುಕ್ಕಟೆಯಾಗಿ ಅದೇಕೆ ಮಾಡಿಕೊಡಬೇಕು? ಆದರೆ ನೀವು ಕೇಳುತ್ತಿರುವಿರೆಂದು ಹೇಳುತ್ತೇನೆ: ಈ ಪೋರನು ಸುಲಕ್ಷಣಿಯಾಗಿ ಕಾಣುತ್ತಾನೆ. ಇವನು ವೀರಮರ್ದನಿರುತ್ತಾನೆ. ಭಾಗ್ಯದ ರೇಷೆಯು ಇವನಂತೆ ಸಾವಿರಾರು ಕೈಗಳಲ್ಲಿ ಕೂಡ ನೋಡಲಿಕ್ಕೆ ದೊರೆಯಲಿಕ್ಕಿಲ್ಲ ಅದು ಬಾಣದಂತೆ ನೀಟಾಗಿದೆ; ಆದರೆ .......”

ಹೀಗೆಂದು ಹೇಳಿ ಶಾಸ್ತ್ರಿಗಳು ತುಸ ಮೌನ ತಾಳಿದರು. ಅವರ ದನಿಯು ಕುಗ್ಗಿತು; ಅವರು ಕಿರಿದನಿಯಿಂದಲೂ ಅತ್ತಿತ್ತ ನೋಡುತ್ತಲೂ:—‘ಆದರೆ ಈ ಪೋರನು ಅಲ್ಪಾಯುಷಿಯೆಂದು ಕಾಣುತ್ತದೆ.”

ಪಂಡಿತರಾಯನು ಉದಾಸೀನತೆಯಿಂದ:—“ಆದರವನು ಹೇಗೆಯೇ ಇರಲಿ. ನನಗೆ ಅವನ ಸಹವಾಸವು ನಿನ್ನೆ ಮಧ್ಯರಾತ್ರಿಯಿಂದ ಘಟಿಸಿದುದು ಇಂದು ಮಧ್ಯಾಹ್ನದ ವರೆಗೆ ಮಾತ್ರ. ಯಾಕೆಂದರೆ ನಾನು ಇಂದು ಅಪರಾಹ್ಣ ಕಾಲದಲ್ಲೇ ಇಲ್ಲಿಂದ ಹೊರಡತಕ್ಕವನು. ಆತನ ಭಾಗ್ಯವನ್ನು ಕಂಡು ಸಂತೋಷಿಸುವವರೂ ಇಲ್ಲವೆ ಅಲ್ಪಾಯುಷ್ಯವು ತೀರಲು ದುಃಖಿಸುವವರೂ ಈ ಲೋಕದಲ್ಲಿ ಅನ್ಯರಾರೂ ಇದ್ದಂತಿಲ್ಲ; ಆದರೆ ಅವನು ಉತ್ಸಾಹಿಯೂ ವಿನಮ್ರನೂ ಇರುವನೆಂಬದು ಮಾತ್ರ ನಿನ್ನಿನಿಂದ ಕಂಡ ಅವನ ಚರಿತ್ರದಿಂದ ತಿಳಿಯುವದು.”

“ಆದರೆ ಅವನ ಜಾತಿ-ಕುಲ-ಗೋತ್ರಗಳ ಮಾಹಿತಿಯೇನಾದರೂ ಇವೆಯೇ? ಅವನು ಮುಖಕ್ಷೌರ ಕೂಡ ಮಾಡಿಸಿಕೊಂಡಿಲ್ಲ. ಅವನ ಕಿವಿಯ ವರೆಗೂ ಕೆಂಬ

ಣ್ಣದ ನಸುಗೂದಲು ಬೆಳೆದಂತಿವೆ. ಅವನ ಕೂದಲುಗಳು ಕೋಮಲ ಎಳಕು ಹಾಗು ನೆತ್ತಗಿರುವದರಿಂದ ಅವಿನ್ನೂ ಜಡೆಗಟ್ಟಿರುವದಿಲ್ಲ. ಕೊರಳಲ್ಲಿ ಅಥವಾ ಟೊಂಕ ದಲ್ಲಿ ಜನಿವಾರವಿದೆಯೋ ಇಲ್ಲವೋ ಯಾರು ಬಲ್ಲರು? ಕಿವಿಗಳು ಚುಚ್ಚಲ್ಪಟ್ಟಿವೆ. ಅದರಿಂದ ಅವನು ಬೈರಾಗಿ-ಗೋಸಾವಿಗಳಂತೆ ಕಾಣಿಸಿದರೂ ಅವನು ಖಂಡಿತವಾಗಿ ಯೂ ಉತ್ತರ ಹಿಂದುಸ್ತಾನದವನಲ್ಲ!"

"ಅದೆಲ್ಲವೂ ಶಾಸ್ತ್ರಿಗಳೇ, ಇನ್ನು ನಿಮ್ಮದು ನಿಮಗೇ ಮೆಲ್ಲಮೆಲ್ಲನೆ ತಿಳಿಯು ಬಂದೀತು. ಬೈರಾಗಿಯೊಡನೆ ಚೇಲಾನಂತಿದ್ದ. ಅದರಿಂದ ಇವನನ್ನೂ ಬೈರಾ ಗಿಯೇ ಎಂದೆನ್ನಿ ಶಾಸ್ತ್ರಿಗಳೇ, ಇದಕ್ಕೂ ಹೆಚ್ಚಿನ ಇವನ ಮಾಹಿತಿಯು ನನ ಗಿರುವದಿಲ್ಲ."

"ಹಾಗಾದರೆ ನೀವಿವನನ್ನು ಎಲ್ಲಿಯ ವರೆಗೆ ಕರೆದೊಯ್ಯುವಿರಿ?"

"ಎಲ್ಲಿಯೂ ಒಯ್ಯಲಾರೆನು. ಅವನನ್ನು ಇಲ್ಲಿಯೇ ನಿಮ್ಮ ಮನೆಯಲ್ಲಿ ಬಿಟ್ಟು ತೆರಳುವವನು. ನನಗೆ ದಂಡಿನ ಠಾಣ್ಯವನ್ನು ತಲುಪಬೇಕಾಗಿದೆ. ಆ ಕೆಲಸದಲ್ಲಿ ಅವನ ಜೊತೆಯು ಅಡಚಣಿಯದು. ಅದರ ಅವಶ್ಯಕತೆಯೇನು? ಅವನ ಲಕ್ಷಣವು ವಿಹಿತವೆನಿಸಿದರೆ ಇಟ್ಟುಕೊಳ್ಳಿರಿ. ಈ ನಾಡೆಯಲ್ಲಿ ಇಷ್ಟು ದೊಡ್ಡ ಪರಿವಾರದಲ್ಲಿ ಅವನೇನೂ ಹೆಚ್ಚಿನವನಲ್ಲ. ಅವನ ವರ್ತನವು ಸರಿಯೆನಿಸದಿದ್ದರೆ ಹೊರಟು ಹೋ- ಗೆಂದು ಸ್ಪಷ್ಟವಾಗಿ ತಿಳಿಸಿರಿ. ಅವನನ್ನಿಟ್ಟುಕೊಂಡು ಸಂಬಾಳಸುವ ಹೊಣೆಗಾರಿಕೆ ಯೇನೂ ಇರುವದಿಲ್ಲ ಹಾಗೆಂದು ನಾನು ಅದಾಗಲೂ ವಚನವಿತ್ತಿಲ್ಲ. ಒಬ್ಬೊಂ ಟಿಗ ಅನಾಥ ಪೋರನಿರುವನು, ಆದರೆ ಅವನು ಹದಿನಾಲ್ಕು ಹದಿನೈದು ವರ್ಷದವ ನಿರುತ್ತಾನೆ. ಎಲ್ಲಿಯಾದರೂ ಬೇರೆಯವರಲ್ಲಿ ಚಾಕರಿ ಹಿಡಿದಾನು. ಇಲ್ಲದಿದ್ದರೆ ಬೈರಾಗಿಯು ಬೈರಾಗಿಯೇ! ಅವನಿಗೇನು? ಇಡೀ ಲೋಕವು ತೆರವೇ ಇದೆ; ಮತ್ತು ಅವನಾದರೂ ಬಹು ಖಂಬೀರನಾಗಿ ತೋರುವದರಿಂದ ಬೇರೆಯವರ ಆಧಾರ ವಿಲ್ಲೆಂದು ಅಂಜಿ ಬೆಪ್ಪನಾಗಲಾರ. ಉಡಾಳರಲ್ಲಿ ಇಷ್ಟುಗುಣವಾದರೂ ಇರುತ್ತದ ಲ್ಲವೇ ಶಾಸ್ತ್ರಿಗಳೇ?"

ಶಾಸ್ತ್ರಿಗಳು:—"ಇರಲಿರಲಿ. ಆ ಹುಡುಗನನೇನು ಭಾರ! ಆದರೆ ನೀವು ಇಂದು ಮಧ್ಯಾಹ್ನವೇ ಅಂದರೆ ಇಷ್ಟು ಅವಸರದಿಂದಲೇ ಹೊರಡುವಿರೆನ್ನುವಿರಾ? ಇನ್ನು ನಾಲ್ಕು ದಿನ ನಿಲ್ಲುವಿರೋ ಇಲ್ಲವೋ? ನೀವು ಈ ವಿಜಯದುರ್ಗಕ್ಕೆ ಮೇ- ಲಿಂದ ಮೇಲೆ ಅನೆಲ್ಲಿ ಬರುತ್ತಿರುತ್ತೀರಿ?"

"ನಿಲ್ಲಬಹುದಿತ್ತು; ಆದರೆ ಮಾಡುವದೇನು? ಈಗಲೆ ದೇಶದ ಮೇಲೆ ಹೋಗಿ ಅವಚಿತಗಡದ ಕಬಜಾ ಪಡೆಯುವ ಬಗ್ಗೆ ನನಗೆ ಸಾತಾರೆಯಿಂದ ಆಗತ್ಯದ ಆಜ್ಞಾ

ಪತ್ರ ಬಂದಿರುತ್ತದೆ. ಆ ದುರ್ಗವು ವಶವಾಗಬೇಕಾದರೆ ಅಲ್ಪಸ್ವಲ್ಪ ಹೊಡೆದಾಟ-ಬಡೆದಾಟ ಕಾಳಗಗಳನ್ನು ಮಾಡಬೇಕಾಗುವದು. ಅದನ್ನು ಮಾಡಿಯೂ ಆ ದುರ್ಗವನ್ನು ಮುಂದೆ ವಶದಲ್ಲಿಟ್ಟುಕೊಳ್ಳಬೇಕಾದರೆ ಮಳೆಗಾಲದೊಳಗಾಗಿ ನಾವು ಅದರ ತಾತ್ಪೂರ್ತಿಕ ದುರಸ್ತಿ ಮಾಡಿಕೊಳ್ಳಬೇಕು. ಆ ಎಲ್ಲ ಕೆಲಸಗಳನ್ನು ಶೀಘ್ರವೇ ನೀಗಿಸಬೇಕಾಗುವದು."

"ಹಾಗಯೇ ಆಗಲಪ್ಪಾ. ನಿಮ್ಮ ಸರದಾರ-ಸಿಪಾಯಿಗಳಿಗೆ ತಡೆಯನ್ನುಂಟು ಮಾಡುವವರಾರು? ಆದರೆ ನರ್ಮದೆಯ ವ್ಯವಸ್ಥೆಯೇನು? ಅವಳನ್ನು ಇನ್ನು ಕೆಲ ದಿನ ಇಲ್ಲಿಯೇ ಇರಗೊಡಿರಿ. ನೀವೇನು ಘಟಿಂಗರು; ಎರಡನೇ ಲಗ್ನ ಮಾಡಿಕೊಳ್ಳಿರೆಂದರೆ ಒಪ್ಪಲಿಲ್ಲ. ನರ್ಮದೆಯ ನಿತ್ಯದ ಹೆಳಲು ಹಾಕಲಿಕ್ಕೆ ಕೂಡ ಅಲ್ಲಿ ಮನೆಯವರಾರೂ ಇರುವದಿಲ್ಲ. ಅದರಿಂದ ಅವಳು ಇಲ್ಲಿಯೇ ಇದ್ದು ಬಿಡಲಿ. ನಮ್ಮ ಮನೆಯಾಕೆಯ ಬಳಿಯಲ್ಲಿ ಆಕೆಯು ಮುಂಚಿನ ಗುರ್ತಿನಿಂದ ಹೆಚ್ಚು ಸಲಿಗೆಯಿಂದಿರುವಳು."

ಆದರೆ ಪಂಡಿತರಾಯನು ಶಾಸ್ತ್ರಿಗಳ ಈ ಮಾತಿಗೆ ಯುಕ್ತಿಯಿಂದಲೇ ತಲೆಯನ್ನಲ್ಲಾಡಿಸಿ ಅಸಮ್ಮತಿ ತೋರಿಸಿದನು. ಆಗ ಶಾಸ್ತ್ರಿಗಳು ಮತ್ತೆ:—"ಆದರೆ ಇಂದು ಮಧ್ಯಾಹ್ನದಲ್ಲಿ ದಂಡಿಗೆ ಹೊರಡಲಿಕ್ಕೆ ಮುಹೂರ್ತವು ಸರಿಯಿಲ್ಲ; ಅದರಿಂದಲೇ ಇಂದು ಇಲ್ಲಿರಬೇಕೆಂದು ಹೇಳಿದೆನು."

ಪಂಡಿತರಾಯನು ಗಟ್ಟಗಟ್ಟಿಯಾಗಿ ನಕ್ಕು, ತನ್ನ ಬಾಯಿಯ ಗಾಳಿಯಿಂದ ಆ ಮುಹೂರ್ತದ ಅಡ್ಡಿಯನ್ನು ಹಾರಿಸಿ ಒಗೆದನು. ಬಳಿಕ ಅವನು:— "ಶಾಸ್ತ್ರಿಗಳೇ, ನಮ್ಮ ದಂಡಾಳುಗಳ ಹಸಿಬೆಯಲ್ಲಿ ಪಂಚಾಂಗಕ್ಕೆ ಇಂಬೇ ಇರುವದಿಲ್ಲ. ಅದಕ್ಕೇನು ಮಾಡುವದು? ಶಾಂತತೆಯ ಸಮಯದಲ್ಲಿ ಮನೆಯಲ್ಲೇ ಇದ್ದುಕೊಂಡು ಧರ್ಮಕೃತ್ಯಗಳನ್ನು ಮಾಡುವವರಿಗೇ ಪಂಚಾಂಗದ ಉಪಯೋಗ. ಚಿಲಖತ್ತು, ಢಾಲು, ಖಡ್ಗ, ಹಗ್ಗ ಮತ್ತು ಕುದುರೆ ಈ ಐದು ಅಂಗಗಳಿಂದ ನಮ್ಮಗಳ ಪಂಚಾಂಗವು ಸಿದ್ಧವಾಗುತ್ತದೆ ನಮ್ಮಗಳ ಪುಣ್ಯಶಾಲಿ ಒಡೆಯ, ಪಾಪಮಯ ಶತ್ರುಗಳ ಕಾಮಗಾರಿ ಇವುಗಳೇ ನಮ್ಮ ಮುಹೂರ್ತ!"

ಇಷ್ಟರಲ್ಲಿ ಮನೆಯೊಳಗಿಂದ ಹರಿಶಾಸ್ತ್ರಿಗಳ ಹೆಂಡತಿ ಗಂಗಾಬಾಯಿಯು ಹಲಸಿನ ತೊಳೆಗಳನ್ನೂ ಎಳೆಗಾಯಿಯ ಕೊಬ್ಬರಿಯನ್ನೂ ಪತ್ರಾವಳಿಯಲ್ಲಿಟ್ಟುಕೊಂಡು ನರ್ಮದೆಯೊಡನೆ ಆ ಸದರಿಗೆ ಬಂದಳು. ಅವಳು ಆ ಎಲೆಯನ್ನು ಶಾಸ್ತ್ರಿ-ಪಂಡಿತರೆದುರಿಗಿಟ್ಟು:—"ಇದೀಗಲೇ ಗಿಡದ ಮೇಲಿಂದ ಹಲಸಿನ ಹಣ್ಣು ಬಿತ್ತು. ಇದೊಳ್ಳೇ ರುಚಿಕರವಾಗಿದೆ. ನಾಲ್ಕು ತೊಳೆಗಳನ್ನು ತಿಂದರೆ ರುಚಿಯೆನಿಸೀತು."

ಬಳಿಕ ಅವರಿಬ್ಬರೂ ಬಾಯಿ ಮುಕ್ಕಳಿಸಿ ಹಲಸಿನ ತೊಳೆ ತಿನ್ನಹತ್ತಿದರು. ನರ್ಮದೆಯು ಸುಮ್ಮನೆ ನಿಂತಿದ್ದಳು. ಅಷ್ಟರೊಳಗೆ ಗಂಗಾಬಾಯಿಯು ಅವಳಿಗೆ ಹೆಳಲು ಹಾಕಿ, ಮೈ ತೊಳೆಸಿ, ಮಡಿ ದಟ್ಟಿ-ಕುಪ್ಪಸಗಳನ್ನುಡಿಸಿದ್ದಳು ಅದರಿಂದ ಅವಳ ಮೈಯೆಲ್ಲೆಲ್ಲ ತೇಜವು ಮಿನುಗುತ್ತಿತ್ತು. ಅವಳ ಹೆಗಲ ಮೇಲೆ ಕೈಯಿಟ್ಟು ಗಂಗಾಬಾಯಿಯು ಕೊಂಕಣದವರಂತೆ ದನಿಯೆಳೆಯುತ್ತ ಮೆಲ್ಲಮೆಲ್ಲನೆ:—"ಇನ್ನು ನಾನು ನನ್ನೀ ಸೋದರಸೊಸೆಯನ್ನಿಲ್ಲಿಯೇ ಇರಿಸಿಕೊಳ್ಳಬೇಕೆಂದು ಯೋಚಿಸಿರುತ್ತೇನೆ. ಇವಳಂತಹ ಚಿಕ್ಕ ಹುಡುಗಿಗೆ ಕೊಂಕಣದ ಛಾಯೆಯೇ ವಿಹಿತ. ಆ ರುಕ್ಷವಾದ ಘಟ್ಟಗಳ ಮೇಲೆ ಸವಾರಿ-ಶಿಕಾರಿಗಳೂ ಓಡಾಟವೂ ಯಾರಿಗೆ ಬೇಕಾಗಿವೆಯೋ ಅವರು ತಮ್ಮಿಷ್ಟಕ್ಕೆ ತಾವು ಮಾಡುತ್ತಿರಬೇಕು; ಅಲ್ಲದೆ ಇತ್ತ ಕೊಂಕಣದಲ್ಲಿ ವರ ಮನೆತನಗಳು ದೊರೆಯುವುದೇ ಇಲ್ಲವೆಂತಲ್ಲ. ನಮ್ಮ ಉಭಯ ಕಡೆಯ ಮೂಲ ಮನೆತನಗಳು ಕೊಂಕಣದವೇ ಆಗಿಲ್ಲವೇನು?"

ಆದರೆ ಪಂಡಿತರಾಯನು ಅದಕ್ಕೇನೂ ಉತ್ತರವೀಯಲಿಲ್ಲ.

ಮಧ್ಯಾಹ್ನದ ಊಟ-ಉಡಿಗೆ, ಮಾತು-ಕತೆಗಳಾದ ಬಳಿಕ ಪಂಡಿತರಾಯನು ವಿಶ್ರಾಂತಿ ಹೊಂದಿದನು; ಮತ್ತು ಅಪರಾಹ್ಣ ಕಾಲದಲ್ಲಿ ತನ್ನ ಆಳುಗಳ ಮೇಲೆ ಸಾಮಾನುಗಳನ್ನು ಹೇರಿಸಿಕೊಂಡು, ಅವನು ಬಾವಡಾ ಘಟ್ಟದ ಮಾರ್ಗದಿಂದ ದೇಶದ ಮೇಲೆ ಹೋಗಲಿಕ್ಕೆಂದು ಹೊರಟನು. ಹೊರಡುವಾಗ ಅವನು ಕುಣಕ್ಯಾನನ್ನು ಹತ್ತಿರ ಕರೆದು:—"ಏನು ಬೈರಾಗಿಗಳೇ! ಇನ್ನು ಮೇಲೆ ನೀವೇನು ಮಾಡತಕ್ಕವರು? ಚಾಕರಿ ಮಾಡಿ ಹೊಟ್ಟೆ ಹೊರೆಯುವಿರೋ-ಭಿಕ್ಷೆ ಬೇಡುವಿರೋ?"

ಕುಣಕ್ಯಾ ನಸುನಕ್ಕು:—"ಶಾಸ್ತ್ರಿಗಳು ಹೇಗೆ ಹೇಳುವರೋ ಹಾಗೆ; ಮತ್ತು ತಮ್ಮ ಆಜ್ಞೆಯ ಮೇರೆಗೆ. ದೇಶಕ್ಕೆ ಕರೆದೊಯ್ಯುತ್ತಿದ್ದರೆ ಅಲ್ಲಿಗೆ ಬರುವ ಇಚ್ಛೆಯು ನನ್ನದಿರುತ್ತದೆ. ನಾನು ನರ್ಮದಾನದಿಯ ವರೆಗಿನ ಪ್ರದೇಶವನ್ನು ನೋಡಿರುತ್ತೇನೆ, ತೀರ್ಥ-ಯಾತ್ರೆಗಳನ್ನೂ ಮಾಡಿರುತ್ತೇನೆ. ನನ್ನ ದೈವದಲ್ಲಿದ್ದರೆ ಇನ್ನು ಮುಂದೆ ದಂಡಿನ ನೌಕರಿಯನ್ನು ನಿಮ್ಮ ಕೈಕೆಳಗೆ ಮಾಡೇನು. ನನಗೆ ದಂಡಿನ ಚಾಕರಿಯು ಹೆಚ್ಚಾಗಿ ರುಚಿಸುತ್ತದೆ."

ಪಂಡಿತರಾಯನು:—"ಆ ಬಗ್ಗೆ ಮತ್ತೆಂದಾದರೂ ಯೋಚಿಸುವೆನು. ಸದ್ಯಕ್ಕೆ ಈ ವಿಜಯದುರ್ಗದಲ್ಲೇ ಶಾಸ್ತ್ರಿಗಳ ಮನೆಯಲ್ಲಿರು; ಮತ್ತು ಇವರು ಹೇಳಿದ್ದನ್ನು ಮಾಡುತ್ತಿರು. ಶಿಪಾಯಿಗಿರಿಯು ನಿನ್ನ ಹಣೆಯಲ್ಲಿ ಬರೆದೇ ಇದ್ದರೆ ಅದು ಇಲ್ಲಿಯೂ ದೊರೆಯಬಹುದು. ಇನ್ನು ಮುಂದೆ ಬರಬರುತ್ತ ಕೊಂಕಣದಲ್ಲೂ ಶಿಪಾಯಿಗಿರಿಯ ಕೆಲಸಗಳು ಹೆಚ್ಚಲಿವೆಯೇ ಹೊರತು ಕಡಿಮೆಯಾಗಲಾರವು. ನೆಲದ ಮೇಲಿನ

ಚಾಕರಿಯಂತೆಯೇ ಜಲದ ಮೇಲಿನದು. ಹುಮ್ಮಸ-ಕೌಶಲ್ಯಗಳ ಪ್ರತಿಫಲವು ಎಲ್ಲ ಕಡೆಗೂ ದೊರೆಯತಕ್ಕದ್ದೇ."

( ೩ )

ಪಂಡಿತರಾಯನು ಹೊರಟು ಹೋದ ಮೇಲೆ ಕೆಲ ದಿನಗಳು ಸುಮ್ಮನೆ ಕಳೆದವು. ಬಳಿಕೊಂದು ದಿನ ಕುಣಕ್ಯಾ ಶಾಸ್ತ್ರಿಗಳನ್ನು ಕುರಿತು :—"ಶಾಸ್ತ್ರಿಗಳೇ, ನನಗೇನಾದರೂ ಕೆಲಸ ಹೇಳಿರಲ್ಲ?"

ನಿಜವಾಗಿ ನೋಡಿದರೆ ಅವನು ತಾನಾಗಿ ಮನೆಗೆಲಸಗಳನ್ನು ಹೆಚ್ಚಾಗಿ ಮಾಡುತ್ತಿದ್ದನು. ಬೆಳಗಿನ ಶೆಗಣಿ-ಕಸದ ಕೆಲಸವನ್ನು ಆತನು ಸ್ವಾಧೀನಪಡಿಸಿಕೊಂಡಿದ್ದ. ಮುಂಜಾವು-ಸಂಜೆಗಳಲ್ಲಿ ದನಗಳನ್ನು ಹಿಂಡುವ ಕೆಲಸವನ್ನು ಆತನೇ ಮಾಡುತ್ತಿದ್ದ. ತೋಟ-ಪಟ್ಟಿಗಳಲ್ಲಿ ಸಂಚರಿಸಿ ಹೂವು-ತುಳಸಿಗಳನ್ನು ನಾಕಷ್ಟು ತರುತ್ತಿದ್ದ. ಮುಂಜಾವು-ಮಧ್ಯಾಹ್ನಗಳಲ್ಲಿ ಪಡಸಾಲೆಯನ್ನು ಚೆನ್ನಾಗಿ ಉಡುಗಿ, ಶಾಸ್ತ್ರಿಗಳ ಆಸನವನ್ನು ಸ್ವಚ್ಛವಾಗಿ ಹಾಸಿಡುತ್ತಿದ್ದ. ಹಿತ್ತಲೊಳಗಿನ ಉರುವಲಿನ ವ್ಯವಸ್ಥೆ ಮಾಡುವ. ಅತಿಥಿ-ಅಭ್ಯಾಗತರ ವ್ಯವಸ್ಥೆಯನ್ನಿಡುವ. ಇಷ್ಟೆಲ್ಲ ಮಾಡುತ್ತಿದ್ದರೂ ಅವನಿಗೆ ಪ್ರಹರಗಟ್ಲೆಯ ಬಿಡುವಿನ ವೇಳೆ ದೊರೆಯುತ್ತಿತ್ತು; ಮತ್ತು ಆ ವೇಳೆಯ ಉಪಯೋಗವನ್ನೆಂತು ಮಾಡಬೇಕೆಂಬುದು ಅವನಿಗೆ ತಿಳಿಯದಾಯಿತು. ಶಾಸ್ತ್ರಿಗಳು ತನ್ನನ್ನು ದುರ್ಗಕ್ಕೆ ಕರೆದೊಯ್ದು ಅಲ್ಲಿ ಕಚೇರಿಯೊಳಗೆ ಯಾವುದೊಂದು ಕೆಲಸ ಹಚ್ಚಿಕೊಡಬೇಕೆಂದು ಆತನಿಗೆ ಅನಿಸುತ್ತಿತ್ತು, ಆದರೆ ಏನಾದರೂ ಶಾಸ್ತ್ರಿಗಳಿಗೆ ಆ ವಿಚಾರವು ಮನಸ್ಸಿಗೆ ನಾಟಲೊಲ್ಲದು. ಅವರು ಅವನಿಗೆ ಹೇಳುತ್ತಿದ್ದರೇನಂದರೆ:—"ಕುಣಕ್ಯಾ, ನೀನಿನ್ನೂ ಚಿಕ್ಕ ಪೋರ! ಸರಕಾರೀ ಚಾಕರಿ ಮಾಡುವ ವಯಸ್ಸು ನಿನ್ನದಾಗಿಲ್ಲ. ನೀನು ದೊಡ್ಡವನಾದೆಯೆಂದರೆ ಮುಂದೆ ನೋಡೋಣ. ಸದ್ಯ ನೀನು ಮಾಡುವ ಕೆಲಸವನ್ನೇ ಮಾಡುತ್ತಿರು. ಬೇಸರ ಬಂದರೆ ಸಾಗರ ತೀರಕ್ಕೆ ಅಡ್ಡಾಡಲು ಹೋಗಿ ಬಾ! ಸಮುದ್ರವು ಇಷ್ಟು ಸಮೀಪವಿದ್ದ ಬಳಿಕ ಮನ ರಮಿಸಲಿಕ್ಕೇನು ಕೊರತೆ?"

ತಾತ್ಪರ್ಯವೇನಂದರೆ, ಶಾಸ್ತ್ರಿಗಳು ತನಗೆ ಮುಂದಿನ ಮಾರ್ಗವನ್ನು ಈಗಲೆ ತೋರಿಸುವ ಲಕ್ಷಣವು ಕುಣಕ್ಯಾನಿಗೆ ಕಾಣಿಸಲಿಲ್ಲ; ಆದರೆ ಅವರು ಅವನಿಗೆ ಯಾವ ಬಗೆಯ ಬಂಧನವನ್ನೂ ಹಾಕುತ್ತಿರಲಿಲ್ಲ ಅದರಿಂದ ಕುಣಕ್ಯಾನಿಗೆ ತನ್ನಿಚ್ಛೆಯಂತೆ ತಿರುಗಾಡಲಿಕ್ಕೆ ಲಭಿಸಹತ್ತಿತು. ಒಂದೊಂದು ದಿವಸ ಅವನು ಹಿಂದಿರುಗಿ ಬರಲಿಕ್ಕೆ ಅವೇಳೆಯಾದರೂ ತಡವೇಕಾಯಿತೆಂದು ಅವರು ಅವನಿಗೆ ಕೇಳುತ್ತಿರಲಿಲ್ಲ. ಬೇರೆ ಯಾವನಿರದಿದ್ದರೂ ಅವೇ ಕಾಲಕ್ಕಾಗಬೇಕಾದ ಹಾಲು ಕರೆಯುವ ಕೆಲಸವನ್ನು ತಾವೆ ಉಲ್ಲಾಸದಿಂದ ಮಾಡುವರು.

ಕುಣಕ್ಯಾ ಉತ್ತರದೇಶದಲ್ಲಿ ಬೇಕಾದಷ್ಟು ಸಂಚರಿಸಿದವನು. ಆತನು ನರ್ಮದೆಗೆ ಒಂದು ಸಂಪೂರ್ಣ ಪ್ರದಕ್ಷಿಣೆಯನ್ನು ತನ್ನ ಗುರುವಿನೊಡನೆ ಮಾಡಿದ್ದನು. ಆದರಿಂದ ಅವನಿಗೆ ಸೃಷ್ಟಿಶೋಭೆಯ ಅಭಿರುಚಿಯು ಹೆಚ್ಚಾಗಿ ಉಂಟಾಗಿದ್ದಿತೆಂಬದು ನಿಜ. ಆದರೂ ಸಮುದ್ರ ದರ್ಶನದಿಂದ ಅವನ ಚಿತ್ತವು ವಿಶೇಷ ವೇಧಿಸಿದ್ದರಿಂದ, ಸಾತಪುಡಾ-ವಿಂಧ್ಯಾದ್ರಿ ಪರ್ವತಶ್ರೇಣಿಗಳಲ್ಲಿಯ ಶೋಭೆಯು ಸಮುದ್ರದ ಶೋಭೆಯ ಮುಂದೆ ತುಚ್ಛವೆಂದು ಅವನಿಗೆ ಅನಿಸಿತು. ಬರಿಯ ದರ್ಶನದಿಂದ ಸಮಾಧಾನವಾಗದಾಗಲು, ಅವನು ತನ್ನಷ್ಟಕ್ಕೆ ತಾನೇ ಸಮುದ್ರದಲ್ಲಿ ಈಸಗಲಿತನು. ಸಮುದ್ರಸ್ನಾನದ ಹುಚ್ಚು ಅವನಿಗೆ ಹೆಚ್ಚಾಗಿ ಹತ್ತಲು, ಬರಬರುತ್ತ ಅವನ ಜಳಕವು ಮನೆಯಲ್ಲಿ ಕಟ್ಟೇ ಆಯಿತು. ಸ್ನಾನವಾದ ಬಳಿಕ ಆತನು ಉಸುಗಿನ ಬೈಲಲ್ಲಿ ಇಲ್ಲವೆ ದಂಡೆಯ ಮೇಲಿನ ಕಲ್ಲುಗಳ ಮೇಲೆ ತನ್ನ ಬಟ್ಟೆಗಳನ್ನು ಒಣಗ ಹಾಕುವನು; ಹಾಗು ಮನೆಗೆ ಶುಚಿರ್ಭೂತನಾಗಿಯೇ ಹೋಗುವನು. ಶಾಸ್ತ್ರಿಗಳು ಅವನಿಗೆ ಒಮ್ಮೊಮ್ಮೆ ಹೇಳುತ್ತಿದ್ದರೇನಂದರೆ, 'ಭರತಿ-ಓಹಟಿಗಳನ್ನು ಪರಿಶೀಲಿಸಿಯೇ ಸಮುದ್ರ ಸ್ನಾನ ಮಾಡಬೇಕು. ಅವಿಚಾರದಿಂದ ಸ್ನಾನಕ್ಕೆ ಇಳಿದರೆ ಒಮ್ಮಿಲ್ಲೊಮ್ಮೆ ಸಮುದ್ರದಲ್ಲಿ ಮುಣುಗಿ ಬಿಟ್ಟೀ!' ಅದಕ್ಕೆ ಕುಣಕ್ಯಾ ನಗೆಚೇಷ್ಟೆಗಾಗಿ:—'ಹೂಽ ಹಾಗೇನು? ಸಮುದ್ರವು ನನ್ನನ್ನು ಮುಣುಗಿಸುವುದೇ? ನಾನು ಅವನ ಅಪ್ಪನಾಗಿದ್ದೇನೆ!' ತಮ್ಮ ಮನೆಗೆ ಯಾರಾದರೂ ಆಪ್ತ-ಮಿತ್ರರು ಬಂದರೆ ಶಾಸ್ತ್ರಿಗಳು ಅದೇ ಮಾತನ್ನು ಎತ್ತಿ, ಕುಣಕ್ಯಾನ ಕಡೆಗೆ ಬೊಟ್ಟು ತೋರಿ, ಚೇಷ್ಟೆಗಾಗಿ ಅವರನ್ನುದ್ದೇಶಿಸಿ:—"ಇಕೋ ನೋಡಿರಿ, ನಮ್ಮ ಸಮುದ್ರದ ಅಪ್ಪನು ಇಲ್ಲಿ ವಾಸಿಸಿರುತ್ತಾನೆ. ಆ ಸಮುದ್ರದ ವಿರುದ್ಧ ನಿಮ್ಮದೇನಾದರೂ ತಕರಾರು ಇದ್ದರೆ ಇವನಿಗೆ ತಿಳಿಸಿರಿ. ಇವನು ಅದನ್ನು ದೂರ ಮಾಡುವನು!"

ಮೊದಮೊದಲು ಕುಣಕ್ಯಾ ಸಮುದ್ರ ದಂಡೆಯ ಮೇಲೆ ತಾಸುಗಟ್ಲೆ ಸ್ವಸ್ಥವಾಗಿ ಕುಳ್ಳಿರುವನು. ತಿರುಗಿ ಬರವಾಗ ಉಸುಗಿನೊಳಗಿನ ಸುಂದರ ಶಿಂಪು, ಒಣಗಿದ ಸಮುದ್ರದ ಬುರುಗಿನ ಗಡ್ಡೆ, ಯಾವದೊಂದು ಅಡವೀ ಹೂವಿನ ಟೊಂಗೆ ಇವುಗಳನ್ನು ತಕ್ಕೊಂಡು ಮನೆಗೆ ಬರುವನು; ಆದರೆ ಬರಬರುತ್ತ ಆತನು ಒಮ್ಮೊಮ್ಮೆ ಸಮುದ್ರ ದಂಡೆಯಲ್ಲಿ ಅಥವಾ ಗುಡ್ಡಗಳಲ್ಲಿ ದೂರದ ವರೆಗೆ ತಿರುಗಾಡಹತ್ತಿದನು. ಡೋಣಿಗಳಲ್ಲಿ ಕುಳಿತು ತಿರುಗಾಡಬೇಕೆಂಬ ಹುಮ್ಮಸವು ಅವನಿಗೆ ಹೆಚ್ಚಾಗಿ ಅನಿಸುತ್ತಿತ್ತು. ಒತ್ತಿನೊಳಗಿನ ಪ್ರವಾಸದಾಚೆಗೆ ಅವನ ಓಟವು ಮುಂದರಿಯುತ್ತಿದ್ದಿಲ್ಲವಾದ್ದರಿಂದ ಸಮುದ್ರದಲ್ಲಿ ದೂರದ ವರೆಗೆ ಹೋಗಿ ಸಂಚರಿಸುವ ಅವನ ಇಚ್ಛೆಯು ಅತೃಪ್ತವೇ ಇರುತ್ತಿತ್ತು; ಆದರೆ ಮೀನುಗಾರ-ಜಾಲಗಾರರ ಹೊರತು

ಒಂದೇ ದಿನದಲ್ಲಿ ಸಮುದ್ರದೊಳಗೆ ಸಮುಸಮೀಪದಲ್ಲೇ ಸಂಚರಿಸಿ ಮನೆಗೆ ಹಿಂದಿರುಗುವವರು ಇನ್ನಾರಿರುವರು? ಮೀನುಗಾರ-ಜಾಲಗಾರರ ಸಮುದ್ರ ಪ್ರವಾಸವು ಕೇವಲ ಮೀನು ಹಿಡಿಯುಲಿಕ್ಕೆ. ಅಂದಬಳಿಕ ಹಾರುವರ ಮನೆಯ ಪೋರನಿಗೆ ಅವರ ಜೊತೆಯ ಉಪಯೋಗವೇನು?

ಒಂದು ದಿನ ಬೆಳಿಗ್ಗೆ ನಾಲ್ಕು ಗಳಿಗೆ ಹೊತ್ತೇರಿದಾಗ ಕುಣಕ್ಯಾ ವಿಜಯದುರ್ಗದಿಂದ ಎರಡು ಮೈಲುಗಳ ಮೇಲಿನ ಉಸುಗಿನ ಬೈಲಲ್ಲಿ ಮೀನುಗಾರ ಜಾತಿಯ ಯುವಕನೊಬ್ಬನನ್ನು ಕಂಡನು. ಆತನು ಆಗ ಯಾವ ಉದ್ಯೋಗವನ್ನೂ ಮಾಡದೆ, ಸಮುದ್ರದ ಕಡೆಗೆ ನೋಟ ಮಾಡಿಕೊಂಡು ಎಡಗೈಯಿಂದ ಬಲಗೈಗೂ ಬಲಗೈಯಿಂದ ಎಡಗೈಗೂ ಉಸುಗು ತೂರುತ್ತ ಆಡುತ್ತಿದ್ದನು; ಹಾಗು ಬಾಯಿಂದ ಗುಣು-ಗುಣು ಎಂದು ಹಾಡುತ್ತಿದ್ದನು. ಮೀನು ಹಿಡಿಯುವ ಬಲೆಗಳು ಸಮೀಪದಲ್ಲೇ ಒಣಗ ಹಾಕಲ್ಪಟ್ಟಿದ್ದವು. ಅವುಗಳ ಬಳಿಯ ಒಂದೆರಡು ಬಿದುರಿನ ಬುಟ್ಟಿಗಳಲ್ಲಿ ಕೆಲ ಮೀನುಗಳೂ ಇದ್ದವು. ಎಲ್ಲಿಂದಲೋ ಹಾರಿಬರುತ್ತಿದ್ದ ಕಾಗೆಗಳು ಅವುಗಳನ್ನು ಎತ್ತಿಹಾಕುವದಕ್ಕಾಗಿ ಹೊಂಚು ಹಾಕುತ್ತಿದ್ದವು. ಆಗ ಮಾತ್ರ ಆತನು ಹಿಂದಿರುಗಿ ಉಸುಗಿನ ಮುಷ್ಟಿಯಿಂದಲೇ ಹೊಡೆದು ಅವುಗಳನ್ನೋಡಿಸುತ್ತಿದ್ದನು.

ಆ ನೋಟವನ್ನು ಕಂಡು 'ಇದಕ್ಕಿಂತಲೂ ಸುಖವೆಂಬುದು ಇನ್ನಾವದಿರುವದು?' ಎಂಬ ವಿಚಾರವು ಪರಕ್ಷಣದಲ್ಲಿಯೇ ಕುಣಕ್ಯಾನ ತಲೆಯಲ್ಲಿ ಒಂದು ಹೊಯಿತು. ಆತನು ಆ ಮೀನುಗಾರ ತರುಣನ ಹತ್ತರ ಹೋಗಿ ಅವನ ಹಾಗೆಯೇ ಆಸನ ಮಂಡಿಸಿ ಕುಳಿತನು. ಸಮವಯಸ್ಸಿನ ಹುಡುಗರಿಗೆ ಪರಸ್ಪರ ಗುರ್ತನ್ನು ಬೇರೆಯವರಾರೂ ಮಾಡಿಕೊಡಬೇಕಾಗುವದಿಲ್ಲ ಅವರು ಪರಸ್ಪರರನ್ನು ತೀವ್ರವೇ ತಮ್ಮವರನ್ನಾಗಿ ಮಾಡಿಕೊಳ್ಳುತ್ತಾರೆ. ಮೀನುಗಾರ ತರುಣನು ಮಂದಸ್ಮಿತದಿಂದ ಕುಣಕ್ಯಾನನ್ನು ಸ್ವಾಗತಿಸಿದನು; ಆದರೆ ಆ ಎರಡನೆಯವನ ಪ್ರತ್ಯಕ್ಷ ಹೆಸರು ಕೇಳಿಕೊಳ್ಳುವ ಧೈರ್ಯವನ್ನು ಕುಣಕ್ಯಾನೇ ಮಾಡಿದನು. ಅವನು :—"ಗೆಳೆಯಾ, ನಿನ್ನ ಹೆಸರೇನು?" ಎಂದು ಕೇಳಲು,

ಮೀನುಗಾರನು :—"ನನ್ನ ಹೆಸರಲ್ಲವೆ-ಧಾಕಲ್ಯಾ-ಸಣ್ಣ್ಯಾ."

ಕುಣಕ್ಯಾ ನಕ್ಕು :—"ಭಲೆ! ಚೆನ್ನಾಗಿದೆಯಲ್ಲ ನಿನ್ನ ಹೆಸರು. ದೊಡ್ಡ್ಯಾ-ಥೋರಲ್ಯಾ-ನ ತಮ್ಮನೆಂದು ಧಾಕಲ್ಯಾ-ಸಣ್ಣ್ಯಾನೆಂದಲ್ಲವೆ?"

ಬಳಿಕ ಅವರೀರ್ವರಲ್ಲಿ ಸಂಭಾಷಣಕ್ಕಾರಂಭವಾಯಿತು.

"ಥೋರಲ್ಯಾನ ತಮ್ಮನೆನಲಿಕ್ಕೆ ನನಗೆಲ್ಲಿರುವನು ಥೋರಲ್ಯಾ-ದೊಡ್ಡ-ಅಣ್ಣ? ಅಲ್ಲವೆ ನನಗಿಂತ ಚಿಕ್ಕವ-ತಮ್ಮ-ನಾದವನು ಎಲ್ಲಿದ್ದಾನೆ? ಅದಿರಲಿ. ಗೆಳೆಯಾ, ನಿನ್ನ ಹೆಸರೇನು? ಮತ್ತು ನಿನ್ನ ತಂದೆ-ತಾಯಿಗಳೆಲ್ಲಿರುತ್ತಾರೆ?"

" ನನಗೆ ಕುಣಕ್ಯಾ ಎನ್ನುತ್ತಾರೆ. ನನಗೆ ನನ್ನ ತಂದೆ-ತಾಯಿಗಳ ನೆನಪಿಲ್ಲ. ನನ್ನ ಗುರುಗಳಿದ್ದರು. ಅವರು ನನ್ನನ್ನು ತ್ಯಜಿಸಿದರು; ಮತ್ತು ಯಾರ ಉಡಿಯುಲ್ಲಿಂದು ನನ್ನ ಗುರುವು ನನ್ನನ್ನು ಹಾಕಿದನೋ ಆ ಸರದಾರನೂ ನನ್ನನ್ನು ತೊರೆದು ಹೋದನು. "

" ಹೀಗೋ! ಆದರೇನು ಗೆಳೆಯಾ, ನಿನ್ನ ಕುಣಕ್ಯಾ ಎಂಬ ಹೆಸರನ್ನು ಆದಾರೂ ಎಂದೂ ಕೇಳಿರುವದಿಲ್ಲ. ಅದಿರಲಿ. ನೀನು ಇಲ್ಲಿ ಯಾರಲ್ಲಿರುತ್ತೀ ? "

" ಆ ಜ್ಯೋತಿಷ್ಕರಿರುವರಲ್ಲ, ಅವರಲ್ಲಿ. ಅವರಿಗಿಲ್ಲಿ ಶಾಸ್ತ್ರಿಗಳೆಂದೆನ್ನುವರು. "

" ಹಾ ! ಅವರು ಇಲ್ಲಿ ಎಲ್ಲರ ಪರಿಚಯುದವರೂ ಇರುತ್ತಿರುವದು ನಿಜ. ಪ್ರತಿಯೊಬ್ಬರೂ ಅವರಿಗೆ ಕೈತೋರಿಸಲು ಹೋಗುವರು; ಮುಹೂರ್ತ ಕೇಳಲು ಹೋಗುವರು; ಕುಂಡಲಿ ತೋರಿಸ ಹೋಗುವರು. ದೊಡ್ಡ ಮನುಷ್ಯ. ದೇವರು ನಿನಗೆ ಒಳ್ಳೆಯವರ ಉಡಲಲ್ಲಿ ಹಾಕಿರುವನು.

ಕುಣಕ್ಯಾ :—" ಅದಿರಲಿ ಧಾಕಲ್ಯಾ ! ನಿನ್ನ ತಂದೆಯು ಹೆಸರೇನು ? ಮತ್ತು ನೀನು ವಾಸಿಸುವದೆಲ್ಲಿ ? "

" ನನ್ನ ಹಿರಿಯರ ಹೆಸರು ಭಾಗೂಜೀ ನಾಯಿಕ. ಅವರು ಸುತ್ತಲೂ ಐದು ಪರದಾರಿಯ ಮೀನುಗಾರರ ನಾಯಿಕರಿರುತ್ತಾರೆ. ಅವರ ವರ್ಚಸ್ಸು ಸರಕಾರದರಬಾರಗಳಲ್ಲಿ ವಿಶೇಷವಿದೆ. ಸರಖೇಲ ಕಾನ್ಹೋಜೀ ರಾವಸಾಹೇಬ ಆಂಗ್ರೇ ಇವರ ಪೂರ್ಣ ಕೃಪಾಪಾತ್ರರಿರುವರು. "

" ಅವರು ನಿನಗೇನೇನು ಕಲಿಸಿರುವರು ? ಏನು ಕೆಲಸ ನೇಮಿಸಿದ್ದಾರೆ ? "

" ಅವರು ನನಗೆ ತಮ್ಮ ಯಾವ ಕೆಲಸ ಹೇಳುತ್ತಿಲ್ಲವೆಂದು ಕೇಳಬಾರದೇ ? ಮೀನು ಹಿಡಿಯುವ ಕೆಲಸದಿಂದ ಸರಖೇಲ ಸಾಹೇಬರ ಗುಪ್ತ ಚೀಟಿ-ಕಾಗದಗಳನ್ನು ತಲುಪಿಸುವ ಎಲ್ಲ ಕೆಲಸಗಳೂ ನನ್ನವೇ; ಅಲ್ಲದೆ ಸರಖೇಲರ ಮಹಾಲಿನ ಖಾಸ ಪಹರೆಯ ಕೆಲಸವೂ ಪ್ರಸಂಗವಿಶೇಷದಲ್ಲಿ ನನ್ನ ಕಡೆಗಿರುತ್ತದೆ. "

ತಾನು ಯಾರೊಡನೆ ಮಾತಾಡುತ್ತಿರುವನೋ ಅವನ ಈ ವರ್ಣನೆಯನ್ನು ಕೇಳಿ ಕುಣಕ್ಯಾ ತನ್ನ ಕ್ಷುದ್ರತೆಯ ಬಗ್ಗೆ ಮನದಲ್ಲಿ ಖತಿಗೊಂಡನು; ಆದರೆ ಅವನಿಗೆ ಮನಸ್ಸಿನ ಆತ್ಮವಿಶ್ವಾಸದ ಬೆಂಬಲವಿದ್ದಿತು. ಅಂತೆಯೇ ತಾನು ನೊಂದುಕೊಂಡಿಲ್ಲವೆಂಬದನ್ನು ತೋರಿಸಲೋಸುಗ ಅವನು ಧಾಕಲ್ಯಾನೊಡನೆ ಮರಳಿ ಸಂಭಾಷಣವನ್ನು ಮುಂದರಿಸಿದನು :—" ಹಾಗಾದರೆ ಗೆಳೆಯಾ, ನೀನಿಂದು ಇಲ್ಲಿ ಹೀಗೆ ಸುಮ್ಮನೆ ಕುಳಿತದ್ದೇಕೆ ? "

"ಸಮುದ್ರದಲ್ಲಿ ಮೀನು ಹಿಡಿಯುವ ಸರತಿಯು ಇಂದು ನನ್ನದಿದ್ದಿಲ್ಲ; ಅಲ್ಲದೆ ಇಂದು ಸ್ವಂತ ಭಾಗೂಜೀ ನಾಯಿಕರೇ ಆ ಕೆಲಸಕ್ಕೆ ಹೋಗಿರುತ್ತಾರೆ. ಅವರು ತಮ್ಮ ಜೊತೆಯ ಎಲ್ಲ ಹೋಡಿಗಳೊಡನೆ ಒಂದೆರಡು ಗಳಿಗೆಯಲ್ಲಿ ಹಿಂದಿರುಗುವರು. ಸರಕಾರೀ ಕಚೇರಿಯೊಳಗಿನ ಕೆಲ ಖಾಸ ನಿರೋಪವು ಅವರಿಗೆ ತಿಳಿಸತಕ್ಕದ್ದಿದೆ. ಅಂತೆಯೇ ಅವರ ನಿರೀಕ್ಷಣೆ ಮಾಡುತ್ತ ಕುಳಿತಿದ್ದೇನೆ."

"ಭಾಗೂಜೀ ನಾಯಿಕರು ಸರಕಾರೀ ಕಚೇರಿಯಲ್ಲಿ ನಿನಗೇನೂ ಕೆಲಸ ಹಚ್ಚಿ ಕೊಡುವದಿಲ್ಲವೇ?"

"ನನಗೆ ಸರಕಾರೀ ಕಚೇರಿಯೊಳಗಿನ ಕಾಯಮ ಕೆಲಸವೋ? ಥೂ! ಆ ಕೆಲಸಕ್ಕೆ ಬೆಂಕೀ ಹಚ್ಚು! ಎಲೋ, ಆ ಸರಕಾರೀ ಕೆಲಸದಲ್ಲೇನಿದೆ? ಸಂಪಾದನೆಯಿಲ್ಲ-ಮರ್ಯಾದೆಯಿಲ್ಲ! ನಾಲ್ಕು ನಾಣ್ಯ ಕೊಟ್ಟಾರು; ಆವರೆ ಅದಕ್ಕೆಂದು ಇಡೀ ದಿನ ದುಡಿಸ್ಯಾರು! ಅಲ್ಲಿ ಏನು ಬೇಕಾದಂತಹ ಕೀಳು ಕೆಲಸ ಮಾಡಬೇಕಾಗುವದು; ಅಲ್ಲದೆ ಬಾಯಿಪ್ರಸಾದ-ಕೈಪ್ರಸಾದಗಳ ಪಾರಿತೋಷಕಗಳು ಆಗಿಂದಾಗ್ಗೆ. ಯಾವ ಸೂಳೀಮಗನಿಗೆ ಆ ಕೆಲಸ ಬೇಕು! ನಾನು ನನ್ನ ನಾವೆಯಲ್ಲಿ ಕುಳಿತು ಸಮುದ್ರದ ಮೇಲೆ ಹೊರಟೆನೆಂದರೆ, ನಾನೇ ಸಮುದ್ರದ ರಾಜನೆಂದು ನನಗನಿಸುತ್ತದೆ. ನಮ್ಮ ತಂದೆಯವರ ದರ್ಪವೆಷ್ಟು? ಈ ಬಂದರದ ಸಮೀಪಕ್ಕೆ ಅದಾರಾದರೂ ಸುಳಿದಾರೇನು? ಸರಖೇಲರ ಅಪ್ಪಣೆಯ ಹೊರ್ತು ಹಾಗೆ ಯಾರಾದರೂ ಬಂದರೆ ಭಾಗೂಜೀ ನಾಯಿಕರು ಕೂಡಲೆ ಅವರನ್ನು ನುಗ್ಗುವರು. ಅವರ ಡೋಣಿ-ನಾವೆ-ಫತ್ತೆಮಾರಿ ಏನಿದ್ದದ್ದೆಲ್ಲ; ಮತ್ತು ಅದರೊಳಗಿನ ಮಾಲು ಸಹಿತವಾಗಿ ಅದನ್ನು ಬಂದರಕ್ಕೆ ತಂದೇ ಬಿಡುವರು. ಆ ಮಾಲನ್ನು ಕೂಡಲೆ ತಮ್ಮ ವಖಾರಿಗೆ ಕಳಿಸುವರು; ಹಾಗು ಆ ಜನರನ್ನು ಕತ್ತಲೆ ಕೋಣೆಗೆ ಅಟ್ಟಿಬಿಡುವರು ಹೆಚ್ಚಾದ ಕಪ್ಪ-ಕಾಣಿಕೆಗಳು ಮುಂದೆ ಬಂದಾಗಲೇ ಅವರ ಬಿಡುಗಡೆಯ ವಿಚಾರ! ನಮ್ಮ ತಂದೆಯವರು ಸೆರೆ ಹಿಡಿದು ತಂದ ಜನರು ಅಂತಿಂಥವರಲ್ಲ; ಅವರಲ್ಲಿ ಹಿಂದೂ ವ್ಯಾಪಾರಿಗಳಂತೂ ಇದ್ದೇ ಇರುವರು; ಅಲ್ಲದೆ ಅರಬಸ್ತಾನದ ಸಮುದ್ರಗಳ್ಳರೂ ಕೆಂಪು ಮುಸುಡೆಯ ಫಿರಂಗಿಗಳೂ ಇರುವರು! ನೀನವರನ್ನು ಕಂಡಿಲ್ಲವೆ?"

ಥಾಕಲ್ಯಾನ ಆ ಎಲ್ಲ ಮಾತು-ಕಥೆಗಳನ್ನು ಕೇಳಿ ಕುಣಕ್ಯಾ ತನ್ನ ಮನದಲ್ಲೇ ಮೆತ್ತಗಾದನು. ಅವನ ವಾಲತ್ತಿನ ಬಗ್ಗೆ ಮೋಹಿಸಿಬಿಟ್ಟನು. ಅವನ ಆಕಾಂಕ್ಷೆಯು ಜಾಗ್ರತವಾಯಿತು. ಅವನಿಗನಿಸಿತೇನಂದರೆ, ತಾನು ಶಾಸ್ತ್ರಿಗಳಿಗೆ ಏನಾದರೂ ಕೆಲಸ ಹಚ್ಚಿಕೊಡಿರೆಂದು ಮಾಡಿದ ಒತ್ತಾಯಕ್ಕೆ ಅವರು ಬೇಜಾರು ಪಟ್ಟು ಯಾವ ಕೆಲಸವನ್ನು ಇನ್ನೂ ಹಚ್ಚಿಕೊಡದಿರದ್ದೊಂದು ಬಗೆಯಿಂದ ವಿಹಿತವೇ ಆಯಿತು

ತನ್ನ ಆಶೆಗೆ, ಹುಮ್ಮಸ್ಸಿಗೆ, ಕರ್ತವ್ಯತೆಗೆ ಇದೊಂದು ಹೊಸ ದ್ವಾರವು ಕಂಡಿವೆ ಯೆಂದು ತಿಳಿದು ವನು:—"ಗೆಳೆಯಾ, ನಿನಗೊಂದು ಮಾತು ಕೇಳಲೋ?"

"ಕೇಳು-ಕೇಳು; ಅನುಮಾನಿಸದೆ ಕೇಳು" ಎಂದು ಧಾಕಲ್ಯಾ ತತ್ಪರತೆ ಯಿಂದ ಅಂದನು ಆತನಿಗೆ ಕುಣಕ್ಯಾ ಪರಕೀಯನೇನೋ ಅಹುದು; ಆದರೆ ಕುಣ ಕ್ಯಾನ ಮುಖದ ಮೇಲೆ ಒಂದ ಬಗೆ ು ಸ್ವಾಭಾವಿಕ ತೇಜವಿದ್ದುದರಿಂದ ಆತನನ್ನು ಕಂಡೊಡನೆ ಇವನ ಜೊತೆಯು ಲಭಿಸಿದರೆ ಅವಶ್ಯವು ಎಂದು ಧಾಕಲ್ಯಾನಿಗನಿಸಿತು.

ಕುಣಕ್ಯಾ:—"ಮಿತ್ರಾ, ಶಾಸ್ತ್ರಿಗಳಲ್ಲಿ ನನಗೇನೂ ಕೊರತೆಯಿಲ್ಲ; ಆದರೆ ನಾನು ಅವರ ಅನ್ನವನ್ನುಂಡು ಬಾಳು ಹರಿಯುವದೆಂತು? ಅವರು ನನ್ನ ಕೈನೋಡಿ ನನ್ನ ಭವಿತವ್ಯವನ್ನೇನೋ ತಿಳಿದಿರುವರು ನಿಜ; ಆದರೆ ಆ ಭವಿಷ್ಯವನ್ನು ನನ ಗಿನ್ನೂ ಹೇಳಲೊಲ್ಲರು; ಅಥವಾ ನನಗೆ ನೌಕರಿ-ಚಾಕರಿ ದೊರೆಕಿಸಿ ಕೊಡುವ ಪ್ರಯತ್ನಕ್ಕೂ ಅವರು ತೊಡಗಲೊಲ್ಲರು. ಆದ್ದರಿಂದ ನಾನು ಭಾಗೂಜೀ ನಾಯಿಕ ರನ್ನೇ ಮೊರೆ ಹೋಗಬೇಕು; ಹಾಗು ನನಗೆ ಮುಂದಿನ ಮಾರ್ಗ ತೋರಿಸಲೆಂದು ಹೇಳಬೇಕು ಎಂದೆನಿಸಹತ್ತಿದೆ."

"ಏನೂ ಅಡ್ಡಿಯಿಲ್ಲ. ಇಂದು ಅವರು ಸಮುದ್ರದಿಂದ ಬಂದ ಮೇಲೆ ನಾನೇ ನಿನಗೂ ಅವರಿಗೂ ಭೇಟಿ ಮಾಡಿಸುವೆನು. ಆ ಮೇಲೆ ನೀನು ನಿನ್ನ ದಾರಿಯು ಕಂಡುಕೊಳ್ಳುವೆಯಂತೆ"

( ೬ )

ಹೀಗೆ ಅವರೀರ್ವರಲ್ಲಿ ಸಂಭಾಷಣ ನಡೆದಿರಲು, ಸಮುದ್ರದೊಳಗಿಂದ ಎರಡು-ಮೂರು ದೊಡ್ಡ ಪಡಾವಗಳು ದಂಡೆಯ ಕಡೆಗೆ ಬರುತ್ತಿರುವದು ಕಾಣಿಸಹತ್ತಿದವು; ಹಾಗು ಅಲ್ಪಾವಧಿಯಲ್ಲೇ ಗಾಳಿಯ ಒತ್ತಡದಿಂದ ಅವು ದಂಡೆಗೆ ಬಂದು ತಲುಪಿ ದವು ಸಹ. ಆಳುಗಳು ಪಡಾವದೊಳಗಿನ ಜಾಳಿಗೆಗಳನ್ನೂ ಮೀನುಗಳನ್ನೂ ದಂಡೆಗೆ ಇಳಿಸಿದರು ಭಾಗೂಜೀ ನಾಯಿಕರು ಕೆಳಗಿಳಿಯುತ್ತಲೆ ಅವರು ಧಾಕಲ್ಯಾ ನನ್ನುದ್ದೇಶಿಸಿ:—"ಯಾಕೋ ಹುಡುಗಾ, ಈ ನಿನ್ನ ಹೊಸ ಜೊತೆಗಾರನಾರು?" ಎಂದು ಕೇಳಿದರು.

ಧಾಕಲ್ಯಾ ಕುಣಕ್ಯಾನ ಕಿವಿಯಲ್ಲಿ ಮೆಲ್ಲನೆ ಏನನ್ನೋ ಹೇಳಿದ. ಕೂಡಲೆ ಕುಣಕ್ಯಾ ಭಾಗೂಜೀ ನಾಯಿಕರಿಗೆ ಪೊಡಮೊಟ್ಟು:—"ನನ್ನನ್ನು ತಮ್ಮ ದಳದಲ್ಲಿ ಸೇರಿಸಿಕೊಳ್ಳಿರಿ. ನಾನೊಬ್ಬ ಅನಾಥ ಪೋರನಿರುತ್ತೇನೆ" ಎಂದು ಅನ್ನುವಷ್ಟರಲ್ಲಿ ಧಾಕಲ್ಯಾ ಭಾಗೂಜೀ ನಾಯಿಕರನ್ನುದ್ದೇಶಿಸಿ:—"ಅಪ್ಪಾ, ಇವನೊಬ್ಬ ಹೊಸ ಜೊತೆಗಾರ ನನಗಿಂದು ಲಭಿಸಿದ್ದಾನೆ. ಇವನು ಸರಖೇಲರ ಬಳಿಯಲ್ಲಿ ನೌಕರಿ ಮಾಡ ಬೇಕೆಂದಿದ್ದಾನೆ. ಆ ಬಗ್ಗೆ ತಮ್ಮ ಅಪ್ಪಣೆ ಹೇಗಾಗುವದೋ ಹಾಗೆ."

ಭಾಗೂಜಿಯು ಕುಣಕ್ಯಾನನ್ನು ಒಮ್ಮೆ ಆಪಾದ-ಮಸ್ತಕ ಪರ್ಯಂತ ನಿರೀಕ್ಷಿಸಿದನು; ಹಾಗು ಬಳಿಕ:--"ಸರಖೇಲರ ಚಾಕರಿಯೆಂದರೇನು ಹಿತ್ತಲದೊಳಗಿನ ಪಲ್ಲೆಯೆಂದು ಈ ಪೋರ ತಿಳಿದಿರುವನೇನೋ ಧಾಕಲ್ಯಾ? ಒಂದು ವೇಳೆ ಅದು ದೊರೆತರೂ ಶೂಲದ ಮೇಲಿನ ಹೋಳಿಗೆಯೆಂದು ಹೇಳು! ಪೋರನು ಒಳ್ಳೇ ತೇಜಸ್ವಿಯೆಂದು ತೋರುತ್ತಾನೆ. ಆದರೆ ಇವನಿಗೆ ಅನಾಥನಾಗಲಿಕ್ಕೇನಾಯಿತೋ ಧಾಕಲ್ಯಾ? ಲೋಕದೊಳಗಿನ ತಂದೆ-ತಾಯಿಗಳು ಇಂಥ ಹುಡುಗರನ್ನು ಹಿಂದೆ ಬಿಟ್ಟು ಸುಡುಗಾಡು ಸೇರುವ ಹರಕೆಯನ್ನೇ ಹೊತ್ತಿರುವರೇನು? ಅದಿರಲಿ ಎಲ್ಲರ ದೈವವು ಅವರವರ ಜೊತೆಯಲ್ಲೇ. ನಾನು ಪ್ರಯತ್ನ ಮಾಡುತ್ತೇನೆ. ಏನಾಗುವದೋ ನೋ-ಡೋಣ; ಆದರೆ ಇವನೇನು ಸಮುದ್ರದಲ್ಲಿ ಸಂಚರಿಸುವ ಖಲಾಸಿಯಾಗುವನೋ ಅಥವಾ ಕೋಟೆಯೊಳಗಿನ ಕಚೇರಿಯ ಶಿಪಾಯಿಯಾಗತಕ್ಕವನೋ?

ಬಹು ಅವಸರದಿಂದ ಕುಣಕ್ಯಾ:—"ಛೇ-ಛೇ! ನನಗಾ ಶಿಪಾಯಿಯ ಚಾಕರಿ ಬೇಕಿಲ್ಲ. ನನಗೆ ಕಲಿಸಿದರೆ ನಾನು ಖಲಾಸಿಯೇ ಆಗುತ್ತೇನೆ. ನಾನು ಸಮುದ್ರದ ಮೇಲೆ ಹೋದೇನು; ಮತ್ತೇನು ಹೇಳುವಿರೋ ಅದನ್ನೆಲ್ಲ ಮಾಡೇನು."

ಭಾಗೂಜಿಯು ನಕ್ಕು:—"ಭಲೆ-ಭಲೆ! ಇವನಿಗೆ ಖಲಾಸಿಯಾಗುವದೇನೋ ಕಲಿಸಬೇಕಂತೆ! ಮೀನುಗಳಿಗೆ ನೀರಲ್ಲಿ ಸಂಚರಿಸಲಿಕ್ಕಾರಾದರೂ ಕಲಿಸುತ್ತಿರುವರೇ? ಅದಕ್ಕೆ ಹುಟ್ಟುಗುಣವೇ ಬೇಕು. ಅದಿರಲಿ. ಪೋರಾ, ಮತ್ತೊಂದಾದರೂ ಭೆಟ್ಟಿಯಾಗು. ಅಷ್ಟರಲ್ಲಿ ಏನಾಗುವದೋ ನೋಡೋಣ."

ಭಾಗೂಜಿಯು ಕುಣಕ್ಯಾನಿಗೆ ಹೀಗೆಂದು ಹೇಳಿ:—"ಧಾಕಲ್ಯಾ, ಈಗ ನೀನೇನೆನ್ನುತ್ತಿರುವೆ ಹೇಳು."

"ಅಪ್ಪಾ, ಮತ್ತೇನೂ ಇಲ್ಲ, ಆದರೆ ಅಪ್ಪಾ, ಸರಖೇಲ ಸಾಹೇಬರು ನಿಮ್ಮನ್ನು ಈಗಿಂದೀಗಲೇ ಕರೆದಿರುತ್ತಾರೆ. ಕೋಟೆಯಲ್ಲಿ ಅವಸರದ ಕೆಲಸವಿದೆಯಂತೆ."

"ಒಳ್ಳೇದು. ಈ ಮೀನು ಹಿಡಿಯುವ ಕೆಲಸವಾಯ್ತು. ಇನ್ನು ಬೇರೆ ಕೆಲಸ" ಎಂದೆನ್ನುತ್ತ ಭಾಗೂಜೀ ನಾಯಿಕರು ಕೋಟೆಯ ಮಾರ್ಗ ಹಿಡಿದರು. ಹೋಗುವಾಗ ಅಲ್ಲಿದ್ದ ಮೀನುಗಾರರನ್ನು ಕುರಿತು:—"ಇಂದು ಮೀನುಗಳು ಹೆಚ್ಚಾಗಿ ದೊರೆತಿವೆ. ಮನೆಗೆ ಹೋಗಿ ಚೆಲ್ಲಾಟವಾಡಿರಿ; ಆದರೆ ನಿಮ್ಮೊಳಗೆ ಯಾರಾದರೂ ಸೆರೆ-ಸಿಂದಿಗಳನ್ನು ಕುಡಿದರೆ ಎಚ್ಚರ! ಒಬ್ಬೊಬ್ಬರ ಮೈದೊಗಲೇ ಸುಲಿಸೇನು!"

ಅಂದಿನಿಂದ ಧಾಕಲ್ಯಾ-ಕುಣಕ್ಯಾರಲ್ಲಿ ಹೆಚ್ಚಾಗಿ ಸ್ನೇಹ ಬೆಳೆಯಿತು. ಸರಖೇಲರ ಹಡಗುಪಡೆಯಲ್ಲಿ ನೌಕರಿ ದೊರೆಕಿಸುವದಾದರೆ ಮೊಟ್ಟಮೊದಲು ನಾವಿಕನ ಖಲಾಸಿಯ ಕೆಲಸ ಕಲಿಯಬೇಕೆಂಬುದು ಕುಣಕ್ಯಾನಿಗೆ ಆಗಲೆ ಹೊಳೆಯಿತು;

ಆದರೆ ಬ್ರಾಹ್ಮಣರ ಮನೆಯ ನೌಕೆ, ಹೋಡಿ, ಪಡಾವಗಳಿದ್ದರೂ ಅವೆಲ್ಲ ಸಮು ದ್ರದ ಒತ್ತಿನಲ್ಲೇ ಸಂಚರಿಸತಕ್ಕವುಗಳು. ಅವು ಸಮುದ್ರದಲ್ಲಿ ಸೇರತಕ್ಕವುಗಳಲ್ಲ; ಹಾಗು ಸಮುದ್ರದಲ್ಲಿ ಸಂಚರಿಸುವ ಹೋಡಿ-ನಾವುಗಳನ್ನು ನಡೆಸುವ ಕೆಲಸ ಕಲಿಯ ಬೇಕಾದರೆ ಮೊದಲು ಮೀನು ಹಿಡಿಯುವ ಮೀನುಗಾರರ ಜೊತೆಗೆ ಹೋಗಿಯೇ ಕಲಿಯಬೇಕೆಂಬದು ಸ್ಪಷ್ಟವೇ ಆಗಿತ್ತು.

ಒಂದು ದಿನ ಮನೆಯಲ್ಲಿ ಶಾಸ್ತ್ರಿಗಳೊಡನೆ ಹರಟೆ ಹೊಡೆಯುತ್ತಿರುವಾಗ ಕುಣಕ್ಯಾ ಮೆಲ್ಲನೆ ಕೇಳುತ್ತಾನೆ:—"ಶಾಸ್ತ್ರಿಗಳೇ, ನನಗೆ ಮನಃಪೂರ್ವಕವಾಗಿ ಸಮುದ್ರ ಸಂಚಾರದ ಇಚ್ಛೆಯಿರುತ್ತದೆ. ಅದೇಕರೀ? ನನ್ನ ಕೈ ಮೇಲಿನ ಗೆರೆಗಳ ಮೇಲಿಂದ ಹಾಗೇನಾದರೂ ನಿಮಗೆ ಕಾಣುತ್ತದೇನರೀ?"

ಆ ಪ್ರಶ್ನೆಯನ್ನು ಕೇಳಿ ಶಾಸ್ತ್ರಿಗಳಿಗೆ ನಗುವು ಬಂತು. ಅದಕ್ಕೆ ಅವರು:— ನಿನಗೆ ಸಮುದ್ರ ಸಂಚಾರದ ಯೋಗವಿದೆಯೆಂಬದನ್ನು ನಾನು ಮೊದಲೇ ತರ್ಕಿ ಸಿರುತ್ತೇನೆ."

"ಹಾಗಾದರೆ ನೀವದನ್ನು ನನಗಿದುವರೆಗೂ ಅದೇಕೆ ತಿಳಿಸಲಿಲ್ಲ? ಆದರೆ ಸಮುದ್ರದಲ್ಲಿ ಸೇರದ ಹೊರತು ನನ್ನಿಂದ ಸಮುದ್ರ ಸಂಚಾರವಾಗುವದೆಂತು? ಮತ್ತು ನಿಮ್ಮ ಭವಿಷ್ಯವಾದರೂ ನಿಜವಾಗುವದೆಂತು?"

"ಎಲೋ! ದೈವದಲ್ಲಿದ್ದರೆ ಅವೇ ನಿನ್ನನ್ನು ಎಳೆದೊಯ್ದೀತು. ನೀನಾವ ಜಾತಿಯವನೆಂಬದಿನ್ನೂ ನನಗೆ ಚೆನ್ನಾಗಿ ತಿಳಿದಿಲ್ಲ ನಿನ್ನ ಹಸ್ತರೇಖೆಗಳಿಂದ."

"ಹಾಗಾದರೆ ನಾನು ಯಾವನೊಬ್ಬ ಮೀನುಗಾರನ ಜೊತೆಗೂಡಿ ಅವ ನೊಡನೆ ಸಮುದ್ರ ಸಂಚರಿಸತೊಡಗಿದರೆ?"

"ಮೀನುಗಾರನ ಜೊತೆ ಹಿಡಿದು ಮೀನು ಹಿಡಿಯತಕ್ಕವನೇನು?"

"ನನಗೆ ಮೀನು ಹಿಡಿಯುವ ಕೆಲಸವು ಮನಸಾ ಒಗ್ಗುವದಿಲ್ಲೆಂಬದನ್ನು ಶಾಸ್ತ್ರಿಗಳೇ, ನಿಮಗೆ ನಿಜವಾಗಿ ಹೇಳುವೆನು; ಆದರೆ ಮೀನುಗಾರರ ಜೊತೆ ಹಿಡಿದರೆ ನನಗೆ ನಾವೆ-ಪಡಾವಗಳನ್ನು ನಡೆಸಲಿಕ್ಕೆ ಬಂದೀತು. ಶಾಸ್ತ್ರಿಗಳೇ, ನಾನದನ್ನು ಮಾಡಲೋ?"

"ಅವಶ್ಯವಾಗಿ ಕಲಿ. ಅದಕ್ಕೇನು ಆತಂಕ? ತಮ್ಮಾ, ವಿದ್ಯೆಯನ್ನು ದೇವರು ಎಲ್ಲರಿಗೂ ಹಂಚಿಕೊಟ್ಟಿರುತ್ತಾನೆ. ನಿನಗೆ ನಾವಿಕನ ವಿದ್ಯೆಯು ರುಚಿಸುತ್ತಿದ್ದರೆ ನೀನು ಅದನ್ನೇ ಕಲಿ. ನೀನು ಮೀನದ ಹಡಗುಗಳ ಮುಖ್ಯಸ್ಥನಾಗದೆ ಕದಾಚಿತ್ ವ್ಯಾಪಾರೀ ಹಡಗುಗಳ ತಾಂಡೇಲನಾದೀ."

ಶಾಸ್ತ್ರಿಗಳ ಈ ಸಹಜವಾದ ಅಪ್ಪಣೆ ದೊರೆತೊಡನೆಯೇ ಕುಣಕ್ಯಾ ಧಾಕಲ್ಯಾ ನೊಡನೆ ಸಂಧಾನ ಕಟ್ಟಿದನು. ಮೊದಮೊದಲು ಸಮುದ್ರದ ಒತ್ತಿನೊಳಗೇ ಮೀನು ಹಿಡಿಯುವ ಹೋಡಿಗಳಲ್ಲಿ ಕುಳಿತು ಮೆಲ್ಲಮೆಲ್ಲನೆ ಹುಟ್ಟು ಹಾಕಲು ಕಲಿತನು. ಅದರಂತೆ ಬಂದರಕ್ಕೆ ಮಾಲು ತಲುಪಿಸುವ ಎರಡು ಹೋಡಿಗಳ ನಾವಿಕರ ಸ್ನೇಹ ಸಂಪಾದಿಸಿ, ತಾಜ ನಡೆಸುವದು, ಚುಕ್ಕಾಣಿ ಹಿಡಿಯುವದು, ಶೀಡ ಕಟ್ಟುವದು-ಇಳಿಸುವದು ಇವೆಲ್ಲ ಕೆಲಸಗಳನ್ನು ಇವನು ಅವರಿಂದ ಕಲಿತುಕೊಂಡನು. ನಾವಿಕರಿಗೇನು? ಒಬ್ಬ ಹುಮ್ಮಸಿನ ಬಿಟ್ಟಿಯ ಚಾಕರನು ಅವರಿಗೆ ಸಹಾಯಕನಾಗಿ ಅನಾಯಾಸ ದೊರೆತ. ಪ್ರತಿಫಲವನ್ನಪೇಕ್ಷಿಸದೆ, ವ್ಯೈಮುರೇ ದುಡಿಯುವ ಈ ಹರೆಯದ ಹುಡುಗನು ನಾವಿಕರಿಗೆ ಬಲು ಅಗತ್ಯದವನಾದನು. ಅದರಿಂದ ಅವರು ಕುಣಕ್ಯಾನಿಗೆ ಒಮ್ಮೊಮ್ಮೆ ಯಾವುದೊಂದು ಟೆಂಗಿನಕಾಯಿ ಕೊಡುವರು. ಅವನು ಅದನ್ನು ಸ್ವೀಕರಿಸಿ, ಮನೆಗೊಯ್ದು ಶಾಸ್ತ್ರಿಗಳಿಗೆ ಕೊಡುತ್ತಿದ್ದ. ಶಾಸ್ತ್ರಿಗಳ ಮನೆಯಲ್ಲಿ ಟೆಂಗಿನಕಾಯಿಗಳಿಗೇನೂ ಕೊರತೆಯಿರಲಿಲ್ಲ; ಆದರೆ ಕುಣಕ್ಯಾ ತನ್ನ ಸಂಪಾದನೆಯೆಂದು ತಂದುಕೊಟ್ಟ ಟೆಂಗಿನಕಾಯಿಯ ಬಗ್ಗೆ ಅವರಿಗೊಳ್ಳೇ ಕೌತುಕವೆನಿಸುತ್ತಿತ್ತು; ಮತ್ತು ಆ ಕಾಯಿ ಅವನಿಗೆ ಯಾರಿಂದ ದೊರೆಕಿತೆಂಬವು ತಿಳಿಯಿತೆಂದರೆ, ಅವರು:—"ತಮ್ಮಾ, ನಿನ್ನ ನಾವಿಕ ಶಿಕ್ಷಣ ಎಲ್ಲಿಗೆ ಬಂತಪ್ಪಾ?" ಎಂದು ಕೇಳಿವರು.

( ೫ )

ಒಂದು ದಿವಸ ಕುಣಕ್ಯಾ ಸರಖೇಲರನ್ನು ಕಾಣಬೇಕೆಂದು ಬಯಸಿದನು ಧಾಕಲ್ಯಾ ಅವನ ಆ ಇಚ್ಛೆಯನ್ನು ಸಫಲಗೊಳಿಸಿದನು. ಯಾಕಂದರೆ ದೈವಯೋಗದಿಂದ ಅಂದೇ ಸರಖೇಲರ ಸವಾರಿಯು ಬೇಟೆಗಾಗಿ ಹೋಗಿದೆ, ಎಂಬ ವಾರ್ತೆ ಬಂತು. ಆದ್ದರಿಂದ ಸಂಜೆಯ ಮುಂದೆ ಬೇಟೆಯಿಂದ ಅವರು ಹಿಂದಿರುಗುವ ಮಾರ್ಗದಲ್ಲಿ ಇವರಿಬ್ಬರೂ ಹೋಗಿ ಕುಳಿತರು.

ಸೂರ್ಯನು ಮುಳುಗಲಿಕ್ಕೆ ಇನ್ನೂ ನಾಲ್ಕು ಗಳಿಗೆಗಳು ಉಳಿದಿರಬಹುದು. ಆಗ ವಿಜಯದುರ್ಗದ ಪಂಚಕ್ರೋಶದೊಳಗಿನ ದಕ್ಷಿಣ ದಿಕ್ಕಿಗೆ ಕೊಂಬು ಊದಿದ ಲಲಕಾರವು ಕೇಳಿಸಹತ್ತಿತು. ಸರಖೇಲರು ಹಿಂದಿರುಗುವ ಚಿಹ್ನವೇ ಅದಾಗಿದ್ದಿತು. ಅಲ್ಪಾವಧಿಯಲ್ಲಿ ಬೇಟೆಗಾರರ ಗುಂಪೊಂದು ಬರುತ್ತಿರುವದು ಕಾಣಿಸಿತು. ಆಗಿನ ಸೊಬಗನ್ನೇನು ವರ್ಣಿಸಲಿ! ಎಲ್ಲಕ್ಕೂ ಮುಂದೆ ಕೆಲ ಜನರು ಕೊಂಬನ್ನೂದುತ್ತಿದ್ದರು. ಅವರ ಹಿಂದೆ ಕೊರಳಲ್ಲಿ ಢೋಲ ವಾದ್ಯಗಳನ್ನು ನೇತು ಹಾಕಿಕೊಂಡ ಬಜೆಂತ್ರಿಯವರು ಆ ವಾದ್ಯವನ್ನು ಒಳ್ಳೇ ಗತ್ತಿನಲ್ಲಿ ಬಾರಿಸುತ್ತ ಹೆಜ್ಜೆಗಳನ್ನಿಕ್ಕುತ್ತಿದ್ದರು. ಅವರ ಹಿಂದಿನಿಂದ ಹೆಗಲ ಮೇಲೆ ಭಲ್ಲೆ, ಖಡ್ಗಗಳನ್ನು ಹೊತ್ತಂಥ,

ತಲೆಗೆ ಮುಂಡಾಸ ಸುತ್ತಿದಂತಹ ಶಿಪಾಯಿ-ಪ್ಯಾದೆಗಳು ಒಳ್ಳೇ ಡೌಲಿನಿಂದ ನಡೆದಿದ್ದರು. ಅವರ ಹಿಂದೆ ಬೇಟೆಗಳನ್ನೆಬ್ಬಿಸುವ ಕೂಗಿನ ಜನರು ಕೈಗಳಲ್ಲಿ ಕೋಲು-ಬಡಿಗೆಗಳನ್ನು ಹಿಡಿದುಕೊಂಡು, ಹೆಗಲ ಮೇಲೆ ಕಂಬಳಿ-ಗೊಂಗಡಿಗಳನ್ನು ಹಾಕಿಕೊಂಡು ಇನಾಮಿನ ಆಶೆಯಿಂದ ಬರುತ್ತಿದ್ದರು. ಅವರ ಹಿಂದಿನಿಂದ ಹತ್ತೆಂಟು ಜನ ಬೇಟೆಗಾರರಲ್ಲಿ ಕೆಲವರು ಬೇಟೆಯಲ್ಲಿ ಕೊಂದ ಸಣ್ಣ-ದೊಡ್ಡ ಮೊಲ ಇಲ್ಲವೆ ಹಕ್ಕಿಯನ್ನು ಹಗ್ಗಕ್ಕೆ ಕಟ್ಟಿ ಹೆಗಲ ಮೇಲೆ ಚೆಲ್ಲಿಕೊಂಡು ನಡೆದಿದ್ದರು. ಅವರ ಹಿಂದೆ ಹನ್ನೆರಡು-ಹನ್ನೆರಡು ಮಂದಿಗಳ ಎರಡು ಗುಂಪು ಬರುತ್ತಿದ್ದವು. ಹಗ್ಗಗಳಿಂದ ಕಾಲ ಗಳನ್ನು ಕಟ್ಟಿ, ಅವುಗಳ ನಡುವೆ ಉದ್ದುದ್ದನ್ನ ಗಳಗಳನ್ನು ಸೇರಿಸಿ, ಅವುಗಳಿಗೆ ಅಡ್ಡಡ್ಡ ಕೋಲುಗಳನ್ನು ಕಟ್ಟಿ, ಅವುಗಳನ್ನು ಹೆಗಲ ಮೇಲೆ ಹೊತ್ತುಕೊಂಡು ತಿರುವುಮುರುವಾಗಿ ಇಳಿಬಿಟ್ಟಿದ್ದ ಒಂದೊಂದು ಪ್ರಚಂಡ ಕಾಡು ಹಂದಿಯನ್ನು ಪ್ರತಿಯೊಂದು ಗುಂಪಿನವರೂ ಹೊತ್ತೊಯ್ಯುತ್ತಿದ್ದರು; ಹಾಗು ಅವರೆಲ್ಲರ ಹಿಂದಿನಿಂದ ಸರಖೇಲ ಕಾನ್ಹೋಜೀ ಆಂಗ್ರೇಯವರ ಸವಾರಿಯು ತನ್ನಿಬ್ಬರ ಬೇಟೆಗಾರ ಜೊತೆಗಾರರ ಹೆಗಲ ಮೇಲೆ ಕೈಯಿಟ್ಟುಕೊಂಡು ಒಳ್ಳೇ ಡೌಲಿನಿಂದ ಅತ್ತಿತ್ತ ಅಲ್ಲಾಡುತ್ತ ಸಾವಕಾಶವಾಗಿ ಬರುತ್ತಿತ್ತು.

ವಿಜಯದುರ್ಗ ಕೋಟೆಯಿಂದ ದಕ್ಷಿಣಕ್ಕೆ ಅರ್ಧ ಹರದಾರಿಯ ಮೇಲೆ ದೇವಿಯದೊಂದು ಹಳೇ ದೇವಾಲಯವೂ ಅದರ ಮುಂದೊಂದು ವಿಸ್ತೀರ್ಣವಾದ ಬೈಲೂ ಇತ್ತು. ಅಲ್ಲಿಗೆ ಬಂದ ಬಳಿಕ ಆ ವೆ ರವಣಿಗೆಯು ನಿಂತಿತು. ಅವರೆಲ್ಲರೂ ಅಲ್ಲಿಯ ಕಿರಿ ಕರಕಿಯ ಮೇಲೆ ವೀರಾಸನ ಮಂಡಿಸಿ ಕುಳಿತರು. ವಿಶ್ರಾಂತಿ ಪಡೆಯಲೆಂದು ಬೇಟೆಯ ಮೃಗಗಳನ್ನು ಹೆಗಲ ಮೇಲಿಂದಿಳಿಸಿದರು. ಕೇವಲ ಸರಖೇಲರ ಮಟ್ಟಿಗೆಂದು ಒಂದು ದೊಡ್ಡ ಈಚಲಗರಿಯ ಚಾಪಿಯು ಹಾಸಲ್ಪಟ್ಟಿತ್ತು; ಹಾಗು ಅದರ ಮೇಲೆ ಜಾಜಮು ಹಾಸಿತ್ತು. ಸರಖೇಲರು ವೀರಾಸನದಿಂದ ಜಾಜಮುದ ಮೇಲೆ ಕುಳಿತ ಕೂಡಲೆ ಕೊಂಬಿನವರು ಕೊಂಬನ್ನೂದಿ ಎಲ್ಲರಿಗೂ ಸೂಚಿಸಿದರು.

ಆಗಿನ ಕಾಲದ ಕೊಂಕಣ ಪ್ರಾಂತದ ಮರಾಠಾ ಸರದಾರರಲ್ಲಿ ಕಾನ್ಹೋಜೀ ಆಂಗ್ರೇಯಷ್ಟು ಪರಾಕ್ರಮಿಯು ಇನ್ನೊಬ್ಬರಿರಲಿಲ್ಲ. ಅದರಂತೆಯೇ ಮರ್ದನೂ ಸುಂದರನೂ ಬೇರೊಬ್ಬನಿರಲಿಲ್ಲ. ಅವನು ಸಾದುಗಪ್ಪಿನವನು; ಆದರೆ ಮುಖದ ಮೇಲಿನ ಎಲ್ಲ ಅವಯವಗಳು ತೀರ ಅಚ್ಚುಕಟ್ಟಿನವೂ ಹೊಳಪಿನವೂ ಆಗಿದ್ದವು; ಬರೀ ಆತನ ಸರಲ ಹಾಗು ಎದ್ದು ಕಾಣುವ ಮೂಗನ್ನು ನೋಡಿದರೇ ಅವನು ಸಾವಿರಜನರಲ್ಲೊಬ್ಬನೆಂಬಂತೆ ತೋರುತ್ತಿತ್ತು. ಆತನ ಕಣ್ಣುಗಳು ಹೆಚ್ಚಾಗಿ ಕಪ್ಪು ಬಣ್ಣದವೂ ಒಡೆದು ಕಾಣುವಂಥವೂ ಆಗಿದ್ದವು; ಆದರೆ ಉಬ್ಬುಗಣ್ಣಿನಲ್ಲಿ

ಪ್ರಾಯಶಃ ಯಾವ ತೇಜವಿರುತ್ತಿರುವದಿಲ್ಲವೋ ಅದು ಕಾನ್ಹೋಜಿಯ ಕಣ್ಣುಗಳಲ್ಲಿದ್ದು, ಅವನು ಯಾವನೊಬ್ಬನಲ್ಲಿ ತನ್ನ ದೃಷ್ಟಿಯನ್ನು ನೆಟ್ಟನೆಂದರೆ ಆ ಎರಡನೇ ವ್ಯಕ್ತಿಗೆ ಆತನೊಡನೆ ತನ್ನ ದೃಷ್ಟಿಯನ್ನು ಬೆರಿಸುವದು ಅಶಕ್ಯವಾಗುತ್ತಿತ್ತು. ಆತನ ಮೀಸೆಗಳು ಹುರಿಕಟ್ಟಾಗಿದ್ದು, ಆ ಕಲ್ಲೀಮೀಸೆಗಳಿಂದ ಅವನ ಭವ್ಯವಾದ ಗಲ್ಲಗಳು ಬಹುತರವಾಗಿ ಮುಚ್ಚಿ ಹೋಗುತ್ತಿದ್ದವು. ಅವನ ದನಿಯು ಬಹು ಗಂಭೀರವೂ ಮರ್ದವೂ ಆಗಿತ್ತು; ಆತನು ಗಟ್ಟಿಯಾಗಿ ಕೂಗಿದನೆಂದರೆ ಮುಗಿಲಲ್ಲಿ ಗಡಗಡಿಸಿದಂತಾಗುತ್ತಿತ್ತು.

ಆಂಗ್ರೇನ ಸವಾರಿಯು ಕುಳಿತ ಕೂಡಲೆ ಆತನ ಖಾಸ ಸೇವಕನೊಬ್ಬನು ಬಂದು ತನ್ನಲ್ಲಿಯ ಪಂಚವರ್ಣದ ಕರವಸ್ತ್ರವನ್ನು ಮುಂದೆ ಮಾಡಿದನು. ಕಾನ್ಹೋಜಿಯು ಅದನ್ನು ತಕ್ಕೊಂಡು ಬೆವರಿನಿಂದ ಹೊಲಸಿಟ್ಟಿದ್ದ ತನ್ನ ಮೋರೆಯನ್ನು ಚೆನ್ನಾಗಿ ಒರೆಸಿಕೊಂಡನು. ಅಷ್ಟರಲ್ಲಿ ಮತ್ತೊಬ್ಬ ಸೇವಕನು ಮುಂದೆ ಬಂದು ಕೈ ಜೋಡಿಸಿ ನಿಂತನು; ಹಾಗು ಒಳ್ಳೇ ನಮ್ರತೆಯಿಂದ:—"ಎಳೆಗಾಯಿ ಸುಲಿಯಬಹುದೋ? ಅಥವಾ ತಾಜಾ ನೀರಾ ತಂದಿದೆ, ಅದನ್ನು ತರಲೋ?" ಎಂದು ಕೇಳಿದನು. ನೀರಾ ತರಬೇಕೆಂಬ ಅಪ್ಪಣೆಯಾಗಲು, ಆತನು ಕೂಡಲೆ ಸಮೀಪದಲ್ಲಿ ತಂದಿಟ್ಟಿದ್ದ ಬಿಸಿಬಿಸಿ ನೀರಾದ ಪಾತ್ರೆಯನ್ನು ತಂದು ಒಡೆಯನೆದುರು ಹಿಡಿದನು. ಕಾನ್ಹೋಜಿಯು ಹೆಚ್ಚಾಗಿ ನೀರಡಿಸಿದವನು. ನೀರಿನ ತಂಬಿಗೆಯನ್ನು ಒಂದೆರಡು ಗುಟುಕಿನಲ್ಲೇ ಬರಿದು ಮಾಡುವಂತೆ ಆ ನೀರಾಪಾತ್ರೆಯನ್ನು ತೆರವು ಮಾಡಿದನು; ಅದರಂತೆಯೇ ಎರಡನೇ ನೀರಾ ಪಾತ್ರೆಯನ್ನು ತೆರವು ಮಾಡಿದ ನಂತರ ಆತನು ಅಕ್ಕಪಕ್ಕಗಳಲ್ಲಿ ಹೊರಳಿ ನೋಡಿ ಸಂಭಾಷಣಕ್ಕೆ ಮೊದಲು ಮಾಡಿದನು.

ಹತ್ತಿರದಲ್ಲೇ ಕುಳಿತಿದ್ದ ಭಾಗೂಜೀ ನಾಯಿಕನ ಕಡೆಗೆ ಹೊರಳಿ ಸರಖೇಲನು: "ಭಾಗೂಜೀ ನಾಯಿಕ! ಇಂದು ಬೇಟೆಗೊಳ್ಳೇ ರಂಗು ಬಂದಿತ್ತಲ್ಲವೆ?"

ಭಾಗೂಜೀ:—"ಧಣಿಯರೇ! ಅದನ್ನೇನು ಹೇಳುವದಿದೆ? ತಾವು ಸಮುದ್ರದಂತೆ ವನಕ್ಕೂ ರಾಜರೇ ಆಗಿರುತ್ತೀರಿ ತಮ್ಮ ಕೈಯೊಳಗಿನ ಹುಟ್ಟು ಹೇಗೋ ಹಾಗೆಯೇ ಭಲ್ಲೆಯು! ಅವೆರಡೂ ಒಂದೇ ಬಗೆಯಾಗಿ ಯಶಸ್ವಿಯಾದವುಗಳು. ತಾವು ಕೊಂದ ಈ ಕಾಡು ಹಂದಿಗಳಿಂದ ನಾಲ್ವತ್ತು-ಐವತ್ತು ಮಂದಿ ರೈತರಾದರೂ ಸುಖಿಗಳಾದಾರು; ಹಾಗು ತಮ್ಮನ್ನು ಹಾಡಿ ಹರಸಿಯಾರು. ಸರಕಾರ, ತಮ್ಮ ಆ ಹಡಗುಪಡೆಯ ಹುಟ್ಟು ತಮ್ಮ ಕೈ ಮುಟ್ಟದೆ ಕೇವಲ ತಮ್ಮ ಅಧಿಕಾರದಿಂದಲೇ ಯಶಸ್ವಿಯಾಗುತ್ತದೆ; ಮತ್ತು ಭಲ್ಲೆಯಂತೂ ಪ್ರತ್ಯಕ್ಷ ತಮ್ಮ ಕೈಯಲ್ಲೇ ಇರುತ್ತದೆ. ಅಂದಬಳಿಕ ಅದಕ್ಕೆ ಯಶ ದೊರೆಯಲೇನು ತಡ?"

" ಆದರೆ ಬೇಟೆಯಲ್ಲಿ ಯಶ ದೊರೆಯಲಾದರೂ ಭಾಗೂಜೀ ನಾಯಿಕ, ನಿಮ್ಮಂತಹ ಸಹಾಯಕರ ಆವಶ್ಯಕತೆ ಬೇಕೇ ಬೇಕು. ಇಂದಿನ ಸಂಗತಿಯನ್ನೇ ನೋಡಿರಿ. ಆ ಮೊದಲನೇ ವರಾಹವು ನಮ್ಮ ಮೊಟ್ಟಮೊದಲಿನ ಭಲ್ಲೆಯ ಏಟಿಗೇ ಬಿತ್ತು; ಆದರೆ ಎರಡನೇದು ನನ್ನ ಮೇಲೆ ಸ್ವಲ್ಪಾದರೂ ಏರಿ ಬಂದೇ ಬಂದಿತ್ತಲ್ಲವೆ? ಒತ್ತಟ್ಟಿಗಿನ ನನ್ನ ಭಲ್ಲೆಯ ಹೊಡೆತವೂ ಎರಡನೇ ಕಡೆಯಿಂದ ನಿಮ್ಮ ಭಲ್ಲೆಯ ಹೊಡೆತವೂ ಅದರ ಒಂದೇ ಪಕ್ಕಡೆಯಲ್ಲಿ ನೆಟ್ಟವು. ಅಂತೆಯೇ ಕೆಲಸವಾಯಿತು. ಇಲ್ಲದಿದ್ದರೆ ಆ ವರಾಹ ಮೃಗವು ನನ್ನ ಎಡದೊಡೆಯನ್ನು ಕತ್ತರಿಸದಿರುತ್ತಿರಲಿಲ್ಲ. ಹೇಗೆಯೇ ಇರಲಿ....." ಎಂದಂದು, ಕಾನ್ಹೋಜಿಯು ವಿನೋದ ಬುದ್ಧಿಯಿಂದ ನಗೆಚೇಷ್ಟೆಯ ದನಿ ತೆಗೆದು :—' ನಿರುಪದ್ರ-ನಿರಪರಾಧಗಳಾದ ಮೀನುಗಳನ್ನು ಕೊಂದು, ಭಾಗೂಜೀ ನಾಯಿಕ, ನೀವು ದಿನಾಲು ಪಾಪಗೆಯ್ಯುತ್ತೀರಿ; ಆದರೆ ರೈತ ಜನರಿಗೆ ಉಪದ್ರವ ಕೊಡುವ, ಅವರ ಬೆಳೆಗಳನ್ನು ಸತ್ಯಾನಾಶಗೊಳಿಸುವ ಹಾಗು ಅವರ ಹೊಟ್ಟೆಯ ಮೇಲೆ ಹೊಡೆಯುವ ಈ ಕಾಡು ಹಂದಿಗಳನ್ನು ಕೊಂದು ಆ ಪಾಪವನ್ನು ಅಲ್ಪಮಟ್ಟಿಗಾದರೂ ತೊಳೆಕೊಳ್ಳುತ್ತೀರೆಂದು ನಾನನ್ನುತ್ತೇನೆ."

ಭಾಗೂಜೀ ನಾಯಿಕನಾದರೂ ತನ್ನ ಮಟ್ಟಿಗೆ ತುಸ ಧರ್ಮಶಾಸ್ತ್ರವನ್ನೂ ತುಸ ನೀತಿಶಾಸ್ತ್ರವನ್ನೂ ಅರಿತಿದ್ದನು. ಕಾನ್ಹೋಜಿಯು ಮೀನು ಹಿಡಿಯುವ ಪಾಪಕ್ಷಾಲನಕ್ಕೆ ಯಾವ ಅನುಕೂಲ ಅಭಿಮತವನ್ನಿತ್ತಿದ್ದನೋ ಅದರಿಂದ ಇವನ ಸಮಾಧಾನವಾಗದೆ, ಮೂಲತಃ ತನಗೆ ಯಾವ ಪಾಪವನ್ನು ಅಂಟಿಸಲಾಯಿತೋ ಅದೇ ಇವನಿಗೆ ಸಹನವಾಗಲಿಲ್ಲ. ಅದರಿಂದ ಆತನು ನಕ್ಕು :—" ಧಣಿಯರ ಅಪ್ಪಣೆ ಪಡೆದೇ ತುಸ ಹೇಳುವೆನು. ಕಾಡು ಹಂದಿಗಳು ರೈತ ಜನರಿಗೆ ಉಪದ್ರವ ಕೊಡುತ್ತಿದ್ದರೂ ಅವು ಕಂದಮೂಲಗಳನ್ನೇ ತಿನ್ನುತ್ತವೆ; ಜೀವಂತ ಪ್ರಾಣಿಗಳನ್ನು ತಮ್ಮ ಹೊಟ್ಟೆ ತುಂಬಲಿಕ್ಕೆಂದು ಕೊಲ್ಲುತ್ತಿರುವದಿಲ್ಲ."

" ಹಾಗಾದರೆ ಮೀನುಗಳು ? "

" ಆದರೆ ಧಣೇರಿಗೆ ವಿದಿತವಿರುವದೇನಂದರೆ, ಮೀನುಗಳ ಜಾತಿಯು ಬಹು ದುಷ್ಟವೂ ಕೂಳಬಕ್ಕವೂ ಆಗಿರುತ್ತದೆ. ಅವು ತಮ್ಮ ಹಸಿವೆಯನ್ನು ತಮಗಿಂತ ಸಣ್ಣ ಮೀನುಗಳನ್ನು ತಿಂದು, ಅಂದರೆ ಬೇರೆಯವರ ಪ್ರಾಣಗಳನ್ನು ಹೀರಿ ನೀಗಿಕೊಳ್ಳುತ್ತವೆ. ಅಂಥ ದುಷ್ಟ ಪ್ರಾಣಿಗಳನ್ನು ನಾವು ಮೀನುಗಾರರು ಕೊಲ್ಲುವದೇನೂ ಪಾಪವಾಗುವದೇ ಇಲ್ಲ ಸರಕಾರ ! "

ಈ ಯುಕ್ತಿವಾದವನ್ನು ಕೇಳಿ ಅಲ್ಲಿ ಕಲೆತಿದ್ದವರೆಲ್ಲರೂ ನಕ್ಕರು. ಕಾನ್ಹೋಜಿ: " ಭಾಗೂಜೀ, ನೀವಾಡಿದ್ದೇ ನಿಜವು. ತಾನು ಪಾಪ ಮಾಡಿ ಬೇರೆಯವರಿಗೆ ಹೆಸ

ರಿಡುವ ರೀತಿಯೇ ಎಲ್ಲೆಲ್ಲೂ ಕಾಣುತ್ತದೆ. ಸಮುದ್ರದೊಳಗಿನ ದೊಡ್ಡ ಮೀನುಗಳು ಹೇಗೋ ಅದರಂತೆ ಸಮುದ್ರದ ಮೇಲಿನ ಆ ಕಳ್ಳ ಫಿರಂಗಿಗಳು! ಅವರು ತಾವು ಸ್ವತಃ ಕಳವು-ಸುಲಿಗೆ ನಡೆಸುವರು; ಹಾಗು ನಮ್ಮಂತಹರಿಗೆ ಮಾತ್ರ ಸಮುದ್ರಗಳ್ಳರೆಂದು ದೋಷ ಕೊಡುತ್ತಿರುತ್ತಾರೆ."

ಹೀಗೆ ಅಲ್ಲಿ ಸಂಭಾಷಣೆ ನಡೆದಿರುವಾಗಲೇ ವಿಜಯದುರ್ಗದ ಕೋಟೆಯ ಕಡೆಯಿಂದ ಒಬ್ಬ ಶಿಪಾಯಿಯು ಏನೋ ವಾರ್ತೆ ತಂದನು. ಆ ವಾರ್ತೆಯೇನಂದರೆ, ಇಂಗ್ಲಿಷರ ಕಡೆಯ ಹಡಗುಪಡೆಯ ವಕೀಲನೊಬ್ಬನು ಇಂಗ್ಲಿಷ ಸರಕಾರೀ ಅಧಿಕಾರಿಯದೊಂದು ಕಾಗದ ತಕ್ಕೊಂಡು ಬಂದಿದ್ದು, ಆತನು ಸರಖೇಲ ಸಾಹೇಬರನ್ನು ತೀವ್ರ ಭೆಟ್ಟಿಯಾಗಬೇಕೆಂದು ಅನ್ನುತ್ತಿರುವನು.

ಆ ಸುದ್ದಿಯನ್ನು ಕೇಳಿ ಕಾನ್ಹೋಜಿಯು ತಿರಸ್ಕಾರದಿಂದ:—"ವಕೀಲನು ಬಂದಿದ್ದರೆ ಕುಳ್ಳಿರಲಾತನು ಕೋಟೆಯ ಬಾಗಿಲಲ್ಲಿ! ನನಗೆ ಅನುಕೂಲವಾದಾಗ ನಾನತ್ತ ಬಂದೇನು. ನಾನೇನು ಇಂಗ್ಲಿಷರ ಗುಲಾಮನೋ, ನನ್ನನ್ನಾತನು ಇಷ್ಟು ಅವಸರದಿಂದ ಕರೆಯಲಿಕ್ಕೆ? ಈ ಕೆಂಪು ಮುಸುಡೆಯ ಫಿರಂಗಿಗಳು ಬಲು ತಾಳಗೆಟ್ಟಿರುತ್ತಾರೆ. ಅರಿಷಿಣ ಬಣ್ಣದ ಫಿರಂಗಿಗಳನ್ನು ತಲೆಯೆತ್ತದ ಹಾಗೆ ಮಾಡಿದ ಬಳಿಕ ತಾವೇ ಈ ಕೊಂಕಣ ಸಮುದ್ರದ ರಾಜರಾಗಿರುತ್ತೇವೆಂದು ಇವರಿಗನಿಸಿದೆ, ಆದರೆ ಈ ಸರಖೇಲನನ್ನು ನೀವಿನ್ನೂ ಚೆನ್ನಾಗಿ ಅರಿಯಿರೆಂಬೆಂದು ಇವರಿಗೆ ತಿಳಿಸಬೇಕಾಗಿದೆ. ಈ ಸಮುದ್ರದ ನಿಜವಾದ ರಾಜನು ಈ ಮರಾಟಿಗನು-ಈ ನಾವಿಕ ಸರದಾರನು-ಇರುತ್ತಾನೆ. ನಾನು ನಿಮ್ಮ ಜಂಭವನ್ನೆಂದೂ ನಡೆಯಗೊಡಲಾರೆನು."

ಬಳಿಕ ಸುದ್ದೀ ತಂದಿದ್ದವನ ಕಡೆಗೆ ಹೊರಳಿ ಕಾನ್ಹೋಜಿಯು:—"ಏನೋ, ಆ ಫಿರಂಗೀ ವಕೀಲನು ವ್ಯಾಪಾರೀ ಹಡಗದೊಳಗಿಂದ ಬಂದನೋ ಅಥವಾ ಯುದ್ಧ ನೌಕೆಯಿಂದಿಳಿದನೋ? ಆತನ ಪ್ಯಾಸಪೋರ್ಟನ್ನಾರಾದರೂ ಪರೀಕ್ಷಿಸಿದ್ದಾರೋ ಇಲ್ಲವೋ? ಆತ ಪ್ಯಾಸಪೋರ್ಟಿಲ್ಲದೆ ಬಂದಿದ್ದರೆ ನಾನವನ ಹಡಗಕ್ಕೆ ಹಡಗವನ್ನೇ ಜಪ್ತ ಮಾಡುವೆನು; ಮತ್ತು ಅವರ ಮುಂದಾಳಾದ ಆ ಟೊಪ್ಪಿಗೆಯವನು ಸ್ವತಃ ವಕೀಲನೆಂದು ದೊಡ್ಡ ಹೆಸರು ಪಡೆದಿದ್ದರೂ ಕೂಡ ಅವನು ನನ್ನ ಕೈಯಿಂದ ತಪ್ಪಿಸಿಕೊಳ್ಳಲಾರನೆಂದು ಹೇಳು. ಇಂಥ ಬೊಬ್ಬಾಟದ ಕಳ್ಳರಿಗೆ ವಿಜಯದುರ್ಗದೊಳಗಿನ ನೆಲಮನೆಯು ಸಾಕಾಗಿ ಉಳಿಯುವಂತಿದೆ. ಸುರತ-ಮುಂಬಯಿಗಳ ಗವರ್ನರರು ಉಳಿದಾರು ತಮ್ಮ ತಮ್ಮ ವಖಾರಗಳಲ್ಲಿ! ಮಗನೇ, ಇಲ್ಲಿ ನಿನಗೂ ಈ ನಾವಿಕ ಸರದಾರನಿಗೂ ಗಂಟಿದೆ ಎಂದು ತಿಳಿಸು."

ಆದರೆ ಈ ಪ್ರಶ್ನೆಗೆ ಆ ಬಡ ಸುದ್ದಿಗಾರನೇನು ಉತ್ತರ ಕೊಡುವನು?"

ಕಾನ್ಹೋಜಿಯು ಅಲ್ಲಿ ಕುಳಿತಾಗ ನಾಲ್ಕು ಪಾತ್ರೆ ನೀರಾ ಸಹಜವಾಗಿ ಕುಡಿದ್ದನು. ಆದರಿಂದ ಅವನಿಗೆ ಸಿಕ್ಕಿ ವಿರಲಿದ್ದರೂ, ಅಂತರಂಗದಲ್ಲಿ ವಿಚಿತ್ರವಾದ ಉನ್ಮಾದ ವೇರಹತ್ತಿತ್ತು. ಇವನು ಕಾನಿನೊಳಗಿಂದ ಹೊಡೆದು ತಂದ ವರಾಹಗಳನ್ನು ಬೇಟೆಗಾರರಿಗೆ ಇನಾಮೆಂದು ಕೊಟ್ಟ:—"ಗೆಳಯರೇ, ಇನ್ನು ನೀವು ನಿಮ್ಮ ಮನೆಗಳಿಗೆ ತೆರಳಿರಿ. ತಕ್ಕ ಸ್ಥಳವನ್ನು ಹುಡುಕಿ ಈ ಮೃಗಗಳನ್ನು ಕೊಯ್ದು ಒಳ್ಳೇ ಮೇಜವಾನಿ ಮಾಡಿರಿ. ನೀವು ನಾಳೆಯ ದಿವಸ ಸರಕಾರೀ ಕೆಲಸಕ್ಕೆ ಬರುವ ಆವಶ್ಯಕತೆ ಇಲ್ಲ. ಮನೆಯಲ್ಲೇ ಉಳಿದು ಇಂದಿನ ಬೇಟೆಯ ಶ್ರಮವನ್ನು ಪರಿಹರಿಸಿಕೊಳ್ಳಿರಿ. ಮತ್ತೆ ಬೇಟೆಗೆ ಹೊರಡುವ ಮುಂಚೆ ನಿಮಗೆ ಹಾಗೆ ಸೂಚನೆ ಕೊಡಲಾಗುವದು. ದುರ್ಗಕ್ಕೆ ಬಂದಿರುವ ಫಿರಂಗೀ ವಕೀಲನೊಡನೆ ವಾದಿಸ್ಯಾಡುವದರಲ್ಲೇ ನಾಳಿನ ನಮ್ಮ ಇಡೀ ದಿವಸ ಖರ್ಚಾಗುವಂತೆ ತೋರುತ್ತದೆ!"

ಹೀಗೆಂದು ಹೇಳಿ ಕಾನ್ಹೋಜಿಯು ಜಾಜಮಿನ ಮೇಲಿಂದ ಎದ್ದನು. ಈ ಸಂಧಿಯನ್ನು ಸಾಧಿಸಿ ಸಮೀಪದಲ್ಲೇ ನಿಂತುಕೊಂಡಿದ್ದ ಧಾಕಲ್ಯಾ ಮತ್ತು ಕುಣಕ್ಯಾ ಇವರು ಅವರ ಪಾದಗಳನ್ನು ಮುಟ್ಟಿ ಪೊಡಮೊಟ್ಟರು. ಆ ಇಬ್ಬರೂ ತರುಣರು ಅಲ್ಲಿಯ ಹಿರಿಯರನ್ನು ಹಿಂದೆ ಹಾಕಿ, ಅಕಸ್ಮಾತ್ತಾಗಿ ಮುಂದೆ ಬಂದುದನ್ನು ಕಂಡು, ಕಾನ್ಹೋಜಿಗೆ ಕೌತುಕವೆನಿಸಿತು. ಆಗ ಆತನು:—"ಈ ಹುಡುಗರಾರೋ? ಇವರೊಳ್ಳೇ ದಿಟ್ಟರಾಗಿ ತೋರುತ್ತಾರಲ್ಲ. ನನ್ನ ಪಾದಗಳನ್ನು ಮುಟ್ಟಲಿಕ್ಕೆ ಇವರಿಗೆ ಭಯವೆನಿಸುವದಿಲ್ಲವೋ?"

ಭಾಗೂಜೀ ನಾಯಿಕನೆನ್ನುತ್ತಾನೆ:—"ಈತನು ನನ್ನ ಸಾಕು ಮಗ ಸರಕಾರ! ಇವನ ಹೆಸರು ಧಾಕಲ್ಯಾ. ಈತ ನಮ್ಮ ಮೀನುಗಾರಿಕೆಯಲ್ಲಿ ಒಳ್ಳೆಯ ನಿಷ್ಣಾತನಾಗಿದ್ದಾನೆ. ಬಲೆ ಚೆಲ್ಲುವ, ಜಗ್ಗುವ, ಹೋಡಿ-ಪಡಾವಗಳನ್ನು ನಡೆಸುವ ಕೆಲಸಗಳಲ್ಲಿ ಇವನು ನಮ್ಮಂಥ ಹಿರೀಮಣಿಗಳನ್ನು ಸಹ ಹಿಂದೂಡಹತ್ತಿದ್ದಾನೆ. ಇವನನ್ನು ಮೀನು ಹಿಡಿಯಲಿಕ್ಕೆ ಕಳಿಸಿದರೆ ಹೋಡಿ-ಪಡಾವಗಳೆಲ್ಲ ಮೀನುಗಳಿಂದ ತುಂಬಿತುಂಬಿ ಬರುತ್ತವೆ. ಈತನ ಕೈಗುಣ ಚೆನ್ನಾಗಿದೆ. ತಮ್ಮ ಆಶೀರ್ವಾದದಿಂದ ಮುಂದೆ ಮೀನುಗಾರರ ನಾಯಿಕನಾದಾನು ಸರಕಾರ!"

"ಆ ಎರಡನೇ ಪೋರನಾರು? ಆತನಂತೂ ಮೀನುಗಾರನಾಗಿ ತೋರುವದಿಲ್ಲ. ಅವನು ಕೊಂಕಣದವನೋ ಅಥವಾ ದೇಶದ ಮೇಲಿಂದ ಕೊಂಕಣದ ಮೋಜು ನೋಡಲೆಂದು ಬಂದವನೋ?"

"ಹೇಗೆಂದರೂ ಆ ಹುಡುಗ ಬಲು ಚುರುಕನಿದ್ದಾನೆ ಸರಕಾರ! ಈ ಮೊದಲು ದೇಶದ ಮೇಲಿಂದ ಕೊಂಕಣಕ್ಕೆ ಬಂದ ತರುಣ ಹುಡುಗರು ಬರಿಯ ಇಲ್ಲಿಯ

ಮೋಜು ನೋಡಿ ತಮ್ಮ ಹುಮ್ಮಸವನ್ನು ತೀರಿಸಿಕೊಂಡಿಲ್ಲ ಸರಕಾರ! ಅವರು ಹಡಗುಪಡೆಯಲ್ಲಿ ನಮ್ಮ ಮೀನುಗಾರ, ದಾಲದಿ, ಭಂಡಾರಿ ಜನರನ್ನು ಕೂಡ ಮೀರಿದರು; ಮತ್ತು ಅವರ ಮುಂದಿನ ಪೀಳಿಗೆಯಂತೂ ಸರಖೇಲಿಯನ್ನು ಸ್ಥಾಪಿಸಿತು; ಸಮುದ್ರದ ಮೇಲಿನ ರಾಜ್ಯವನ್ನೇ ಸಂಪಾದಿಸಿದರೆಂಬದು ಧಣಿಯರಿಗೆ ಗೊತ್ತಿದ್ದ ಸಂಗತಿಯೇ ಆಗಿದೆ."

ಭಾಗೂಜೀ ನಾಯಿಕನು ತನ್ನ ತಂದೆಯ ಹಾಗು ವ್ಯಕ್ತಿಶಃ ತನ್ನ ಸ್ತುತಿಯನ್ನು ಸಮಯವರಿತು ಬಹು ಸೂಕ್ಷ್ಮವಾಗಿ ಮಾಡಿದನೆಂಬದು ಕಾನ್ಹೋಜಿಗೆ ಹೊಳೆಯದಿದ್ದಿತೇ? ತನ್ನ ತಂದೆಯು ಮೊಟ್ಟಮೊದಲು ದೇಶದ ಮೇಲಿನ ಮರಾಟನಿರಲು, ಆತ ಕೊಂಕಣಕ್ಕೆ ಹೇಗೆ ಬಂದ, ದೇಶದ ಮೇಲೆಂದೂ ಸಿಗದ ಹಡಗುಪಡೆಯ ಶಿಕ್ಷಣವನ್ನು ಕೊಂಕಣಕ್ಕೆ ಬಂದ ಬಳಿಕ ಹೊಸದಾಗಿ ಹೇಗೆ ಸಂಪಾದಿಸಿದ, ತಮ್ಮ ಮರಾಟರ ಶಿಪಾಯಿಗಳ ಸ್ಫೂರ್ತಿಯಿಂದ ಆತ ಯುದ್ಧ ಹಡಗುಗಳ ಉದ್ಯೋಗವನ್ನು ಹೇಗೆ ಪ್ರಾರಂಭಿಸಿದ ಹಾಗು ಅವನು ಆ ಶಿಕ್ಷಣದಲ್ಲಿ ನಿಷ್ಣಾತನಾಗಿ ತಾನು ಮರಾಟರ ಸರಕಾರೀ ಹಡಗುಪಡೆಯ ಸರದಾರಿಕೆಯನ್ನು ಹೇಗೆ ಸಂಪಾದಿಸಿದ ಇವೆಲ್ಲ ಸಂಗತಿಗಳು ಒಂದು ಕ್ಷಣದಲ್ಲೇ ಕಾನ್ಹೋಜಿಯ ಮನದಲ್ಲಿ ನೆನಪಾಗಿ ಹೋದವು. ಭಾಗೂಜಿಯ ಆ ದರ್ಬಾರೀ ಆದರೆ ಯಥಾರ್ಥ ಸ್ತುತಿಯಿಂದ ಕಾನ್ಹೋಜಿಗೆ ತನ್ನ ಕರ್ತೃತ್ವದ ಬಗ್ಗೆ ಗರ್ವವೆನಿಸಿದ್ದರೆ ಅದು ಯಥಾರ್ಥವೇ ಆಗಿತ್ತು.

ಕೊಂಕಣದೊಳಗಿನ ಕೋಳೀ ಭಂಡಾರೀ ಜನರಲ್ಲಿ ನಾವಿಕ ಕಸಬು ಸಂಪೂರ್ಣವಾಗಿದ್ದರೂ ಅವರುಗಳಲ್ಲಿ ಕಾದುವ ಲಷ್ಕರೀ ವೃತ್ತಿಯು ಜಾಗ್ರತವಾಗಿರಲಿಲ್ಲ. ಅದು ಮರಾಟರ ಮುಂದಾಳುತ್ವದಿಂದ ಉದಯಿಸಿತು; ಹಾಗು ಬೇಗನೆ ಮುಂದುವರಿಯಿತು. ಅದರ ಬಲದಿಂದಲೇ ಶಿವಾಜಿ ಮಹಾಜರಿಗೆ ಕೊಂಕಣದಲ್ಲಿ ಮರಾಟರ ಹಡಗುಪಡೆಯ ನೆಲಗಟ್ಟು ಹಾಕುವ ಸ್ಫೂರ್ತಿಯುಂಟಾಯಿತು. ಅದೆಲ್ಲ ಇತಿಹಾಸವು ಕಾನ್ಹೋಜಿಯ ಕಣ್ಣೆದುರಿಗೇ ನಡೆದಿತ್ತು. ಆದರಿಂದ ದೇಶದ ಮೇಲಿನ ಮರಾಟರೂ ಕೊಂಕಣದೊಳಗಿನ ಕೋಳೀ-ಭಂಡಾರೀ ಜನರೂ ಇವರುಗಳ ಬಗ್ಗೆ ಅವನಿಗೆ ಸಮನಾಗಿ ಅಭಿಮಾನವೆನಿಸುತ್ತಿತ್ತು.

ಆ ಸ್ಮರಣದ ಪರಿಣಾಮವಾಯಿತೇನಂದರೆ, ಕುಣಕ್ಯಾ ದೇಶದಿಂದ ಬಂದಿರುವ ಹುಡುಗನಿರಬಹುದೆಂಬ ಕಲ್ಪನೆಯಿಂದ ಕಾನ್ಹೋಜಿಯ ಲಕ್ಷ್ಯವು ಆತನ ಕಡೆಗೇ ಹೆಚ್ಚಾಗಿ ವೇಧಿಸಿತು. ಆದರಿಂದ ಆತನು :—" ಭಾಗೂಜೀ ನಾಯಿಕ, ಕೊಂಕಣವೇನು, ದೇಶವೇನು? ಇವೆರಡೂ ಪ್ರಾಂತಗಳು ಪುಣ್ಯಭೂಮಿಯೆನಿಸಿಕೊಳ್ಳಲಿಕ್ಕೆ ಒಂದೇ ಯೋಗ್ಯತೆಯವಾಗಿವೆ. ಯಾಕಂದರೆ, ಇವೆರಡರ ಮೇಲೂ ಶ್ರೀ ಛತ್ರಪತಿ

ಶಿವಾಜಿ ಮಹಾರಾಜರ ಪಾದಧೂಳಿಯು ಸವನಾಗಿಯೇ ಬಿದ್ದಿರುವದಲ್ಲವೆ? ಅದಿರಲಿ. ಈ ಎರಡನೇ ಪೋರನೇನು ಮಾಡಬೇಕೆಂದಿರುವನು?"

"ಧಣಿಯರೇ, ಇವನಿಗೆ ಮೀನುಗಾರಿಕೆಯು ಉದ್ಯೋಗವು ಬರುವಂತಿದ್ದರೂ ಸರಕಾರೀ ನಾವಿಕದಲದ ನೌಕರಿಯ ಕಡೆಗೆ ಈತನ ಮನವೆಳೆಯುತ್ತಿರುವಂತೆ ನನ ಗನಿಸುತ್ತದೆ. ಧಣಿಯರ ಅಪ್ಪಣೆ ಹೇಗೆಯೋ ಹಾಗೆ!"

ಕಾನ್ಹೋಜಿ:—"ನಾಯಿಕ, ಹರೆಯದ ಯೋಗ್ಯ ಹುಡುಗರು ದಂಡಾಳುಗಳಾ ಗುವ ಇಚ್ಛೆ ಧರಿಸಿದ್ದನ್ನು ಕಂಡ ಕೂಡಲೆ ಅವರಿಗಾಗಿ ನನ್ನ ಜೀವವು ಉಕ್ಕೇರಹತ್ತು ತ್ತದೆ ನೋಡಿರಿ. ನನ್ನ ಹಡಗುಪಡೆಯು ಇನ್ನೂ ಹೆಸರುವಾಸಿಯಾಗಬೇಕಾದರೆ ಅದ ರಲ್ಲಿ ಶೂರ ಹುಮ್ಮಸಿನ ತರುಣ ಜನರನ್ನು ಎಷ್ಟು ಭರತಿ ಮಾಡಿದರೂ ಕಡಿಮೆಯೇ ಆದೀತಲ್ಲವೆ? ಒಬ್ಬನೇ ಏನು, ಇವನಂತಹ ನೂರು ಮಂದಿ ತರುಣರು ದೊರೆತರೂ ಅವರಿಗೆ ಕೆಲಸ ಕೊಡಲು ನಾನು ಸಿದ್ಧನಿದ್ದೇನೆ. ಈ ಪೋರನನ್ನು ದುರ್ಗಕ್ಕೆ ನನ್ನ ತೈನಾತಿಗಾಗಿ ಕಳಿಸಿಕೊಡಿರಿ. ಇವನೆಂತಹ ಹಡಗುಪಡೆಯ ನೌಕರಿ ಮಾಡುವನೋ, ಮತ್ತೇನು ಮಾಡುವನೋ ನೋಡುವೆನು."

( ೬ )

ಕಡೆಗೊಂದು ದಿನ ಕುಣಕ್ಯಾ ಶಾಸ್ತ್ರಿಗಳ ಮುಂದೆ ಬಂದು ನಿಂತ; ಮತ್ತು ಮೈ ಯೊಳಗಿನ ಆಲಸ್ಯತನವನ್ನು ಕೊಡವಿಕೊಳ್ಳುವಂತೆ ತನ್ನ ಮೈಯೊಡ್ಡು ಮುರಿಯುತ್ತ: "ಗುರುಗಳೇ, ನನಗೇನಾದರೂ ಕೆಲಸ ಹೇಳಿರೀ? ಕೆಲಸ-ಕಾರ್ಯಗಳಿಲ್ಲದೆ ಬೇಸತ್ತಿರು ವೆನು. ಮನಸ್ಸು ರಂಜಿಸುವಂತಹ ಯಾವುದೊಂದು ಕೆಲಸ ಹೇಳದಿದ್ದರೆ ಮತ್ತೆ ನರ್ಮದಾ ನದಿಯ ದಂಡೆಯೊಳಗಿನ ಮಠದ ದಾರೀ ಹಿಡಿದೇನು. ಯಾತ್ರೆ ಮಾಡು ವದರಿಂದ ಸ್ವಾರ್ಥ-ಪರಾರ್ಥಗಳೆರಡೂ ಚೆನ್ನಾಗಿ ಸಾಧಿಸುತ್ತವೆ."

ಶಾಸ್ತ್ರಿಗಳು ಕುಣಕ್ಯಾನ ಮುಖಮುದ್ರೆಯ ಕಡೆಗೊಮ್ಮೆ ನಿರಕಿಸಿ ನೋಡಿದರು; ಮತ್ತು ನಗುತ್ತ:—"ಹೀಗೋ! ನಿನಗೆ ಮನರಂಜನೆಯಾಗುವಂತಹ ಕೆಲಸ ಬೇಕೇ ನು? ಕೆಳಗೆ ಕೂಡ್ರು ನೋಡೋಣ!" ಎಂದೆನಲು, ಕುಣಕ್ಯಾ ಕೆಳಗೆ ಕುಳಿತನು. ಬಳಿಕ ಶಾಸ್ತ್ರಿಗಳು ಬಾಯಲ್ಲಿ ಎಲೆ-ಅಡಿಕೆ-ತಂಬಾಕಗಳನ್ನು ಹಾಕಿಕೊಂಡರು. ಕಣ್ಣು ಗಳ ಮೇಲೆ ಚಾಳೀಸವನ್ನಿಟ್ಟರು. ಆ ಪೋರನ ಬಲ ಅಂಗೈಯನ್ನು ತಮ್ಮ ಎಡ ಗೈಯಿಂದ ಹಿಡಿದು, ತಮ್ಮ ಬಲಗೈಯಿಂದ ಅದನ್ನು ನೆಟ್ಟಗೆ ಮಾಡಿಕೊಂಡು ನೋಡ ತೊಡಗಿದರು.

ಅದನ್ನು ಕಂಡು, ಕುಣಕ್ಯಾ ನಕ್ಕು:—"ಗುರುಗಳೇ, ಪ್ರತಿನಿತ್ಯ ಮತ್ತೆ ಮತ್ತೆ ಕೈಯನ್ನೇನು ನೋಡುವಿರಿ? ಅವುಗಳ ಮೇಲೆ ದಿನಾಲು ಹೊಸ ಹೊಸ ಗೆರೆಗಳೇ ನಾದರೂ ಏಳುತ್ತವೆಯೋ ಏನು?"

"ಎಲೇ ಹುಡುಗಾ, ಅವೇ ಗೆರೆಗಳು; ಆದರೆ ನಿನ್ನ ಪ್ರಶ್ನೆಯು ಹೇಗೆ ಹೊಸದೋ, ಹಾಗೆ ಹಳೇ ಗೆರೆಗಳ ಪರೀಕ್ಷಣವನ್ನೂ ನಾನು ಹೊಸ ದೃಷ್ಟಿಯಿಂದಲೇ ಮಾಡಬೇಕಾಗುತ್ತದೆ."

ಕೆಲ ಸ್ವಲ್ಪ ಹೊತ್ತು ಆದರೆ ತೀರ ಏಕಾಗ್ರ ದೃಷ್ಟಿಯಿಂದ ಅವನ ಕೈಯ ಗೆರೆಗಳನ್ನು ನೋಡಿದ ಮೇಲೆ ಶಾಸ್ತ್ರಿಗಳು ಒಮ್ಮೆಲೆ ಆಕಲ್ಪಿತ ಪ್ರಕಾಶ ಕಂಡತೆ ಘಟ್ಟಿಯಾಗಿ ಹೇಳುತ್ತಾರೆ:—"ಪೋರಾ, ನಡೆ, ನಿನ್ನ ಪರೀಕ್ಷೆ ಮುಗಿಯಿತು. ನಿನ್ನ ಭವಿಷ್ಯವು ಕಾಣಿಸಿತು. ನೀನು ಸರಖೇಲರ ನೌಕರಿಯಲ್ಲಿ ಸೇರಿ ಭಾಗ್ಯ ಪಡೆಯುವೆ. ಆದರೂ ........" ಹೀಗೆ ನುಡಿದು, ಅವರು ಮುಂದಿನ ಶಬ್ದಗಳನ್ನುಚ್ಚರಿಸದೆ, ದೀರ್ಘವಾಗಿ ಉಸಿರ್ಗರೆದರು.

ಕುಣಕ್ಯಾ:—"ಮೊದಲು ನೌಕರಿಗೆ ಹತ್ತಬೇಕು; ಹಾಗು ನಂತರ ಭಾಗ್ಯ ಪಡೆಯಬೇಕು. ಅದೆಲ್ಲ ದೂರಿನ ಮಾತೇ."

"ಆದರ ಕೋನೆಗೆ...." ಎಂಬ ಶಬ್ದಗಳನ್ನು ಮಾತ್ರ ಅವನು ಲೆಕ್ಕಿಸಲೇ ಇಲ್ಲ.

ಮತ್ತೆ ಕುಣಕ್ಯಾ:—"ಆದರೆ ಸ್ವಂತ ನನ್ನನ್ನು ಅದಾರು ಮಾತಾಡಿಸುವರು? ಸರಖೇಲರು ನಿಮ್ಮ ಮಾತನ್ನು ಹೂವಿನಂತೆ ಮನ್ನಿಸುವರು. ನೀವು ಅದನ್ನಷ್ಟು ನನಗಾಗಿ ಖರ್ಚು ಮಾಡುವಿರಾ?"

ಕುಣಕ್ಯಾನಿಗೆ ಉಪಕಾರ ಮಾಡುವದಕ್ಕಿಂತ ಸ್ವಂತದ ಭವಿಷ್ಯವನ್ನು ದಿಟಗೊಳಿಸಲೋಸುಗ ಶಾಸ್ತ್ರಿಗಳು ಉದ್ಯೋಗ ಮಾಡಬೇಕಾಯಿತು. ಅವರು:— "ಹುಡುಗಾ, ನಿನ್ನನ್ನಿಂದು ಮಧ್ಯಾಹ್ನ ಸರಖೇಲರ ಭೇಟಿಗೊಯ್ಯುತ್ತೇನೆ ನಡೆ. ನಿನ್ನ ಕೈ ಮೇಲಿನ ಗೆರೆಗಳು ನನಗೆ ಹಾಗೆ ಹೇಳುತ್ತವೆಯೋ ಎಂಬಂತೆ ನನಗೆ ಭಾಸವಾಗುತ್ತಿರುವದರಿಂದ ಇಂದಿನ ವೇಳೆಯ ಗುಣವೇ ಬೇರೆ ಇರುವಂತಿದೆ.

ಮಧ್ಯಾಹ್ನ ಮೂರು ಗಂಟೆಗೆ ಶಾಸ್ತ್ರಿಗಳು ತಮ್ಮ ಉಡಿಗೆ-ತೊಡಿಗೆಗಳನ್ನು ಸರಿಪಡಿಸಿಕೊಂಡರು. ಹೆಗಲ ಮೇಲೆ ಶಾಲುಜೋಡಿಯನ್ನು ಚೆಲ್ಲಿಕೊಂಡರು. ಕೈಯಲ್ಲಿ ಕೋಲು ಹಿಡಿದರು; ಹಾಗು ಕುಣಕ್ಯಾನೊಡನೆ ಕೋಟೆಗೆ ಹೊರಟರು. ಮಧ್ಯಾಹ್ನದ ಕಿರಿನಿದ್ದೆಯನ್ನು ಮುಗಿಸಿ, ವೀಳ್ಯ ತಿಂದು, ತಲೆಗೆ ಪಟ್ಟೆಕಡ್ಡಿಯ ಮುಂಡಾಸವನ್ನು ಸುತ್ತಿಕೊಂಡು ಸರಖೇಲರ ಸವಾರಿಯು ಸದರಿನ ಮೇಲೆ ಬಂದು ಕುಳಿತಿತ್ತು. ಕಾರಕೂನನು ಪಕ್ಕದಲ್ಲಿ ಕುಳಿತು, ಕೈಯಲ್ಲಿ ಕಾಗದ-ಲೆಕ್ಕಣಿಗಳನ್ನು ಹಿಡಿದಿದ್ದನು. ಕಾವಲುಗಾರನು ಟೊಂಕಕ್ಕೆ ಖಡ್ಗವನ್ನು ಕಟ್ಟಿಕೊಂಡು ಅವರ ಹಿಂದುಗಡೆಯಲ್ಲಿ ಪಹರೆಗೆ ಸಜ್ಜಾಗಿದ್ದನು.

ಶಾಸ್ತ್ರಿಗಳನ್ನು ಕಂಡ ಕೂಡಲೆ ಸರಖೇಲರು ತಮ್ಮ ಆಸನದಿಂದೆದ್ದು ನಿಂತು ಸತ್ಕರಿಸಿದರು; ಹಾಗು ತಮ್ಮ ಬಲಗಡೆಗಿದ್ದ ಒಂದು ಪುಟ್ಟ ಆಸನದ ಮೇಲೆ ಕೂಡ್ರಬೇಕೆಂದು ಬಿನ್ನಯಿಸಿಕೊಂಡರು. ಕುಣಕ್ಯಾ ಜೋಡಿಸಿದ ಕೈಗಳಿಂದ ಶಾಸ್ತ್ರಿಗಳ ಹಿಂಬದಿಯಲ್ಲಿ ನಿಂತುಕೊಂಡನು. ಬಳಿಕ ಅವರೀರ್ವರಲ್ಲಿ ಈ ಬಗೆಯಾಗಿ ಸಂಭಾಷಣ ನಡೆಯಿತು.

"ಇಂದು ಗುರುಗಳು ಈ ಶಿಷ್ಯನಿಗೆ ಅಕಲ್ಪಿತವಾಗಿ ಭೇಟಿ ಕೊಡುವ ಕೃಪೆ ಮಾಡಿದರು."

"ಧನಿಯರೇ, ಅಹುದು. ಇಂದೊಂದು ವಿಶೇಷ ಕೆಲಸ ಹೊರಟಿತೆಂದು ಧಣೇರಿಗೆ ತೊಂದರೆ ಕೊಡಲಿಕ್ಕೆ ಬಂದೆನು." ಹೀಗೆಂದು ನುಡಿದು, ಅವರು ಹಿಂದಿರುಗಿ ಕುಣಕ್ಯಾನ ಕಡೆಗೆ ನೋಡಿ:—"ಹುಡುಗಾ, ನೋಡುತ್ತೀಯೇನು? ಮುಂಪೆ ಬಂದು ಧಣೇರ ಕಾಲಿಗೆ ಬೀಳು."

ಆ ಸೂಚನೆಯನ್ನು ಕುಣಕ್ಯಾ ತತ್‌ಕ್ಷಣವೇ ಜಾರಿಗೆ ತಂದನು.

"ಆಂ! ಈ ತರುಣ ಹುಡುಗನಾರು? ಈ ಮೊದಲೆಂದಾದರೂ ನನ್ನ ಕಣ್ಣಿಗೆ ಬಿದ್ದಿದ್ದನೋ? ಇವನು ನನ್ನ ಕಾಲಿಗೇಕೆ ಎರಗುತ್ತಾನೆ?" ಸರಖೇಲರು ಆಶ್ಚರ್ಯದಿಂದ ಪ್ರಶ್ನಿಸಿದರು.

"ಧಣಿಯರೇ, ಹೇಳುವೆನು ಕೇಳಿಕೊಳ್ಳಿರಿ" ಹೀಗೆಂದು ಅಂದು, ತಮ್ಮ ಬೀಗ ಪಂಡಿತರಾಯನಿಗೆ ಕುಣಕ್ಯಾನ ಸಂಬಂಧವು ಹೇಗೆ ಉಂಟಾಯಿತು, ತದನಂತರ ಈತನು ಈಗ ತಮ್ಮಲ್ಲಿದ್ದು ಏನು ಮಾಡುತ್ತಾನೆ ಮುಂತಾದ ಸಂಗತಿಯನ್ನು ಹೇಳಿ, ಶಾಸ್ತ್ರಿಗಳು:—"ನಾನು ನನ್ನ ಜ್ಯೋತಿಷ-ಸಾಮುದ್ರಿಕ-ವಿದ್ಯೆಗಳ ಸ್ತುತಿ ಮಾಡಿಕೊಳ್ಳಬೇಕೆಂತಲ್ಲ; ಧಣಿಯರಿಗೆ ಅದರ ಅನುಭವವು ಈ ಮೊದಲೇ ಬಂದಿರಬಹುದಾಗಿದೆ."

"ಗುರುಗಳೇ, ಅಹುದು" ಸರಖೇಲರು ಕೈ ಮುಗಿದು, ಶಿರವನ್ನು ತುಸ ಬಾಗಿ, ಆದರಬುದ್ಧಿಯಿಂದ:—"ತಾವು ಹೇಳಿದ ಭವಿಷ್ಯಗಳೆಲ್ಲ ಬಹುತರವಾಗಿ ದಿಟವಾದವು; ಅಂತೆಯೇ ಯಾವುದೊಂದು ಮಹತ್ವದ ದೊಡ್ಡ ಕೆಲಸ ಪ್ರಾರಂಭಿಸುವಾಗ ತಾವು ತೆಗೆದು ಕೊಟ್ಟ ಮುಹೂರ್ತದಲ್ಲೇ ನಾನು ಪ್ರಾರಂಭಿಸುತ್ತಿರುತ್ತೇನೆ; ಮತ್ತು ನಾನಿದನ್ನೇನೂ ಮುಖಸ್ತುತಿ ಮಾಡುವದಿಲ್ಲ. ಅಂದ ಬಳಿಕ ಇಂದು ನನ್ನ ವಿಷಯದ ಇಂಥ ಯಾವದೊಂದು ಭವಿಷ್ಯವೇ ತಮ್ಮ ದಿವ್ಯದೃಷ್ಟಿಗೆ ಕಾಣಿಸುತ್ತದೇನು?"

"ಧಣಿಯರೇ, ತಮ್ಮ ವಿಷಯದ ಭವಿಷ್ಯವೆಂದೇನೂ ಅಲ್ಲ; ಆದರೆ ನಾನಿಂದು ಈ ಹುಡುಗನ ಕೈ ನೋಡಿದೆ. ಅದರಿಂದ ನನಗೆ ಕಂಡುಬಂದಿತೇನಂದರೆ, ಈತನಿಗೆ

ಜಲಸಂಚಾರ ಯೋಗವು ವಿಶೇಷವಾಗಿದೆ. ಇವನು ಪರಾಕ್ರಮಿಯಾದಾನು. ಇಂಥ ಇವನನ್ನು ಧಣಿಯರು ಕೈಕೆಳಗಿರಿಸಿಕೊಂಡರೆ, ಈತನು ಸ್ವಂತ ಹೆಸರುವಾಸಿಯಾಗು ವಂತೆ ಧಣಿಯರ ಕಾಮಗಾರಿಯನ್ನೂ ಮಾಡುವನು. ಅಂತೆಯೇ ಇವನನ್ನು ಧಣೇರ ಪಾದಗಳ ಮೇಲೆ ಹಾಕಲಿಕ್ಕೆಂದು ಇವನನ್ನು ಬೇಕಂತ ಇಲ್ಲಿಗೆ ಕರೆತಂದೆನು."

"ಇಷ್ಟೇ ಅಲ್ಲವೇ?" ಸರಖೇಲರು ನಕ್ಕು:—"ಈತನೊಬ್ಬನೇ ಏಕೆ, ನಿಮ್ಮ ಇಂಥ ಶಿಫಾರಸಿನ ಎಷ್ಟು ಮಂದಿ ತರುಣ ಹುಡುಗರಿರುವರೋ, ಅವರೆಲ್ಲರಿಗೂ ಕೆಲಸ ಕೊಡಲಿಕ್ಕೆ ನಾನು ಸಿದ್ಧನಿದ್ದೇನೆ. ಗುರುಗಳೇ, ಶ್ರೀ ಶಿವಾಜಿ ಮಹಾರಾಜರ ಕೃಪೆಯಿಂದಲೂ ತಮ್ಮೆಲ್ಲ ಹಿರಿಯರ ಆಶೀರ್ವಾದದಿಂದಲೂ ಹಡಗುಪಡೆಯನ್ನು ಸಜ್ಜುಗೊಳಿಸುವ ಎಷ್ಟು ದೊಡ್ಡ ಉದ್ಯೋಗವನ್ನಾರಂಭಿಸುವೆವೆಂಬದು ತಮಗೆ ಗೊತ್ತೇ ಇದೆ. ಅದರಲ್ಲಿ ತರಾಡಿ-ಹೋಡಿಗಳನ್ನು ಕಟ್ಟುವದನ್ನು ಮೊದಲು ಮಾಡಿ ಕೊಂಡು ಅವುಗಳನ್ನು ಕಾದಾಡಿಸುವ ವರೆಗಿನ ಅವರವರ ಬುದ್ಧಿಗನುಸಾರವಾಗಿ ಅವೆಷ್ಟೋ ಭಿನ್ನಭಿನ್ನ ಬಗೆಯ ಕೆಲಸಗಳು ಮುಂದೊಡ್ಡುತ್ತವೆ. ಮಾಲವಣ-ವೆಂಗುರ್ಲೆಗಳಿಂದ ಅಲೀಬಾಗದ ವರೆಗೆ ನಾನು ಇದಿಷ್ಟು ಹವ್ಯಾಸತೊಟ್ಟಿರುವದರಿಂದ ಇದನ್ನೆಲ್ಲ ನೀಗಿಸಲಿಕ್ಕೆ ಹೊಸ ಹುರುಪಿನ ಆದರೆ ಅದಕ್ಕಿಂತಲೂ ಹೊಸ ದೃಷ್ಟಿಯ ನೂರಾರು-ಸಾವಿರಾರು ಹೊಸ ತರುಣರು ದೊರೆತರೆ ನನಗೆ ಅವಶ್ಯವೇ ಇದೆ. ಒಂದೇ ಪೀಳಿಗೆಯಲ್ಲಿ ಪೂರೈಸತಕ್ಕ ಕೆಲಸವಿದಲ್ಲ. ಇಷ್ಟೇ ಅಲ್ಲ, ಒಂದು ಪೀಳಿಗೆಯು ಗಿಡ ನೆಟ್ಟ ಬಳಿಕ ಮೂರನೇ ಪೀಳಿಗೆಗೆ ಅದರ ಹಣ್ಣುಗಳು ತಿನ್ನಲು ದೊರೆಯುವಂಥ ಕೆಲಸವಿದು; ಮತ್ತು ಸದ್ಯದ ನನ್ನ ಚಿಂತೆಯೆಂದರೆ ಚಾಲಾಕ ಮತ್ತು ಎದೆಗಾರ ಪರಾಕ್ರಮಿ ಜನರು ಬೇಕಾದಂತಹ ಹಾಗು ಬೇಕಾದಷ್ಟು ಹೇಗೆ ದೊರೆತಾತೆಂಬದೇ ಆಗಿದೆ."

"ಅದರ ಯೋಚನೆಯೇ [illegible] ನಮ್ಮ ಧಣಿಯರು ಕೊಂಕಣ ಸಮುದ್ರದ ರಾಜ ರಾಗುವರೆಂಬ ಭವಿಷ್ಯವನ್ನು ನಾನೆಂದೋ ತಿಳಿಸಿದ್ದೇನೆ. ಅದರರ್ಥವೇ ಧಣಿಯ ರಿಗೆ ಸಾವಿಕ ಪಡೆಯೂ ದಂಡೂ ಕೊರತೆಯಾಗದೆಂದು"

"ಕೆಲಸಕ್ಕೆ ತಕ್ಕಂತೆ ಮನುಷ್ಯರು. ಕೊಂಕಣಪಟ್ಟಿಯೇನೋ ದೊಡ್ಡದು; ಆದರೆ ಇಲ್ಲಿ ಬಂದರಗಳು ಅತ್ಯಲ್ಪವಲ್ಲವೇ? ಕೊಂಕಣಪ್ರಾಂತದೊಳಗಿನ ಜನವಸ ತಿಯು ವಿಶೇಷವಲ್ಲದೆ, ಅವರು ಕಷ್ಟಾಳುಗಳೂ ಅಹುದೇನು?"

"ಗುರುಗಳೇ, ಅಹುದು. ದೇಶ ಮತ್ತು ಕೊಂಕಣ ಇವೆರಡು ಪ್ರದೇಶಗಳ ಬಗ್ಗೆ ನನಗೆ ಅಲ್ಪಸ್ವಲ್ಪ ಅನುಭವವಿರುತ್ತದೆ. ಅದರಿಂದ ಕೊಂಕಣದ ಮನುಷ್ಯನು ಹೆಚ್ಚು ಕಷ್ಟಾಳುವೆಂಬದರಲ್ಲಿ ಸಂದೇಹವಿಲ್ಲ. ಭೋಯಿಗಳೂ ಕೋಳೀ ಜನರೂ

ಪರಾಕ್ರಮಿಗಳು; ಭಂಡಾರಿಗಳು ಶೂರರು; ದಾಲದೀ ಜನಕು ವ್ಯಾಪಾರೀ ಬುದ್ಧಿ ಯುಳ್ಳವರು; ಆದರೆ ದೇಶದೊಳಗಿನ ಮರಾಟರು ಸ್ವರಾಜ್ಯದ ಯಾವ ಲವಲವಿಕೆಯನ್ನು ತೋರಿದರೋ ಅದು ಕೊಂಕಣದ ಜನರಲ್ಲಿಲ್ಲ. ಶಿವಾಜಿ ಮಹಾರಾಜರು ಕೊಂಕಣ ದಲ್ಲಿಳಿದು ತಮ್ಮ ಚೈತನ್ಯದ ಪರಿಚಯು ಮಾಡಿಕೊಡುವ ವರೆಗೆ ಇಲ್ಲಿಯ ಎಲ್ಲ ಜನರು ಮೊಗಲ, ವಿಜಾಪೂರ, ಹಬಶೀ ಮತ್ತು ಟೊಪ್ಪಿಗೆಯವರ ಅಮಲಿನಲ್ಲಿ ಸುಖವಾಗಿ ಇರುತ್ತಿದ್ದರು. ತರಾಡ-ಹೋಡಿಗಳಲ್ಲಿ ಕುಳಿತು ಸಾಗರದ ಕೃಪೆಯಿಂದ ಬಂದರ ಸೇರುವವನಿಗೆ ಹೆಚ್ಚು ಬಲವೋ? ಅಥವಾ ದಂಡೆಗೆ ಕಾಲೂರಿ ನಿಲ್ಲುವವನಿಗೆ, ಗುಡ್ಡ ಗಳ ಆಶ್ರಯದಿಂದ ಕಾದಾಡಬಲ್ಲವನಿಗೆ ಹೆಚ್ಚು ಬಲವೋ? ಆದರೆ ದೇಹದಲ್ಲಿ ಪರಾ ಕ್ರಮವಿದ್ದರೂ ಅದನ್ನು ಪ್ರಕಟಗೊಳಿಸಲಿಕ್ಕೆ ಒಳಗಿನಿಂದ ಹುರಪಿರಬೇಕಾಗುತ್ತದೆ. ಅದು ಈ ಕೊಂಕಣದ ಜನರಲ್ಲಿಲ್ಲ; ಅಂತೆಯೇ ಶಿವಾಜಿಮಹಾರಾಜರಿಗೆ ಹಡಗುಪಡೆ ಯನ್ನು ಸಿದ್ಧಪಡಿಸಬೇಕು-ಕಾದಾಡಬೇಕು ಎಂದೆನಿಸಹತ್ತಿದ ಬಳಿಕ-ಅವರಿಗೆ ದೇಶ ದೊಳಗಿನ ಮರಾಟರನ್ನೇ ಘಟ್ಟದಕೆಳಗಿಳಿಸಿ ತರಬೇಕಾಯಿತು. ನನ್ನ ಸ್ವಂತದ ವತನವಾಡಿಗಳೆಲ್ಲ ಘಟ್ಟದ ಮೇಲೆ ದೇಶದಲ್ಲೇ ಇರುವವೆಂಬದು ಗುರುಗಳಿಗೆ ಗೊತ್ತೇ ಇದೆ; ಆದರೆ ನನ್ನ ಮುಂದಿನ ಪೀಳಿಗೆಯ ತಾಯಿನಾಡು ಕೊಂಕಣವೇ ಆಗುವದು. ಅದಿರಲಿ. ಗುರುಗಳೇ, ಈ ಹುಡುಗನು ಯಾವ ಜಾತಿಯವನು?"

"ಅನಾಥ ಪೋರ. ಇವನ ತಂದೆ-ತಾಯಿ, ಆಪ್ತರಿಷ್ಟರಾರೂ ಇರುವದಿಲ್ಲ. ಈತನನ್ನು ಒಬ್ಬ ಬೈರಾಗಿಯು ಪಾಲಿಸಿದನು; ಆದರೆ ಇವನು ಸ್ವತಃ ಬೈರಾಗಿಯಾಗಿ ತನ್ನ ಜೀವಿತವನ್ನೆಲ್ಲ ತೀರ್ಥ-ಯಾತ್ರೆಗಳ ಸಂಚಾರದಲ್ಲಿ ಕಳೆಯಲಾಪನು. ಸಂಸಾರ ವಲ್ಲದಿದ್ದರೂ ಲೌಕಿಕದೊಳಗಿನ ಪರಾಕ್ರಮಗಳನ್ನೆಸಗುವನೆಂದು ನನ್ನ ಸಾಮುದ್ರಿಕ ಶಾಸ್ತ್ರವು ನನಗೆ ಬೋಧಿಸುತ್ತದೆ. ಧನಿಯರೇ, ಇವನ ಜಾತಿಯಾವದೇ ಇರಲಿ; ಕುಲವು ದೈವದಿಂದಲಾದರೂ ಪರಾಕ್ರಮವು ಸ್ವಂತದ್ದು ಎಂದೆನ್ನುವ ಮಾತು ನಿಜ ವಲ್ಲವೆ?"

"ಗುರುಗಳೇ, ಹೌದು. ವ್ಯಕ್ತಿಯ ಗುಣಗಳಿಗೆ ನಾನು ಮಹತ್ವಕೊಡತಕ್ಕ ವನೇ; ಆದರೂ ಅದಕ್ಕೆ ಕುಲದ ಗುಣಗಳ ಆಧಾರ ಲಭಿಸಿದರೆ ಹಾಲೊಳಗೆ ಸಕ್ಕರೆ ಬೆರಿಸಿದಂತಾಗುವದಿಲ್ಲವೆ?"

"ಆದರೂ ಒಳ್ಳೇ ಜಾತಿಯ ಗಿಡವಿದ್ದರೂ ಅದು ತಕ್ಕಭೂಮಿಯಲ್ಲಿ ಕೊಡ ಬಹುದಾದಷ್ಟು ಫಲ-ಪುಷ್ಪಗಳನ್ನು ಪಾಳುಭೂಮಿಯಲ್ಲೆಂತು ಕೊಡುವದು? ಈ ಪೋರನ ಬಗ್ಗೆಯೇ ನೋಡಿರಿ. ಯಾವ ಜಾತಿಯಲ್ಲಿ ಈತನು ಜನಿಸಿರುವನೋ ಅದ ನ್ನೇನೂ ಇನ್ನು ಬದಲಿಸಲು ಸಕ್ತನಾಗಲಾರನು; ಆದರೆ ಆ ಜಾತಿಯ ಗುಣಗಳು

ಫಲಪ್ರದಗಳಾಗಲಿಕ್ಕೆ ಕರ್ತೃತ್ವ ತೋರಿಸುವ ಇಂಬು ದೊರಕಬೇಕು. ದೈವಯೋಗ ದಿಂದ ಅವನು ಇತ್ತ ಬರದೆ ಸಾಯುವವರೆಗೆ ಬೈರಾಗಿಯೇ ಆಗಿ ತೀರ್ಥ-ಯಾತ್ರೆ ಮಾಡುತ್ತಿದ್ದರೆ ಪರಲೋಕದಲ್ಲಿ ಅವನಿಗೆ ಪುಣ್ಯದ ಯಾವ ಲಾಭವಾಗಲಿತ್ತೋ ಅದಾ ಗುತ್ತಿತ್ತು; ಆದರೆ ಲೌಕಿಕ ಅಭ್ಯುದಯದ ದೃಷ್ಟಿಯಿಂದ ಅವನ ಜೀವಿತವು ಪುಕ್ಕಟೆ ಯಾಗಿ ಗತಿಸುತ್ತಿರಲಿಲ್ಲವೇ? ಮಾನವನು ಇಬ್ಬಗೆಯ ಫಲಗಳ ಆಶೆಯನ್ನು ಧರಿಸ ಬೇಕು!"

"ಆದರೆ ಗುರುಗಳೇ, ಈತನ ವೇಷವಿನ್ನೂ ಬೈರಾಗಿಯದೇ ಇದೆ. ಈತನ ತಲೆತುಂಬ ಕೂದಲು ಬೆಳೆದಿವೆ. ವಯಸ್ಸು ಚಿಕ್ಕದೆಂದು ಅವುಗಳ ವರಟು ಜಡೆ ಗಳಾಗಿಲ್ಲವಷ್ಟೇ? ಮತ್ತು ಗಲ್ಲಗಳ ಮೇಲೂ ಗದ್ದದ ಮೇಲೂ ಇಂದು ಎಳೆಗೂದ ಲೆಂದು ಕಾಣುವವು; ಆದರೆ ಅವುಗಳನ್ನೇ ಬೆಳೆಯಗೊಟ್ಟರೆ ಗಡ್ಡ-ಮೀಸೆಗಳ ಕಾಡೇ ಆದೀತು. ಈತನ ಜೊತೆಯ ದೇಶೀ ಕೊಂಕಣೀ ಪೋರರಲ್ಲಿ ಈತನು ಒಡೆದುಕಾಣ ದಿರನು. ಆತನಿನ್ನು ಬೈರಾಗಿಯಾಗಿ ಯಾತ್ರೆಗಳನ್ನು ಮಾಡದೆ ನನ್ನ ಚಾಕರಿ ಮಾಡಹತ್ತಿದರೆ ಈತನು ಕೊಂಕಣದ ಪೋರರಂತೆ ತಲೆಗೂದನ್ನು ಕತ್ತರಿಸಿ ಕ್ಷೌರ ಮಾಡಿಸಿಕೊಳ್ಳಬೇಕು."

"ಹುಡುಗಬುದ್ಧಿ. ನಾನಿದನ್ನು ಇವನಿಗೆ ಮೊದಲೇ ತಿಳಿಸಿದ್ದೆನು; ಆದರೆ ಈತನ ಗುರುಭಕ್ತಿ ಬಹು ಜಾಜ್ವಲ್ಯ ಕಾಣುತ್ತದೆ. ಇವನು ಹೇಳುವನೇನಂದರೆ: 'ನನ್ನ ಗುರುವು ನನಗೆ ಮುಂದೆಂದಾದರೂ ಭೇಟಿಯಾಗುವನು. ಅವನು ನನ್ನನ್ನು ನೋಡಿದ ಕೂಡಲೆ ಗುರತಿಸಬೇಕೆಂದು ನಾನು ಈ ವೇಷವನ್ನಿಟ್ಟಿರುತ್ತೇನೆ. ಅವರು ಭೇಟಿ ಯಾದ ನಂತರ ನಾನೀ ವೇಷ ತೆಗೆದೊಗೆಯುವೆನು' ಮತ್ತು ಈತನ ಈ ವೇಷದಿಂದ ಈತನ ಜೊತೆಗಾರರು ಇವನನ್ನು ಬುವಾಜಿ ಎಂದೆನ್ನಹತ್ತಿದ್ದಾರೆ."

ಸರಖೇಲರು:—"ಈ ಪೋರನು ನಿಷ್ಠಾವಂತನಾಗಿ ಕಾಣುತ್ತಾನೆ. ಈ ನಿಷ್ಠೆ ಯನ್ನು ಇದು ತನ್ನ ಬೇರೆ ಮೆಚ್ಚಿನ ಕಾರ್ಯಗಳಲ್ಲಿ ಇಟ್ಟರೆ ಈತನು ಆ ಕೆಲಸ ಗಳನ್ನು ಪಾರುಗಾಣಿಸದಿರಲಾರನು. ಅದಿರಲಿ. ಗುರುಗಳೇ, ಈ ಹುಡುಗನನ್ನು ನನ್ನ ಕೈಕೆಳಗೆ ಕೊಟ್ಟುಬಿಡಿರಿ. ಇವನನ್ನಿಟ್ಟುಕೊಂಡು ಇವನು ಯಾವ ಕೆಲಸಕ್ಕೆ ಯೋಗ್ಯನೆಂಬದನ್ನು ನೋಡುತ್ತೇನೆ."

ತಮ್ಮ ಪ್ರಯತ್ನಕ್ಕೆ ಯಶದೊರೆಯಿತೆಂದು ಶಾಸ್ತ್ರಿಗಳಿಗೆ ಸಂತೋಷವಾಯಿತು. ಅವರು ಆಸನದಿಂದೆದ್ದು, ಸರಖೇಲರಿಗೆ ಮುಜುರೆ ಮಾಡಿ ಹಿಂದಿರುಗಿದ ಬಳಿಕ ಕುಣಕ್ಯಾನನ್ನು ಕುರಿತು:—"ಪೋರಾ, ನೀನು ಸುದೈವಿಯಾಗಿ ತೋರುತ್ತೀ. ದಣಿ ಯರು ನನ್ನ ಬಿನ್ನಹವನ್ನು ಮನ್ನಿಸಿದರು. ಇನ್ನು ನೀನು ಇಲ್ಲಿಯೇ ಇರು.

ಆದರೂ ನಡುನಡುವೆ ಮನೆಗೆ ಬಂದು ನನಗೂ ಆಕೆಗೂ ಭೆಟ್ಟಿ ಕೊಡುತ್ತಿರು. ನಿನ್ನ ಉತ್ಕರ್ಷವಾದುದನ್ನು ಕಂಡೆವೆಂದರೆ, ನಮ್ಮಿಬ್ಬರಿಗೂ ಆನಂದವಾದೀತು."

ಶಾಸ್ತ್ರಿಗಳಿಗೆ ತಲೆಬಾಗಿಲವರೆಗೂ ಕಳಿಸಿಬಂದು ಕುಣಕ್ಯಾ, ತಾನು ಈ ಮೊದಲು ನಿಂತಲ್ಲಿಯೇ ಕೈಜೋಡಿಸಿ ಸಿರಬಾಗಿ ನಿಂತುಕೊಂಡನು. ಆಗ ಸರಖೇಲರು ಅವನನ್ನು ಕುರಿತು:—"ಏನೋ ಪೋರಾ, ನಿನಗೆ ಸಮುದ್ರದ ಪರಿಚಯವಿದೆಯೇ?"

"ನನ್ನ ಬಾಲ್ಯಕಾಲದಿಂದಲೂ ನಾನು ಸಮುದ್ರವನ್ನು ಬಲ್ಲೆ" ಕುಣಕ್ಯಾ ಹೇಳಿದನು.

"ಅದೆಂತು?"

"ಅದು ಹೇಗೆಂದರೆ:—ಇತ್ತ ಕಡೆಯ ಕೊಂಕಣದಲ್ಲೇ ಯಾವುದೋ ಒಂದು ಊರ ಹತ್ತರ ಒಂದು ಬಹು ದೊಡ್ಡ ಗುಡಿಯು ಎತ್ತರದ ಮೇಲಿತ್ತು. ಅದಕ್ಕೆ ಹೊಂದಿಯೇ ಕೆಳಗಡೆಯಲ್ಲಿ ಸಮುದ್ರವಿತ್ತು. ಒಂದು ದಿನ ನಾನು ನನ್ನವ್ವನ ಕೂಡ ಸಮುದ್ರ ಸ್ನಾನಕ್ಕೆ ಗುಡಿಯ ಕೆಳಗೆ ಹೋದೆನು. ಅಂದು ಅಲ್ಲಿ ಸಮುದ್ರ ಸ್ನಾನಕ್ಕೆ ಬಹು ಗದ್ದಲ ಕೂಡಿತ್ತು. ನನ್ನ ತಾಯಿಯು ನನ್ನನ್ನು ಸಮುದ್ರ ದಂಡೆಯ ಉಸುಗಿನ - ಕೂಡ್ರಿಸಿ ಮೈ ತೊಳೆಯಲು ಹೋದಳು; ಹಾಗು ಆಗ ಹೋದವಳು ತಿರುಗಿ ಬರಲೇ ಇಲ್ಲ. ನಾನು ಅವಳನ್ನು ನಿರೀಕ್ಷಿಸಿ ಬೇಸತ್ತು ನಿದ್ದೆ ಹೋದೆನು. ನಿದ್ದೆಯಿಂದ ಎಚ್ಚತ್ತಾಗ ನಾನು ಒಬ್ಬ ಬೈರಾಗಿಯ ಹೆಗಲ ಮೇಲಿದ್ದೆನು! ನಾನು ನನ್ನ ಹಡೆದವ್ವನ ಸಲುವಾಗಿ ಹೆಚ್ಚಾಗಿ ಅತ್ತೆನು-ಕರೆದೆನು; ಆದರೆ ಪ್ರಯೋಜನವೇನೂ ಆಗಲಿಲ್ಲ. ಬಳಿಕ ಆ ಬೈರಾಗಿಯೇ ನನ್ನನ್ನು ಪಾಲನ-ಪೋಷಣ ಮಾಡಿದನು. ಅವನು ನನ್ನನ್ನು ಉತ್ತರಕ್ಕೆ ನರ್ಮದೆಯ ದಂಡೆಗೆ ಒಯ್ದಂತೆ ನೆನಪಿದೆ. ನಾನು ತುಸ ದೊಡ್ಡವನಾದ ಬಳಿಕ ಧನಿಯರೇ, ಆ ಬೈರಾಗಿಗಳೇ ನನ್ನ ತಂದೆ-ತಾಯಿಗಳಾದರು. ಅವರೊಡನೆ ಬದರಿ-ಕೇದಾರ-ಗಂಗೋತ್ರಿಗಳ ವರೆಗೆ ಯಾತ್ರೆ ಮಾಡಿದೆನು. ಆ ಮೇಲೆ ಸರಾಸರಿ ಹನ್ನೆರಡು ವರ್ಷಗಳ ನಂತರ ನನ್ನನ್ನು ಕರೆಕೊಂಡು ನನ್ನ ಗುರುವು ಕುಣಕೇಶ್ವರಕ್ಕೆ ಬಂದನು. ಅದು ನಾನು ಮೊದಲು ನೋಡಿದ್ದ ದೇವಮಂದಿರವೇ ಆಗಿತ್ತು. ಮುಂಚೆ ಕಂಡಂತೆಯೇ ಅಲ್ಲಿಯ ಸಮುದ್ರದ ನೋಟ, ಸಮುದ್ರ ಸ್ನಾನದ ಗದ್ದಲವು ಅದರಂತೆಯೇ! ಅದರಿಂದ ಧನಿಯರೆ, ಚಿಕ್ಕಂದಿನ ನನ್ನ ನೆನಪು ಮತ್ತೆ ಜಾಗ್ರತವಾದಂತಾಯಿತು; ಆದರೆ ಆ ದಿವಸ ನನ್ನನ್ನು ನನ್ನ ಗುರುವು ಗುಡಿಯೊಳಗೆ ಕರೆದೊಯ್ದು ನನಗೆ ಬೇರೆ ಏನೋ ಹೇಳಿದನು. ನನ್ನ ಸಂಗತಿ ಬಿಡೆಂದು ಅವನು ಹೇಳಿದನು. ಇತ್ತ ಕಡೆಗೇ ಇರೆಂದನು. ತೀರ್ಥ-ಯಾತ್ರೆ ಮಾಡುವದನ್ನು ಬಿಟ್ಟು ಬಿಡು. ನಾನು ನಿನಗೆ ಮುಂದೆಂದಾದರೂ ಹೀಗೆಯೇ ಆಕ

ಸ್ಕೃತ ರೀತಿಯಿಂದ ಭೆಟ್ಟಿಯಾದೇನು; ಮತ್ತು ಆತನು ಹೇಳಿದಂತೆ ಒಂದು ನಾವು ವಾಫೋರಟಣದ ಒತ್ತಿನೊಳಗಿಂದ ಬಂದರದ ಕಡೆಗೆ ಹೋದಾಗ ನಾನು ಅದರ ಮೇಲೆ ಹಾರಿಕೊಂಡದ್ದನ್ನು ನೋಡಿ, ನನ್ನ ಗುರುವು ಆ ಒತ್ತಿನಲ್ಲಿ ಜಿಗಿದು, ಈಸಿ ಪರತೀರಕ್ಕೆ ತಲುಪಿದನು. ನಾನು ಶಾಸ್ತ್ರಿಗಳ ಮನೆಗೆ ಬಂದ ಸಂಗತಿಯನ್ನು ಶಾಸ್ತ್ರಿಗಳು ತಮಗೆ ಈ ಮೊದಲು ತಿಳಿಸಿಯೇ ತಿಳಿಸಿರುವರು."

"ಹೀಗೆಯೊ?" ಆಶ್ಚರ್ಯಚಕಿತರಾಗಿ ಸರಖೇಲರು:—"ಹಾಗಾದರೇನು, ನೀನು ದಂಡಾಳುವಾಗುವೆಯಾ?"

"ಧನಿಯರ ಅಪ್ಪಣೆ ಹೇಗಾಗುವದೋ ಹಾಗೆ. ಧನಿಯರೇ, ನನಗೆ ಕುದುರೆ ಹತ್ತಲು ಬರುತ್ತದೆ."

"ಅದಿರಲಿ. ನೀನು ನಾವಿಕನಾಗುವೆಯಾ?"

"ಧನಿಯರ ಅಪ್ಪಣೆಯಾದಂತೆ. ಶಾಸ್ತ್ರಿಗಳಲ್ಲಿರಹತ್ತಿದಂದಿನಿಂದ ನಾನು ಸಮುದ್ರ ನೀರಿನಲ್ಲಿ ಆಲೆದಾಡ ಕಲಿತಿರುವೆನು."

"ಒಳ್ಳೇದು. ನೀನು ಇಂದಿನಿಂದ ನನ್ನಲ್ಲಿಯೇ ಇರು. ಹೇಳಿದ ಕೆಲಸ ಮಾಡುತ್ತಿರು. ಅಂದರೆ ಮುಂದೆ ನಿನ್ನ ದೈವದಲ್ಲಿದ್ದಂತೆ ಆದೀತು."

ಹೀಗೆ ಸಂಭಾಷಣ ನಡೆದ ಬಳಿಕ ಸರಖೇಲರು ತಮ್ಮ ಕರಣಿಕನನ್ನು ಕರೆದು, ಅಂದು ಅವಶ್ಯವಾಗಿ ಬರೆಯಬೇಕಾಗಿದ್ದ ಮೂರು-ನಾಲ್ಕು ಕಾಗದಗಳನ್ನು ಬರೆಸಿದರು. ಕೋಟೆಯ ಮುಖ್ಯಸ್ಥ, ನಾವುಗಳ ಮುಖ್ಯಸ್ಥರು ಬಂದು ಮುಜುರೆ ಮಾಡಿ ತಮ್ಮ ಆಡಳಿತದ ವರದಿ ಕೊಟ್ಟದನ್ನು ಕೇಳಿಕೊಂಡು ಕುಣಕ್ಯಾನೊಡನೆ ತಮ್ಮ ಕೋಠಿ-ನಿವಾಸಸ್ಥಳದ ಕಡೆಗೆ ನಡೆದರು.

( ೭ )

ಕೆಲ ಜನರ ದೈವವು ಬಲವತ್ತರವಿರುವದರಿಂದ ಅವರು ಕಿತ್ತಿದ ಕಾಲು ಮುಂದೆಯೇ ಬಿದ್ದೀತಲ್ಲದೆ ಎಂದೂ ಹಿಂಡಕ್ಕೆ ಸರಿಯಲಾರದು. ಸರಖೇಲರು ಕುಣಕ್ಯಾನನ್ನು ತಮ್ಮ ಸಂಗಡ ತಮ್ಮ ಮನೆಗೆ ಕರೆದೊಯ್ಯಲು ಆತನು ಅಲ್ಲಿಯೇ ಸ್ಥಿರವಾಗಿ ಬಿಟ್ಟನು. ಮನುಷ್ಯರನ್ನೊಲಿಸಿಕೊಳ್ಳುವ ವಿದ್ಯೆಯು ಕುಣಕ್ಯಾನಿಗೆ ಹುಟ್ಟಾ ಚೆನ್ನಾಗಿ ಸಾಧಿಸಿದ್ದಿತು; ಆದರೆ ಆತನಿಂದ ಆ ವಿದ್ಯೆಯ ದುರುಪಯೋಗ ಮಾತ್ರ ಎಂದೂ ಆಗಲಿಲ್ಲ.

ಆ ವಿದ್ಯೆಯಲ್ಲಿ ಚಾಂಚಲ್ಯವೆಂಬುದೊಂದು ಬಹು ದೊಡ್ಡ ದೋಷವಿರುತ್ತದೆ. ಕುಣಕ್ಯಾನಿಗೆ ಜನರನ್ನೊಲಿಸಿಕೊಳ್ಳುವ ಗುಣದೊಡನೆ ಏಕನಿಷ್ಠತೆಯ ಜೊತೆಯು ಚೆನ್ನಾಗಿ ಸಾಧಿಸಿತ್ತು. ಆತನು ಬೈರಾಗಿಯ ವೇಷದಲ್ಲಿದ್ದಾಗ ತನ್ನ ಗುರುವನ್ನು

ಬೇರೆ ಮಾಡಲಿಲ್ಲ. ಅವನ ಗುರುವು ಅವನ ನಿವೃತ್ತಿಮಾರ್ಗಕ್ಕೆ ತಡೆಹಾಕಿ ಪ್ರವೃತ್ತಿ ಮಾರ್ಗಕ್ಕೆ ಹಚ್ಚದಿದ್ದರೆ ಅವನು ಆಯುಷ್ಯವನ್ನೆಲ್ಲ ಮೊದಲಿನ ಗುರುವಿನ ಸೇವೆಯಲ್ಲಿಯೇ ಕಳೆಯುತ್ತಿದ್ದನು. ಬಹುತರವಾಗಿ ಗೋಸಾವಿಗಳಲ್ಲಿ ನಿರ್ಲೋಭವು ಇದ್ದೇ ಇರುವದೆಂದು ಹೇಳಲು ಪ್ರತ್ಯವಾಯವಿಲ್ಲ. ಈ ನಿರ್ಲೋಭಿತನವೇ ಗೋಸಾವಿಗಳ ಶಿಷ್ಯರಲ್ಲಿ ನಿರ್ಲೋಭಿ ಗುಣವನ್ನು ನೆಲೆಗೊಳಿಸಿ ಅವರನ್ನು ನಿಷ್ಕಾಂವಂತರನ್ನಾಗಿ ಮಾಡುವದು. ಕುಣಕ್ಯಾನಲ್ಲಿ ಈ ಗುಣವು ಸಹಜವಾಗಿ ಬಾಲ್ಯದಿಂದಲೇ ನೆಲೆಗೊಂಡದ್ದರಿಂದ ಅವನ ಹೊಸ ಜೀವನದಲ್ಲಿ ಅದರ ಉಪಯೋಗವು ಸಾಕಷ್ಟಾಯಿತು. ಕಾಲಾಂತರದಲ್ಲಿ ಶಿಷ್ಯವೃತ್ತಿಯಲ್ಲಿಯೇ ಕಾಲ ಕಳೆದ ಅವನಿಗೆ ಜನಜೀವನದ ಗಂಧವು ತಗಲಿರಲಿಲ್ಲ, ನಾಗರಿಕತೆಯ ಕಲ್ಪನೆಯಿರಲಿಲ್ಲ; ಪ್ರವೃತ್ತಿಮಾರ್ಗದೊಳಗಿನ ಯಾವ ನಡನಳಿಕೆಗಳೂ ಅವನ ದೃಷ್ಟಿಗೆ ಬಿದ್ದಿರಲಿಲ್ಲ. ಉತ್ಸಾಹೀ ನವತರುಣರು ಪೌರುಷ ಸಾಧನೆಗಾಗಿ ಮಾಡುತ್ತಿರುವ ಸಾಧನ-ಸಾಹಸಗಳು ಅವನ ಲಕ್ಷ್ಯದಲ್ಲಿ ಬರತೊಡಗಿ ಮೊದಲನೆಯೇ ಅವುಗಳ ಪರಿಣಾಮವೂ ಸಂಸ್ಕಾರವೂ ಕುಣಕ್ಯಾನ ಮನಸ್ಸಿನ ಮೇಲೆ ಆಗತೊಡಗಿದ್ದರಿಂದ ದಿನದಿನಕ್ಕೆ ಅವನ ಮನೋಭೂಮಿಕೆಯು ಅಭ್ಯಂತರ ಹೊಂದತೊಡಗಿತು. ಇಷ್ಟಾದರೂ ಅವನ ವೇಷದಲ್ಲಿ ಬಹುಮಟ್ಟಿಗೆ ಸ್ಥಿತ್ಯಂತರವಾಗಿರಲಿಲ್ಲ. ಅವನು ಕೊಂಕಣೀ ರಕ್ತದವನಿದ್ದ ಮೂಲಕ ನವಪರಿಚಯದ ಕೊಂಕಣೀ ಜನರೊಡನೆ ಸಮರಸವಾಗಲಿಕ್ಕೆ ಅವನಿಗೆ ಯಾವ ತೊಂದರೆಯೂ ಉಂಟಾಗಲಿಲ್ಲ. ಕೊಂಕಣದ ಜನರಿಗೆ ಮಾತ್ರ ಇವನು ಪರಕೀಯನಂತೆ ತೋರುತ್ತಿದ್ದನು. ಹಾಗೆ ತೋರಲಿಕ್ಕೆ ಅವನ ವೇಷಭೂಷಣಗಳು ಕಾರಣವಾಗಿದ್ದವು. ಜಡೆಗಳನ್ನು ತೆಗೆದು ಹಾಕಿ, ಚಂಡಿಕೆ ಬಿಟ್ಟು, ಕೊಂಕಣೀಯರಂತೆ ಉಡುಪು ಧರಿಸಬೇಕೆಂದು ಶಾಸ್ತ್ರಿಗಳು ಅವನಿಗೆ ಮೇಲಿಂದ ಮೇಲೆ ಹೇಳುತ್ತಿದ್ದರು; ಆದರೆ ಮೊದಲಿನ ಗುರುಗಳ ನೆನೆಂದು ಇಟ್ಟ ಜಡೆಯನ್ನು ತೆಗೆಯಲು ಮನಸ್ಸು ಒಪ್ಪುವದಿಲ್ಲವೆಂದು ಅವನು ಶಾಸ್ತ್ರಿಗಳಿಗೆ ಹೇಳುತ್ತಿದ್ದನು. ತನ್ನ ಗುರುಗಳು ಇನ್ನೊಮ್ಮೆ ಭೆಟ್ಟಿಯಾದಾಗ ಅವರ ಅನುಮತಿ ಹೊಂದಿಯೇ ಜಟಾವೇಷಭೂಷಣಗಳನ್ನು ಬೇರೆ ಮಾಡಬೇಕೆಂದು ಅವನ ಸಂಕಲ್ಪವಿತ್ತು, ಆದರೆ ಅವನು ತನ್ನ ಉಡುಗಳನ್ನು ಮಾತ್ರ ಬೇರೆ ಮಾಡಲು ಪ್ರಯತ್ನಿಸುತ್ತಿದ್ದನು; ಜಡೆಗಳನ್ನು ತೆಗೆದೊಗೆಯಲು ಅವನು ಸಿದ್ಧನಿರಲಿಲ್ಲ. ತನ್ನ ಗುರುವಿನ ಸ್ಮಾರಕವೆಂದು ಅವುಗಳನ್ನು ಅವನು ಬಹು ಭಕ್ತಿಯಿಂದ ಕಾಯುತ್ತಿದ್ದನು.

ಕುಣಕ್ಯಾನು ತನ್ನ ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದನು. ಅವನು ಪ್ರವೃತ್ತಿ ಮಾರ್ಗದಲ್ಲಿಯ ಅಭ್ಯುದಯ ದೆಶೆಯು ಹೇಗಿರುವದೆಂಬದನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದನು. ಅವನು ತನ್ನ ಕೆಲಸದ ಅಭ್ಯಾಸ ಮನಮುಟ್ಟಿ

ಮಾಡುತ್ತಿದ್ದನು, ಹಾಗು ಪುರೋಗಾಮಿಗಳಾದ ಕೆಲಸಗಾರರ ಹಾಗು ಪರಿಷ್ಕಾರ ಒಲುಮೆಯನ್ನು ಪಡೆಯಲು ಮನಃಪೂರ್ವಕವಾಗಿ ಸಾಹಸ ಮಾಡುತ್ತಿದ್ದನು. ಗುರುಸೇವೆಯಲ್ಲಿದ್ದಾಗ ಸ್ವಾಭಾವಿಕವಾಗಿ ಉತ್ಪನ್ನವಾಗಿದ್ದ ವಿನಯವು ಅವನಿಗೆ ಭಾವೀ ಆಯುಷ್ಯದಲ್ಲಿ ಅತ್ಯಂತ ಪ್ರಯೋಜನಕಾರಿಯಾಯಿತು.

ಸ್ಥಲಚರ ಪ್ರಾಣಿಯಾದ ಮನುಷ್ಯನಲ್ಲಿ ಜಲಚರಗಳಂತೆ ನೀರಿನಲ್ಲಿ ತೇಲಾಡುವ ಹುಟ್ಟುಗುಣವಿರುವದಿಲ್ಲ. ನೀರಿನಲ್ಲಿ ತೇಲಲು ಅವನು ಅಭ್ಯಾಸ ಮಾಡಬೇಕಾಗುವದು. ಈಸು ಕಲಿಯದೆ ನೀರಲ್ಲಿ ಬಿದ್ದರೆ ಅವನು ಮುಳುಗುವನು. ಜಲಚರ ಪ್ರಾಣಿಗಳ ಮರಿಗಳಿಗೆ ಈಸುವ ವಿದ್ಯೆಯು ಹುಟ್ಟುಗುಣವಾಗಿರುವ ಮೂಲಕ ಅವುಗಳಿಗೆ ನೀರಿನ ಭಯವಿರುವದಿಲ್ಲ. ಆ ಹುಟ್ಟುಗುಣವು ಮನುಷ್ಯನಲ್ಲಿಲ್ಲದೆ ಇರುವದರಿಂದ ನೀರಿಗಾಗಿ ಅವನು ಮೊದಲು ಭಯಗೊಳ್ಳುವನ. ಆ ಭಯವೇ ಅವನನ್ನು ಮುಳುಗಿಸಲು ಕಾರಣವಾಗುವದು ನೀರಿನಲ್ಲಿ ತೇಲಿಸುವ ಹಲಕೆಲವು ಸಾಧನಗಳಿದ್ದರೂ ಸಹ ನೀರಿನ ಭಯದಿಂದ ಅವನು ಮುಳುಗಿ ಹೋಗುವನು. ಒಮ್ಮೆ ನೀರಿನ ಭಯವು ಹೋಗಿ ಈಸು ಬಂದಿತೆಂದರೆ ಹಳ್ಳ-ಹೊಳೆ, ಕೆರೆ-ಬಾವಿ, ಸಮುದ್ರಗಳಲ್ಲಿ ಅವನು ಈಸುವನು ನೀರಿನಲ್ಲಿ ತೇಲುವ ವಿದ್ಯೆಯು ಚೆನ್ನಾಗಿ ಸಾಧಿಸಿತೆಂದರೆ ಹಾಗು ಜಲಯಾನ ಸಾಧನಗಳ ಜ್ಞಾನವು ಚೆನ್ನಾಗಿ ಆಯಿತೆಂದರೆ, ಅವನು ಸಮುದ್ರ-ಮಹಾಸಾಗರಗಳಿಗೆ ಮೀರುವನು. ಪರ್ವತಪ್ರಾಯವಾದ ಸಮುದ್ರದ ತೆರೆಗಳಿಗೆ ಸಹ ಅವನು ಸೊಪ್ಪು ಹಾಕುವದಿಲ್ಲ, ಬಿರುಗಾಳಿಯಿಂದ ಸಮುದ್ರವು ಅಲ್ಲೋಲಕಲ್ಲೋಲವಾಗುತ್ತಿದ್ದರೂ ಎದೆಗೆಡದೆ ಜಲಯಾನದಲ್ಲಿ ಸಂಚಾರ ಮಾಡುವನು. ಈ ಸಾಧನಗಳಿಂದಲೇ ಎಷ್ಟೋ ವಿದೇಶೀಯರು ಭರತಭೂಮಿಗೆ ಬಂದಿದ್ದರು. ವ್ಯಾಪಾರಾದಿ ಸಾಧನಗಳಿಂದ ತಮ್ಮ ಅಭ್ಯುದಯ ಮಾಡಿಕೊಳ್ಳತೊಡಗಿದ್ದರು.

ಕೊಂಕಣದ ದಂಡೆಯಲ್ಲಿದ್ದ ಬಂದರಗಳಲ್ಲಿ ಮರಾಟಿಗರ ನೌಕೆಗಳಿದ್ದವು. ಇವರು ಜಲಯಾನದಲ್ಲಿ ಸ್ವಲ್ಪ ಹೆಚ್ಚುಕಡಿಮೆ ಫಿರಂಗಿಗಳಂತೆಯೇ ಪ್ರಗತಿ ಹೊಂದಿದವರಾಗಿದ್ದರು. ಅಂತೆಯೇ ಅವರು ಪರಸ್ಪರರು ಹೋರಾಡುವಾಗ ಜಯಶಾಲಿಗಳಾಗುತ್ತಿದ್ದರು ಸಾವಿರಾರು ಮೈಲುಗಳಿಂದ ಬಂದ ಫಿರಂಗಿಗಳು ಜಲಯಾನದಲ್ಲಿ ಮರಾಟಿಗರಿಗಿಂತ ಮುಂದೆ ಹೋಗಿದ್ದರೆಂದು ಪ್ರಾಂಜಲತನದಿಂದ ಒಪ್ಪಬೇಕು. ಇವರು ಅಷ್ಟು ಪ್ರಗತಿ ಹೊಂದಿದವರಿದ್ದುದರಿಂದ ಜನ್ಮಭೂಮಿಯನ್ನು ಬಿಟ್ಟು, ಸಾವಿರಾರು ಮೈಲು ಸಮುದ್ರ ಸಂಚಾರ ಮಾಡಿ, ಭಾರತಕ್ಕೆ ಬಂದು, ಉದ್ಯೋಗ ಸಾಗಿಸಿ, ಜನ್ಮಭೂಮಿಯ ಅಭ್ಯುದಯಸಾಧನೆ ಮಾಡಲು ಸಮರ್ಥರಾಗಿದ್ದರು. ಸಮುದ್ರ

ಯಾನದಲ್ಲಿ ಫಿರಂಗಿಗಳು ಪ್ರಗತಿಪಥವನ್ನು ಹೊಂದಿದಂತೆ ಅವರು ತೋಫು, ಮದ್ದು ಗುಂಡುಗಳಂತಹ ಯುದ್ಧ ಸಾಧನಗಳಲ್ಲಿಯೂ ಮೇಲ್ಮೈಹೊಂದಿದ್ದರು. ಇಷ್ಟಾಗಿಯೂ ಕೊಂಕಣೀಯರಿಗೆ ಗೆಲವು ದೊರೆಯುತ್ತಿದ್ದ ಕಾರಣವು ಬೇರೆಯಾಗಿತ್ತು. ಇವರು ಸ್ಥಳಿಕರು. ಬಂದರಗಳು ಇವರ ವಶದಲ್ಲಿದ್ದವು. ಆದ್ದರಿಂದ ಎತ್ತಿಬಂದವರಾದ ಫಿರಂಗಿಗಳಿಗೆ ಇವರು ಅಷ್ಟೊಂದು ಸೊಪ್ಪುಹಾಕುತ್ತಿರಲಿಲ್ಲ. "ನಕ್ರಃ ಸ್ವಸ್ಥಾನಂ ಆಸಾಧ್ಯ ಗಜೇಂದ್ರಮಪಿಕರ್ಷತಿ" ಎಂಬ ಉಕ್ತಿಯಂತೆ ಕೊಂಕಣೀಯರು ಸ್ಥಳಿಕರಿದ್ದುದರಿಂದಲೇ ಅದರ ಲಾಭವು ಅವರಿಗಾಗುತ್ತಿತ್ತು.

ಆಂಗ್ರೆ ತುಕೋಜಿರಾಯನು ಪಡಗುಪಡೆಯ ಮಹತ್ವವನ್ನು ತಿಳಿದವನಾಗಿದ್ದನು ಆದ್ದರಿಂದ ಅವನು ತನ್ನ ಬಂದರಗಳಲ್ಲಿ ನೌಕೆಗಳನ್ನು ಕಟ್ಟಿಸಿದ್ದನು. ಫಿರಂಗಿಗಳಿಂದ ತೋಫು-ತುಬಾಕಿಗಳನ್ನು ದೊರೆಕಿಸಿಕೊಳ್ಳುತ್ತಿದ್ದನು; ಹಾಗು ಆ ನಾವಿಕರಿಂದ ತನ್ನ ಜನರಿಗೆ ನೌಕಾನಯನ ವಿದ್ಯೆಯನ್ನು ಕಲಿಸುತ್ತಿದ್ದನು. ನೌಕಾವಿದ್ಯೆಯಲ್ಲಿಯೂ ಯುದ್ಧಸಾಧನಗಳಾದ ತೋಫು-ತುಬಾಕಿ ಮೊದಲಾದ ಶಸ್ತ್ರಾಸ್ತ್ರ ವಿದ್ಯೆಯಲ್ಲಿಯೂ ಫಿರಂಗಿಗಳು ಮೇಲ್ತರಗತಿ ಹೊಂದಿದವರೆಂಬುದು ಅವನಿಗೆ ಗೊತ್ತಿತ್ತು. ಈ ವಿದ್ಯೆಗಳಲ್ಲಿ ಪ್ರಾವೀಣ್ಯತೆ ಪಡೆಯದೆ ಹೋದರೆ ಫಿರಂಗಿಗಳು ತನಗೆ ಮೀರುವರೆಂಬ ಬುದ್ಧಿಯಿಂದಲೇ ಅವನು ನೌಕಾನಯನ ಯುದ್ಧಶಸ್ತ್ರಾಸ್ತ್ರಗಳ ಕಡೆಗೆ ಲಕ್ಷ್ಯಗೊಡತೊಡಗಿದ್ದನು. ತುಕೋಜಿಯ ತರುವಾಯ ಆಂಗ್ರೆ ಕಾನ್ಹೋಜಿರಾಯನು ಇದೇ ಪ್ರಾಧಾನ್ಯವನ್ನು ಬಹಳೇ ಬೆಳೆಯಿಸಿದನು. ಇವನು ವಿಜಯದುರ್ಗದ ಒತ್ತಿನಲ್ಲಿ ಕೋಟೆಯ ಆಶ್ರಯದಿಂದ ಬಂದರ ಕಟ್ಟಿ ಒಂದು ಕಾರ್ಯಾಲಯವನ್ನು ಸ್ಥಾಪಿಸಿದನು. ಅಲ್ಲಿ ನೂರಾರು ಬಡಿಗ-ನಾವಿಕರು ನೌಕೆ ಕಟ್ಟುತ್ತಿದ್ದರು. ಆ ಬಂದರದ ಮತ್ತೊಂದು ಕಡೆಗೆ ಮದ್ದಿನ ಮನೆ ಕಟ್ಟಿಸಿದ್ದನು ಜಲಯುದ್ಧದ ಅಗ್ನಿವರ್ಷಾವ ಸಾಧನಗಳು ಆ ಮದ್ದಿನ ಮನೆಯಲ್ಲಿ ಸಂಗ್ರಹಿಸಲ್ಪಟ್ಟಿದ್ದವು. ಕಾನ್ಹೋಜಿರಾಯನ ಪಡಗುಪಡೆಯ ಸಾಮರ್ಥ್ಯವು ದಿನದಿನಕ್ಕೆ ಬೆಳೆಯತೊಡಗಿತ್ತು. ಅದರಿಂದ ಅವನ ಸಹಾಯವನ್ನು ಇತರರು ನಿರೀಕ್ಷಿಸುತ್ತಿದ್ದರು. ಬೇಡಿಕೆ ಬಂದ ಹಾಗೆ ಅವನು ಇತರರಿಗೆ ಸಹಾಯ ಮಾಡುತ್ತಿದ್ದನು.

ಆಗ ವಿದೇಶೀಯ ಫಿರಂಗಿಗಳು ಅಂದರೆ ಡಚ್ಚರು, ಪೋರ್ತಗೀಜರು, ಫ್ರೆಂಚರು, ಇಂಗ್ಲಿಷರು ಮೊದಲಾದ ನಾವಿಕರು ವ್ಯಕ್ತಿಶಃ ಇಲ್ಲವೆ ತಮ್ಮ ಕ ಪನಿಗಳ ಸಲುವಾಗಿ ಸಮುದ್ರಗಳ್ಳತನದ ಹಾಗು ವ್ಯಾಪಾರದ ಉದ್ಯೋಗವನ್ನು ಕೊಂಕಣದ ದಂಡೆಯಲ್ಲಿ ಮಾಡುತ್ತಿದ್ದರು. ಬೇರೆ ಬೇರೆ ದೇಶಗಳ ಈ ಫಿರಂಗಿಗಳಲ್ಲಿ ಅವರವರೊಳಗೆ ದ್ವೇಷವು ನೆಲೆಗೊಂಡಿತ್ತು. ಆದ್ದರಿಂದ ಆಂಗ್ರೇಯ ಸಹಾಯವು ಪ್ರತಿಯೊಬ್ಬರಿಗೂ

ಆವಶ್ಯಕವೆನಿಸಿತ್ತು. ಕಾನ್ಹೋಜಿಯು ಯಾರು ಸಹಾಯ ಬೇಡುವರೋ ಅವರಿಗೆ ನೀಡುತ್ತಿದ್ದನು. ತನ್ನ ಸಹಾಯದ ಪ್ರತಿಫಲವಾಗಿ ಅವನು ಆ ಫಿರಂಗಿಗಳಿಂದ ಮದ್ದು-ಗುಂಡು, ತೋಫು-ತುಬಾಕಿ ಮೊದಲಾದ ಯುದ್ಧಸಾಧನಗಳನ್ನು ಪಡೆಯುತ್ತಿದ್ದನು. ಸಮುದ್ರದ ದಂಡೆಗುಂಟ ಸಂಚರಿಸಿ ಆ ಸಾಮಗ್ರಿಗಳ ಉಪಯೋಗ ಹೇಗೆ ಹೇಗೆ ಮಾಡಿಕೊಳ್ಳಬೇಕೆಂಬುದರ ಶಿಕ್ಷಣ ಕೊಡಿಸುತ್ತಿದ್ದನು.

ಕಾನ್ಹೋಜಿರಾಯನು ಸಮುದ್ರಯುದ್ಧ ಶಿಕ್ಷಣದ ಸಲುವಾಗಿ ಇಬ್ಬರು-ಮೂವರು ಫಿರಂಗಿಗಳನ್ನು ತನ್ನ ಬಳಿಯಲ್ಲಿ ಇಟ್ಟುಕೊಂಡಿದ್ದನು. ಆಗ ಇಂತಹ ಕೆಲಸಗಾರರೂ ದೊರೆಯುತ್ತಿದ್ದರು. ಆಗ ಫಿರಂಗಿಗಳ ಹಡಗುಪಡೆಯಲ್ಲಿ ಹಾಗು ಸೈನ್ಯದಲ್ಲಿ ಸೈನ್ಯ ಶಾಸನವು ಅಷ್ಟೊಂದು ಪ್ರಭಾವಶಾಲಿಯಾಗಿರಲಿಲ್ಲ. ಹಡಗುಪಡೆಯನ್ನು ಸೇರುವ ನಾವಿಕರು ತಿರುಗಿ ತಮ್ಮ ಜನ್ಮಭೂಮಿಯನ್ನು ಕಾಣುವೆನೆಂಬ ಆಶೆಯಿಟ್ಟುಕೊಂಡು ಈ ದೇಶಕ್ಕೆ ಬಂದವರಾಗಿರುತ್ತಿರಲಿಲ್ಲ. ಇಲ್ಲಿ ಸ್ವಕೀಯರ ಸೇವೆ ಮಾಡಿಯೇ ಸಾವಿರಾರು ಕ್ರೋಶ ದೂರವಿರುವ ಸ್ವಜನರ ಹಾಗು ಜನ್ಮಭೂಮಿಯ ಕಲ್ಯಾಣವನ್ನು ಸಾಧಿಸಿತೀರಬೇಕೆಂಬ ಬುದ್ಧಿಯು ಆಗಿನ ಪ್ರತಿಯೊಬ್ಬ ನಾವಿಕನಲ್ಲಿ ಹಾಗು ಇತರ ಜನರಲ್ಲಿ ವಾಸವಾಗಿತ್ತೆಂದು ಹೇಳಲು ಬರುವದಿಲ್ಲ. ಫಿರಂಗಿ ನಾವಿಕರಂತೂ ಅತ್ಯಂತ ಎದೆಗಾರರೂ, ಕಟ್ಟುನಿಟ್ಟಿನವರೂ, ಯಾವ ಪರಿಣಯನ್ನು ಹಿಡಿಯದಂತಹರೂ ಇದ್ದುದರಿಂದ ಇತರ ವ್ಯಾಮೋಹಗಳು ಅವರನ್ನಾವರಿಸುತ್ತಿರಲಿಲ್ಲ. ಬೇಕಾದವರಿಗೆ ಬೇಕಾದ ಹಾಗೆ ವಿಶ್ವಾಸಘಾತ ಮಾಡಲಿಕ್ಕೆ ಅವರು ಹಿಂಜರಿಯುತ್ತಿದ್ದಿಲ್ಲ ಎಚ್ಚರಗೇಡಿತನ, ಅಪ್ರಾಮಾಣಿಕತನ ಮೊದಲಾದ ದುರ್ಗುಣಗಳು ಅವರಲ್ಲಿ ಮೂರ್ತಿಮಂತಾಗಿ ವಾಸಿಸುತ್ತಿದ್ದುದರಿಂದ ಅವರು ಸ್ವಾಭಿಮಾನಶೂನ್ಯರಿರುತ್ತಿದ್ದರು. ಯಾರು ಹೆಚ್ಚು ಸಂಬಳ ಕೊಡುವರೋ ಅವರ ಸೇವೆ ಮಾಡಲು ಅವರು ಮನಸ್ಸು ಮಾಡುತ್ತಿದ್ದರು. ಧನಾಶೆಗಾಗಿ ಸ್ವದೇಶೀಯರ ಮೇಲೆ ಶಸ್ತ್ರವೆತ್ತಲು ಸಹ ಅವರು ಹಿಂಜರಿಯುತ್ತಿದ್ದಿಲ್ಲ. ಆಂಗ್ರೆ ಕಾನ್ಹೋಜಿರಾಯನ ವೇಳೆಯಲ್ಲಿ ಕೊಂಕಣದ ದಂಡೆಯಲ್ಲಿ ಇಂತಹ ಉಡಾಳ ಯುರೋಪೀಯರ ಭರತಿಯು ಚನ್ನಾಗಿತ್ತು. ಹಡಗುಪಡೆಯ ವಿದ್ಯೆಯೂ ಜಲಸಂಚಾರದ-ಧೈರ್ಯವೂ ಈ ಜನರಲ್ಲಿ ವಿಶೇಷವಾಗಿದ್ದುದರಿಂದ ಕಾನ್ಹೋಜಿರಾಯನು ಅವರನ್ನು ತನ್ನಲ್ಲಿ ಸೇವಕರನ್ನಾಗಿ ನಿಯಮಿಸಿಕೊಂಡಿದ್ದನು. ಈ ಕೆಲಗಾರರ ನೆರವಿನಿಂದ ಆಂಗ್ರೆಯು ತನ್ನ ಹಡಗುಪಡೆಯ ವರ್ಚಸ್ಸನ್ನು ಕೊಂಕಣದ ದಂಡೆಗುಂಟ ಚೆನ್ನಾಗಿ ಪ್ರಸ್ಥಾಪಿಸಿದ್ದನು. ಈ ವರ್ಚಸ್ಸಿನ ಫಲವಾಗಿ ಕುಲಾಬೆಯಿಂದ ಗೋವೆಯ ವರೆಗಿನ ಕರಾವಳಿಯಲ್ಲಿ ಯಾವನು ಸಂಚರಿಸಿದರೂ ಕಾನ್ಹೋಜಿರಾಯನ ರಾಜಮುದ್ರೆಯ ಆಜ್ಞಾಪತ್ರ ಹೊಂದಿಯೇ ಸಂಚರಿಸಬೇಕಾಗು

ತ್ತಿತ್ತು. ಆಂಗ್ರೆಯ ಆಜ್ಞಾಪತ್ರವಿಲ್ಲದೆ ಆ ಕರಾವಳಿಯೊಳಗಿನ ಯಾವ ಬಂದರಗಳಲ್ಲಿಯೂ ವ್ಯಾಪಾರ ಮಾಡಲು ಬರುತ್ತಿರಲಿಲ್ಲ, ಪ್ರವಾಸ ಮಾಡಲು ಸಾಧ್ಯವಿರಲಿಲ್ಲ.

ತುಕೋಜಿ ಆಂಗ್ರೆಯು ದಾಲದಿ, ಕೋಳಿ ಅಥವಾ ಭಂಡಾರಿ ಜಾತಿಯವನಿರಲಿಲ್ಲ. ಅವನು ಪುಣೆ ಪ್ರಾಂತದ ಆಗರವಾಡಿ ಎಂಬ ಊರ ನಿವಾಸಿಯಾಗಿದ್ದು ಇವನು ಹೆಸರಾದ ಮರಾಟಿಗನು. ಕೊಂಕಣದೊಳಗಿನ ಬಹು ಜನ ಮರಾಟಿಗರು ತಮ್ಮ ದೈವ ತೆರೆಯಿಸಿಕೊಳ್ಳಲಿಕ್ಕೆ ಹೇಗೆ ದೇಶಕ್ಕೆ ಬರುತ್ತಿದ್ದರೋ, ಹಾಗೆ ದೇಶದೊಳಗಿನ ಅಲ್ಪಸ್ವಲ್ಪ ಜನರಾದರೂ ಕೊಂಕಣಕ್ಕೆ ಹೋಗದೆ ಇರುತ್ತಿದ್ದಿಲ್ಲ. ತುಕೋಜಿಯು ಅದರಂತೆ ದೇಶದಿಂದ ಕೊಂಕಣಕ್ಕೆ ಹೋದವನಾಗಿದ್ದನು. ತುಕೋಜಿಗೆ ಸಮುದ್ರದ ಅನುಭವವು ಹೊಸದಾಗಿತ್ತು. ಕೆಲವು ವಿದ್ಯೆಗಳು ಎರಡನೆಯ ಸಂತತಿಗೆ ಪಿತ್ರಾರ್ಜಿತವಾಗುವಂತೆ ತುಕೋಜಿಯಿಂದ ನಡೆದು ಬಂದ ನೌಕಾವಿದ್ಯೆಯು ಕಾನ್ಹೋಜಿಗೆ ಪಿತ್ರಾರ್ಜಿತವಾಯಿತು. ಜಾತಿವಂತ ಕೊಂಕಣದ ನಿವಾಸಿಗಿಂತ ಕಾನ್ಹೋಜಿಗೆ ನೌಕಾವಿದ್ಯೆಯು ಸುಲಭಸಾಧ್ಯವಾಯಿತು. ಅವನ ಬುದ್ಧಿಮತ್ತೆಯ ಎದುರಿಗೆ ನಾಮಾಂಕಿತ ನಾವಿಕರು ಸಹ ಕೈಯ್ಗೂರಬೇಕಾಯಿತು. ಕಾನ್ಹೋಜಿಯು ನಾಮಾಂಕಿತ ಯೋಧನು. ಯುದ್ಧೋದ್ಯಮವು ಅವನ ಪರಂಪರಾಗತ ವಿದ್ಯೆಯಾಗಿತ್ತು. ಆ ವಿದ್ಯೆಯ ಜೊತೆಗೆ ನೌಕಾವಿದ್ಯೆಯೊಂದು ಪ್ರಯೋಜನಕಾರಿಯೂ ಭೂಷಣಪ್ರದವೂ ಆಯಿತು. ಹಿಂದುಪದಪಾತಶಾಹಿಯ ಸಂಸ್ಥಾಪನೆಗಾಗಿ ಬದ್ಧಕಂಕಣನಾಗಿದ್ದ ಶಿವಾಜಿಮಹಾರಾಜನಿಗೆ ಈ ಭೂಜಲ ಕಲಿಯಿಂದ ಬಹಳೇ ಉಪಯೋಗವಾಯಿತು. ಕಾನ್ಹೋಜಿ ಆಂಗ್ರೆಯು ತನ್ನ ಈ ಗುಣಗಳಿಂದ 'ದರ್ಯಾಸಾರಂಗ' ಎಂಬ ಪದವಿಯನ್ನೂ ದೊಡ್ಡ ಅಧಿಕಾರದ ಸ್ಥಳವನ್ನೂ ದೊರೆಕಿಸಲಿಕ್ಕೆ ಸಮರ್ಥನಾದನು.

ಕಾನ್ಹೋಜಿ ಆಂಗ್ರೆಯು ಜಲಯುದ್ಧ ಪಡೆಯನ್ನು ಶಕ್ತಿಶಾಲಿಯನ್ನಾಗಿ ಮಾಡಲು ಬಹಳೇ ಸಾಹಸಪಡುತ್ತಿದ್ದನು. ಆಗ ಜಲಯುದ್ಧಕ್ಕೆ ಪ್ರಾಧಾನ್ಯತೆ ಪ್ರಾಪ್ತವಾಗತೊಡಗಿದ್ದರಿಂದ ಆ ಬಲವನ್ನು ಬೆಳೆಯಿಸದೆ ಗತ್ಯಂತರವಿರಲಿಲ್ಲ. ಆಂಗ್ರೆಯಂತಹ ಉತ್ಸಾಹೀ ಜಲಯುದ್ಧಪಡೆಯ ಸರದಾರನಿಗೆ ಮುಖ್ಯ ಧನವೆಂದರ ಉದಯೋನ್ಮುಖ ತರುಣ ಸಂತತಿಯು. ಕೇವಲ ಕಣ್ಣುಪರೀಕ್ಷೆಯಿಂದಲೇ ಅವನು ತರುಣರ ಗುಣ-ಶಕ್ತಿಗಳನ್ನು ಪರೀಕ್ಷಿಸುತ್ತಿದ್ದನು. ಗುಣಪರೀಕ್ಷೆಯಲ್ಲಿಯೂ ಶಕ್ತಿಪರೀಕ್ಷೆಯಲ್ಲಿಯೂ ಆಂಗ್ರೆಯನ್ನು ಸರಿಗಟ್ಟುವವರು ಆಗ ಇರಲಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಶಕ್ತಿಸಂಪನ್ನರೂ ಗುಣಸಂಪನ್ನರೂ ಆದ ತರುಣರಿಗೆ ಅವರ ಅಭ್ಯುದಯದ ಮಾರ್ಗವನ್ನು ತೆರೆದಿಡುತ್ತಿದ್ದನು. ಅದರಿಂದ ಗುಣಸಂಪನ್ನರೂ

ಶಕ್ತಿಸಂಪನ್ನರೂ ಹೆಸರುವಾಸಿಗಳಾಗಲಿಕ್ಕೆ ಆಗ ಬಹಳ ಅವಕಾಶವು ಹಿಡಿಯುತ್ತಿರಲಿಲ್ಲ. ಆದ್ದರಿಂದ ನವತರುಣರು ಆಂಗ್ರೆಯ ಜಲಪಡೆಯಲ್ಲಿ ಒಳ್ಳೆಯ ಉತ್ಸಾಹದಿಂದ ಪ್ರವೇಶಿಸತೊಡಗಿದ್ದರು.

ಭಾಗೂಜಿ ಕೋಳಿಯು ತುಕೋಜಿ ಆಂಗ್ರೆಯೊಡನೆ ಜಲಪಡೆಯನ್ನು ಸಿದ್ಧಪಡಿಸುವ ಉದ್ಯೋಗದಲ್ಲಿ ಬಿದ್ದನು. ಭಾಗೂಜಿಯ ಪೂರ್ವವಯಸ್ಸು ಕೇವಲ ಮೀನುಜಾಲಗಾರಿಕೆಯಲ್ಲಿ ಹೋಗಿತ್ತು. ಇವನ ಈ ವ್ಯವಸಾಯದಲ್ಲಿ ನಾಲ್ವತ್ತು-ಐವತ್ತು ಕುಟುಂಬಗಳು ಉಪಜೀವಿಕೆ ನಡೆಯಿಸಿದ್ದವು. ಅವನು ಆಂಗ್ರೆಯ ಹಡಗುಪಡೆಯ ಕೆಲಸಗಾರನಿದ್ದರೂ ತನ್ನ ಬಾಲವ್ಯವಸಾಯವನ್ನು ತೊರೆದುಬಿಟ್ಟಿರಲಿಲ್ಲ. ಒಮ್ಮೊಮ್ಮೆ ಅವನು ಆವಶ್ಯಕತೆಗಾಗಿಯೂ ಒಮ್ಮೊಮ್ಮೆ ಹುರಿದುಂಬಿಯಿಂದಲೂ ಈ ಕೆಲಸ ಮಾಡುತ್ತಿದ್ದನು. ಇವನು ತನ್ನ ಸಾಕುಮಗನಾದ ಧಾಕಲ್ಯಾನಿಗೆ ಈ ಉಭಯ ವಿದ್ಯೆಗಳ ಶಿಕ್ಷಣ ಕೊಡಿಸತೊಡಗಿದ್ದನು. ಕುಣಕ್ಯಾನಿಗಾದರೂ ಈ ಎರಡೂ ಕೆಲಸಗಳ ಸವಿಯುಹತ್ತಿತು. ಇತ್ತೀಚೆಗೆ ಅವನು ಶಾಸ್ತ್ರಿಗಳ ಮನೆಗಿಂತ ಕೋಳಿವಾಡಿಯಲ್ಲಿಯೂ ಭಂಡಾರಿವಾಡಿಯಲ್ಲಿಯೂ ವಿಜಯದುರ್ಗದ ಕೋಟೆಯಲ್ಲಿಯೂ ಸಮುದ್ರತೀರದಲ್ಲಿಯ ಗುಡಿಸಲಲ್ಲಿಯೂ ಹೆಚ್ಚು ಕಾಲ ವಾಸಿಸುತ್ತಿದ್ದನು.

ಕುಣಕ್ಯಾನ ವೇಷವು ಗೋಸಾವಿ ಪದ್ಧತಿಯದಿದ್ದುದರಿಂದ ಶಾಸ್ತ್ರಿಗಳ ಮನೆಯಲ್ಲಿ ಅವನು ಸುಧಾರಕರೊಡನೆ ಕೂಡಿನಡೆಯುತ್ತಿದ್ದನು. ಇತ್ತ ನಾವಾಡಿಗರ ಗುಂಪಿನಲ್ಲಿ ಅವರಂತೆ ವೇಷ ಧರಿಸಿ ಕೂಡಿ ನಡೆಯುತ್ತಿದ್ದನು. ಅವನಿಗೆ ಕೋಳಿ ಭಾಷೆಯ ಜ್ಞಾನವೂ ಚೆನ್ನಾಗಿ ಆಗಿತ್ತು. ಒಂದು ವಿಷಯದಲ್ಲಿ ಮಾತ್ರ ಅವನು ಕೋಳಿಗಳೊಡನೆ ಕೂಡುತ್ತಿರಲಿಲ್ಲ. ಆ ವಿಷಯವೆಂದರೆ, ಮತ್ಸ್ಯಭಕ್ಷಣೆ ಹಾಗು ಸುರಾಪಾನವು. ಕುಣಕ್ಯಾನಿಗೆ ತನ್ನ ಜಾತಿಯು ಯಾವುದೆಂಬದು ಗೊತ್ತಿರಲಿಲ್ಲ. ಉಚ್ಚಕುಲದ ಬ್ರಾಹ್ಮಣ ಜಾತಿಯವನೆಂಬದು ಅವನಿಗೆ ಯಾರಿಂದಲೂ ತಿಳಿದಿರಲಿಲ್ಲ. ಆದಕ್ಕಾಗಿ ಅವನು ಬ್ರಾಹ್ಮಣನೆಂದು ಮೆರೆಯುತ್ತಿದ್ದಿಲ್ಲವಾದರೂ ಗೋಸಾವಿಯ ಶಿಷ್ಯನೆಂಬ ಅಭಿಮಾನದಿಂದ ಅವನು ಮತ್ಸ್ಯ ಮಾಂಸಭಕ್ಷಣೆ ಸುರಾಪಾನಗಳನ್ನು ಮಾಡುತ್ತಿರಲಿಲ್ಲ. ಚಿಕ್ಕಂದಿನಿಂದ ಅವನಿಗೆ ಆ ರೂಢಿ ಬೀಳಲು ಕಾರಣವೂ ಇರಲಿಲ್ಲ. ಕೊಂಕಣದೊಳಗಿನ ಕೆಲವು ಜಾತಿಯ ಬ್ರಾಹ್ಮಣರು ಮತ್ಸ್ಯಭಕ್ಷಣ ಮಾಡುತ್ತಿದ್ದುದರಿಂದ ಅವನ ಸಂಗಡಿಗರು ಅವನನ್ನು ಆ ಕೆಲಸಕ್ಕೆ ಕರೆಯುತ್ತಿದ್ದರು, ಆದರೆ ಅವನು ಮತ್ಸ್ಯಭಕ್ಷಣೆ ಮಾಡುತ್ತಿದ್ದಿಲ್ಲ. ಹೀಗಿದ್ದರೂ ಕುಣಕ್ಯಾ-ಧಾಕಲ್ಯಾರ ಸ್ನೇಹದಲ್ಲಿ ಮೊದಮೊದಲು ಏನೂ ವ್ಯತ್ಯಾಸವುಂಟಾಗಲಿಲ್ಲ. ಇಬ್ಬರೂ ಒಡಹುಟ್ಟಿದವರಂತೆ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದರು. ಭಾಗೂಜಿ ಕೋಳಿಯು ಕುಣಕ್ಯಾನನ್ನು

ಭಾಕಲ್ಯಾನಂತೆಯೇ ಪ್ರೇಮದಿಂದ ನೋಡುತ್ತಿದ್ದನು. ಕುಣಕ್ಯಾನು ಸ್ವಲ್ಪ ಕಾಲದಲ್ಲಿಯೇ ನೌಕಾವಿದ್ಯೆಯಲ್ಲಿಯೂ ಮೀನಜಾಲಗಾರಿಕೆಯಲ್ಲಿಯೂ ಪಾರಂಗತವಾದದ್ದು ನೋಡಿ, ಅವನ ಮೇಲೆ ದೇವರ ವರದಹಸ್ತವಿರುವದೆಂದು ಭಾಗೂಜಿಯ ಭಾವನೆಯಾಯಿತು. ಈಶ್ವರನ ಕೃಪೆಯಿರುವದೆಂದು ಮನುಷ್ಯನ ಕಲ್ಪನೆಯಾದ ಮೇಲೆ ಅವನಾದರೂ ಕೃಪೆಮಾಡತೊಡಗುವನೆಂಬದು ನಿಃಸಂದೇಹವು. ಕುಣಕ್ಯಾನು ತನ್ನ ಗುಣಗಳಿಂದಲೂ ವಿದ್ಯೆಯಿಂದಲೂ ಎರಡು-ಮೂರು ವರ್ಷಗಳಲ್ಲಿಯೇ ಭಾಗೂಜಿಯ ಪೂರ್ಣ ಕೃಪೆಗೊಳಗಾದನು.

ಕೊಂಕಣದ ನಾವಾಡಿಗರು ಪೂರ್ವಕಾಲದಲ್ಲಿ ಸಮುದ್ರಯಾನ ಮಾಡುತ್ತಿದ್ದರು, ಆದರೆ ನಡುವೆ ಕೆಲವು ಕಾಲ ಈ ಕೆಲಸವು ನಿಂತುಹೋಗಿತ್ತು. ಅವರಿಗೆ ಪೂರ್ವಜನ್ಮದ ಸಂಸ್ಕಾರವು ಈಗ ಆಗತೊಡಗಿ, ಅವರು ತಮ್ಮ ಕೆಲಸದಲ್ಲಿ ಪ್ರಾವೀಣ್ಯತೆಪಡೆಯತೊಡಗಿದ್ದರು. ಕೊಂಕಣದ ನಾವಾಡಿಗರಿಗೆ ಹಾಗು ಅವರ ಮಕ್ಕಳಿಗೆ ಸಮುದ್ರದ ಭೀತಿಯಿರಲಿಲ್ಲ, ಆದರೆ ನೌಕಾವಿದ್ಯೆಯಲ್ಲಿ ಅವರ ಪ್ರಗತಿಯು ಕಾನ್ಹೋಜಿರಾಯನಿಂದ ಆಗತೊಡಗಿತ್ತು. ಕಾನ್ಹೋಜಿರಾಯನು ದೇಶದಿಂದ ಬಂದವನಾದರೂ ತನ್ನ ಬುದ್ಧಿಪ್ರಭಾವದಿಂದ ನಾವಿಕ ವಿದ್ಯೆಯಲ್ಲಿ ಚನ್ನಾಗಿ ಪ್ರಗತಿಹೊಂದಿ, ಕೊಂಕಣದ ಹೆಸರಾದ ನಾವಾಡಿಗರನ್ನು ಸಹ ಬೆರಳು ಕಚ್ಚುವಂತೆ ಮಾಡಿದ್ದನು. ಕುಣಕ್ಯಾನು ಆಂಗ್ರೆಯ ಕೃಪಾಛತ್ರದ ಕೆಳಗೆ ಬಂದಾಗಿನಿಂದ ಈ ಹೊಸ ವಿದ್ಯೆಯಲ್ಲಿ ಮೇಲಾಟ ನಡೆಯಿಸಿದ್ದನು. ಇವನಿಗೆ ಈಸುವ ವಿದ್ಯೆಯು ಗುರುಸಹವಾಸದಲ್ಲಿದ್ದಾಗ ಪ್ರಾಪ್ತವಾಗಿತ್ತು. ಇವನು ದೊಡ್ಡ ದೊಡ್ಡ ನದಿಗಳನ್ನು ಸಹಜವಾಗಿ ಈಸಿ ಪಾರಾಗಿ ಹೋಗುತ್ತಿದ್ದನು, ಆದರೆ ಸಮುದ್ರದ ಈಸು ಇವನಿಗೆ ಗೊತ್ತಿರಲಿಲ್ಲ. ಕೋಳಿ ಜನರ ಸಹವಾಸದಲ್ಲಿ ಅವನು ಸಮುದ್ರದ ಈಸನ್ನು ಚೆನ್ನಾಗಿ ಕಲಿತದ್ದಲ್ಲದೆ ನೌಕಾನಯನದಲ್ಲಿಯೂ ಮೆಲ್ಲಮೆಲ್ಲನೆ ಪ್ರಾವೀಣ್ಯತೆ ಸಂಪಾದಿಸತೊಡಗಿದನು. ಇವನಿಗೆ ಕೆಲಸವಿಲ್ಲದೆ ಇದ್ದುದರಿಂದ ಒತ್ತಿನಲ್ಲಿ ಈಸಲಿಕ್ಕೆ ಮೇಲಿಂದ ಮೇಲೆ ಹೋಗುತ್ತಿದ್ದನು. ಗುರುತಿನದೊಂದು ನೌಕೆಯು ಸಮುದ್ರದಲ್ಲಿ ಹೋಯಿತೆಂದರೆ, ಇವನು ಅದರೊಡನೆ ಈಸುತ್ತ ಹೋಗುತ್ತಿದ್ದನು. ನೌಕೆಯಲ್ಲಿಯ ನಾವಾಡಿಗನ ದೃಷ್ಟಿಯು ಇದ್ದರಂತೂ ಮುಳುಗುವದಿಲ್ಲೆಂಬ ಭರವಸೆಯಿಂದ ದಣಿದರೂ ಸಮುದ್ರದಲ್ಲಿ ಬಹು ದೂರ ಈಸುತ್ತ ಹೋಗುತ್ತಿದ್ದನು. ಒತ್ತಿನಿಂದ ಸಮುದ್ರದಲ್ಲಿ ಸ್ವಲ್ಪ ದೂರ ಹೋದ ಮೇಲೆ ಮನುಷ್ಯನಿಗೆ ಸಮುದ್ರದ ಭೀತಿಯು ತಪ್ಪುವದು. ಒತ್ತಿನಲ್ಲಿ ಅನಿಯಮಿತವಾದ ಅತ್ತಿತ್ತ ತೆರೆಗಳು ಬರುತ್ತಿರುವವು. ಸಮುದ್ರದೊಳಗಿನ ತೆರೆಗಳು ಪ್ರಚಂಡವಿರುತ್ತಿದ್ದರೂ ನಿಯಮಿತವಾದವುಗಳಿರುವವು. ಈಸು ಬಂದ ಮನುಷ್ಯನು ಧೈರ್ಯ

ದಿಂದ ಕೈಮುಂದೆ ಮಾಡಿದರೆ, ಪ್ರಚಂಡ ತೆರೆಗಳು ಸಹ ಅವನನ್ನು ಮೇಲೆ ಒಯ್ಯು ವವು. ಕುಣಕ್ಯಾನಿಗೆ ಸಮುದ್ರದ ಈಸಿನ ಗುಟ್ಟು ಚೆನ್ನಾಗಿ ತಿಳಿದು ಅವನು ಒಂದೆರಡು ವರ್ಷಗಳಲ್ಲಿಯೇ ನಿಪುಣ ಜಲಚರನಾದನು. ಸಮುದ್ರದಲ್ಲಿಯ ಅಭ್ಯಾ ಸವು ಬಹು ಬೇಗ ಯಶಸ್ವಿಯಾಯಿತು.

ಕುಣಕ್ಯಾನು ಇಷ್ಟು ದಿನ ಸಮುದ್ರದಲ್ಲಿ ಕೆಲಸ ಮಾಡಿದನು. ಅಲ್ಲಿ ಶ್ರಮ ವಾದರೂ ವಿನೋದಕ್ಕೆ ಸ್ಥಳವು ಮಾತ್ರ ಇರಲಿಲ್ಲ. ಸಮುದ್ರದ ವಿಷಯವಾಗಿ ಅವನಲ್ಲಿ ಆದರ ಬುದ್ಧಿಯು ಮಾತ್ರ ಇರುತ್ತಿತ್ತು. ಸಮುದ್ರದಲ್ಲಿಯ ಅಭ್ಯಾಸ ಮುಗಿದ ಕೂಡಲೆ ಅವನಿಗೆ ಭಾಗೂಜಿಯ ದತ್ತಪುತ್ರನಾದ ಧಾಕಲ್ಯಾನ ಕೈಕೆಳಗೆ ಕೆಲಸ ಮಾಡುವ ಪ್ರಸಂಗವೊದಗಿತು. ಆಗ ಮಾತ್ರ ಕುಣಕ್ಯಾನ ವಿನೋದಬುದ್ಧಿಗೆ ಬಹಳೇ ಅವಕಾಶ ದೊರೆಕಿತು. ಕಾನ್ಹೋಜಿ ಆಂಗ್ರೆ ಸರಖೇಲನು ಕುಣಕ್ಯಾನಿಗೆ ನೌಕಾವಿದ್ಯೆಯ ಶಿಕ್ಷಣ ಕೊಡಿಸುವದಕ್ಕಾಗಿ ಭಾಗೂಜಿಯ ಸ್ವಾಧೀನಕ್ಕೆ ಕೊಟ್ಟಿದ್ದನು. ಭಾಗೂಜಿಯು ಅವನನ್ನು ತನ್ನ ಮಗನಾದ ಧಾಕಲ್ಯಾನ ವಶಕ್ಕೆ ಕೊಟ್ಟು, ನಾವಿಕ ಶಿಕ್ಷಣ ಕೊಡಹೇಳಿದ್ದನು. ಕುಣಕ್ಯಾನು ತನ್ನ ಬುದ್ಧಿಕೌಶಲ್ಯದಿಂದ ಸ್ವಲ್ಪ ದಿನ ಗಳಲ್ಲಿಯೇ ಧಾಕಲ್ಯಾನಿಗೆ ಸರಿಯಾದವನು. ಅವನು ಧಾಕಲ್ಯಾನೊಡನೆ ಹಾಗು ತನ್ನ ಸಂಗಡಿಗರಾದ ಕೋಳಿಗಳೊಡನೆ ನೌಕೆಯಲ್ಲಿ ಕುಳಿತು ಮೀನ ಹಿಡಿಯಲಿಕ್ಕೆ ಹೋಗತೊಡಗಿದನು.

ಆ ಕಾಲದಲ್ಲಿ ಮೀನಗಳನ್ನು ಹಿಡಿದು ದೂರದ ಬಂದರಕ್ಕೆ ಒಯ್ದು ಮಾರಾಟ ಮಾಡುವ ವ್ಯವಸಾಯವು ಸಾಗುತ್ತಿದ್ದಿಲ್ಲ, ಆದರೆ ಕೊಂಕಣದ ಕೋಳಿ, ದಾಲದಿ ಮೊದಲಾದ ಜನರ ಉಪಜೀವಿಕೆಯು ಮುಖ್ಯ ಸಾಧನವು ಮೀನವೇ ಆಗಿತ್ತು. ಆದ್ದ ರಿಂದ ಅವರು ಯಾವಾಗಲೂ ಸಮುದ್ರದಲ್ಲಿ ತಿರುಗಾಡಿ ಮೀನ ಹಿಡಿಯುವ ಉದ್ಯೋಗ ಮಾಡುತ್ತಿದ್ದರು. ದೊಡ್ಡ ಮಳೆಯಲ್ಲಿಯೂ, ಬಿರುಗಾಳಿಯಿಂದ ಸಮುದ್ರವು ಅಲ್ಲೋಲಕಲ್ಲೋಲವಾಗುತ್ತಿರುವಾಗಲೂ ಆ ಜನರು ಮನೆಯಲ್ಲಿರು ತ್ತಿದ್ದರು. ಆ ವೇಳೆಯಲ್ಲಿ ತಂಗಳ ಮೀನಗಳಿಂದಲೂ ತಮ್ಮ ತೋಟಗಳಲ್ಲಿಯ ತೆಂಗು, ಕಾಯಿಪಲ್ಲೆಗಳಮೇಲಿಂದಲೂ ಅವರು ಉಪಜೀವಿಕೆ ಸಾಗಿಸುತ್ತಿದ್ದರು. ಅವರು ಈ ಬಿಡುವಿನ ವೇಳೆಯನ್ನು ತಟನೋಟಗಳಲ್ಲಿ ಕಳೆಯುತ್ತಿದ್ದರು, ಹಾಗು ತಮ್ಮ ಜಾತಿಯ ರೂಢಿಯಂತೆ ಹುಳಿಯಾದ ಹೆಂಡ ಕುಡಿದು ಗುಂಗಿನಲ್ಲಿ ಕಾಲ ಕ್ಷೇಪ ಮಾಡುತ್ತಿದ್ದರು. ಅವರು ನೌಕಾ ಸಂಚಾರ ಮಾಡುವಾಗ ಮಾತ್ರ ಸುರಾ ಪಾನ ಮಾಡುತ್ತಿರಲಿಲ್ಲ. ಸಮುದ್ರ ಪ್ರಯಾಣ ಮಾಡುವ ವೇಳೆಯಲ್ಲಿ ಯಾವ ನಾದರೂ ಸುರಾಪಾನ ಮಾಡಿದ್ದು ನಾಯಕನ ದೃಷ್ಟಿಗೋಚರವಾಯಿತೆಂದರೆ,

ಅವನು ಆ ಮನುಷ್ಯರುಗಳಿಗೆ ಚೆನ್ನಾಗಿ ಶಾಸನವಿಧಿಸುತ್ತಿದ್ದನು. ಬಿಡುವಿನ ವೇಳೆಯಲ್ಲಿ ಮಾತ್ರ ಯಥೇಷ್ಟವಾದ ಸುರಾಪಾನಕ್ಕೆ ಯಾವ ಪ್ರತಿಬಂಧವೂ ಇರಲಿಲ್ಲ. ಈ ವೇಳೆಯಲ್ಲಿಯೆ ಆ ಜನರಿಂದ ಏನಾದರೂ ಅಪರಾಧಗಳು ಘಟಿಸುತ್ತಿದ್ದವು.

ವರ್ಷದಲ್ಲಿ ಹತ್ತು ತಿಂಗಳು ಸಮುದ್ರ ಸಂಚಾರದ ಕೆಲಸವು ನಡೆಯುತ್ತಿತ್ತು. ಕೋಳಿ ನಾವಿಕರು ಸಮುದ್ರದೊಳಗೆ ಐದು ಹರದಾರಿಗಿಂತ ಹೆಚ್ಚು ದೂರ ಪ್ರವಾಸ ಮಾಡುತ್ತಿದ್ದಿಲ್ಲವಾದರೂ ದೂರ ಪ್ರವಾಸ ಮಾಡುವವರಿಗಿಂತ ಹೆಚ್ಚಿನ ಅನುಭವವು ಇವರಿಗೆ ಇರುತ್ತಿತ್ತು. ಯಾಕಂದರೆ ದೂರ ಪ್ರವಾಸ ಮಾಡುವವರಿಗಿಂತ ಹೆಚ್ಚಿನ ತೊಂದರೆಗಳು ಕರಾವಳಿಯ ನಾವಿಕರಿಗೆ ಬರುತ್ತಿರುವವು. ಕರಾವಳಿಯ ಪ್ರದೇಶದಲ್ಲಿ ಬಂಡೆಗಳು ನೀರ ಮೇಲೆ ತಲೆಯೆತ್ತಿ ನಾವಿಕರನ್ನು ಹೆದರಿಸುತ್ತಿರುವವು. ಕೆಲವು ಬಂಡೆಗಳು ನೀರಲ್ಲಿ ಮುಳುಗಿ ವಿಶ್ವಾಸಘಾತಕಿ ಮನುಷ್ಯನಂತೆ ಭಯಗೊಳಿಸುತ್ತಿರುವವು. ನಡುಸಮುದ್ರದಲ್ಲಿ ದೊಡ್ಡ ದೊಡ್ಡ ಪರ್ವತಗಳಿರುವದು ನಿಜ; ಆದರೆ ಆ ಪರ್ವತಗಳ ಮೇಲೆ ಸಹ ಆಳವಾದ ನೀರಿರುತ್ತಿರುವದರಿಂದ ನಾವಿಕರಿಗೆ ಅವುಗಳ ಭಯವಿರುವದಿಲ್ಲ. ಹಡಗುಗಳು ದಂಡೆಗೆ ಬಂದರೆ ಉಸುಕಿನಲ್ಲಿ ಸಿಕ್ಕುವ ಭಯವೂ ಹಡಗುಗಳಿಗಿರುವದು. ಒಟ್ಟಿನಲ್ಲಿ ನಡುಸಮುದ್ರಕ್ಕಿಂತ ದಂಡೆಯಲ್ಲಿಯ ಪ್ರವಾಸವೇ ನಾವಿಕರಿಗೆ ಭಯಪ್ರದವಾಗಿರುವದು.

ಕೋಳಿದ ಲಿವಿ ಜನರು ತಮ್ಮತಮ್ಮೊಳಗೆ ಬಡಿದಾಡುತ್ತಿದ್ದರು. ಅವರಿಗೆ ಬೇರೆ ನಾವಿಕರೊಡನೆ ಯುದ್ಧ ಮಾಡುವ ಪ್ರಸಂಗವಾದರೂ ಬರುತ್ತಿತ್ತು. ಶತ್ರುಗಳ ಮೇಲೆ ದಾಳಿ ಮಾಡುವದು, ಅವರನ್ನು ತಪ್ಪಿಸಿ ಓಡಿಹೋಗುವದು, ಅವರ ನೌಕೆಗೆ ನೌಕೆ ಹಚ್ಚಿ ಅದರ ಮೇಲೇರಿ ಹೊಡೆದಾಟ ಮಾಡುವದು, ಶತ್ರು ಹಡಗವನ್ನು ಹಿಡಿದು ತಮ್ಮ ಹತಕ್ಕೆ ಕಟ್ಟಿ ದಂಡೆಗೆ ತಂದು ಒಡೆಯನ ಸ್ವಾಧೀನಪಡಿಸುವದು ಮೊದಲಾದ ಕೆಲಸಗಳು ಆಗ ಮೇಲಿಂದ ಮೇಲೆ ನಡೆಯುತ್ತಿದ್ದವು. ಕುಣಕ್ಯಾನಾದರೂ ಈ ಘಟನೆಗಳಲ್ಲಿ ಭಾಗವಹಿಸುತ್ತಿದ್ದನು. ಇವನು 'ವೇತಾಳ' ಎಂಬ ನೌಕೆಯಲ್ಲಿ ಕೆಲಸ ಮಾಡುತ್ತಿದ್ದನು. ಆ ನೌಕೆಯ ಒಡೆಯನ ಹೆಸರು ಬಕಾಜಿ ಬುವಾ ಎಂದಿತ್ತು. ಪರಿಚಿತರ ಮನಸ್ಸನ್ನು ಸೆಳೆಯುವ ವಿದ್ಯೆಯು ಲಾಘವೀ ಸ್ವಭಾವದ ಕುಣಕ್ಯಾನಿಗೆ ಚೆನ್ನಾಗಿ ಸಾಧಿಸಿದ್ದರಿಂದ ಅವನು ಬೇಗನೆ ಬಕಾಜಿಬುವಾನ ಕೃಪೆಯನ್ನು ಸಂಪಾದಿಸಿದನು. ಬಕಾಜಿಯು ವಿನಯಶಾಲಿಯಾದ ಕುಣಕ್ಯಾನಿಗೆ ನಾವಿಕ ವಿದ್ಯೆಯ ಶಿಕ್ಷಣ ಕೊಟ್ಟು ಅವನನ್ನು ಪ್ರಸಿದ್ಧ ನಾವಿಕನನ್ನಾಗಿ ಮಾಡಿದನು. ಬಕಾಜಿಯ ಸ್ವಭಾವವು ಆಟಗೋಳಿತನದ್ದೂ ವಿನೋದಿಯೂ ಇದ್ದುದರಿಂದ ಅವನ ಹಾಗು ಕುಣಕ್ಯಾನ ಸ್ನೇಹವು ಚೆನ್ನಾಗಿ ಕೂಡಿತು. ಪ್ರೇಮಕನಿಷ್ಠತೆಯ ಸಂಬಂಧ ಕಾಯು

ಕೊಂಡು ಸಹವಾಸವನ್ನು ಹೇಗೆ ಸುಖಿಯಾಗಿ ಮಾಡಬೇಕೆಂಬದನ್ನು ಅವರು ಒಳ್ಳೇ ಕುಶಲತೆಯಿಂದ ತಿಳಿದುಕೊಂಡರು.

ಜಲಯಾನ ವಿದ್ಯೆಯು ತನ್ನಿಂದ ತಾನೇ ಬರುತ್ತಿದ್ದರೂ ಅದರ ಶಿಕ್ಷಣ ಪಡೆದರೆ ಹೆಚ್ಚಾದ ಗತಿಯುಂಟಾಗುವದು. ಜಲಯಾನ ವಿದ್ಯೆಯೆಂದರೆ ವ್ಯಾಖ್ಯಾನದಿಂದ ಬರುವಂತಹದಲ್ಲ, ಕೆಲಸ ಮಾಡಿ ಶಿಕ್ಷಣಹೊಂದಬೇಕಾಗುವದು. ನಾವಿಕರ ಜೀವನವು ಭೂಮಿಯ ಮೇಲೆ ಕೆಲಸ ಮಾಡುವವರ ಜೀವನಕ್ಕಿಂತ ಕಠಿಣವಾದದ್ದು. ಜಲಯಾನದ ಅಭ್ಯಾಸಿಗಳಿಗೆ ಅನೇಕ ಸಂಕಟ ಪ್ರಸಂಗಗಳೊದಗುವವು. ವನ-ಪರ್ವತಗಳಲ್ಲಿ ಕಾಲ ಕಳೆದ ಕುಣಕ್ಯಾನಿಗೆ ಜಲಯಾನದ ಅಭ್ಯಾಸವು ಮೊದಮೊದಲು ಒಳ್ಳೇ ಕಠಿಣವೆನಿಸಿತ್ತು. ಬಕಾಜಿಯು ಅನೇಕ ವಿಧದ ರೂಢಿಗಳನ್ನು ಮಾಡಿಸಿ ಸಮುದ್ರಸಂಚಾರವು ಅವನಿಗೆ ಒಗ್ಗುವಂತೆ ಮಾಡಿದನು.

ಕುಣಕ್ಯಾನ ಜಲಯಾನ ವಿದ್ಯೆಯನ್ನು ಪರೀಕ್ಷೆ ಮಾಡಬೇಕೆಂದು ಬಕಾಜಿಯ ಮನಸ್ಸಿನಲ್ಲಿ ಹುಟ್ಟಿತ್ತು. ಪರೀಕ್ಷೆಯ ಸಮಯವನ್ನು ಅವನು ನಿರೀಕ್ಷಿಸತೊಡಗಿದ್ದನು. ಒಂದು ದಿನ ಇಬ್ಬರೂ ನೌಕೆಯಲ್ಲಿ ಕುಳಿತು ಜಲಸಂಚಾರ ಮಾಡತೊಡಗಿದಾಗ ಎದುರಿಗೆ ತೆಂಗಿನಕಾಯಿಯ ಪೆಂಡಿಯೊಂದು ತೇಲುತ್ತ ಬಂದಿತು. ಹರಗೋಲನ್ನು ತೆಗೆದುಕೊಂಡು ಹೋಗಿ ಆ ತೆಂಗಿನಕಾಯಿಗಳ ಪೆಂಡಿ ತರಲಿಕ್ಕೆ ಬಕಾಜಿಯು ಕುಣಕ್ಯಾನಿಗೆ ಆಜ್ಞಾಪಿಸಿದನು ಹರಗೋಲು ಬರುವವರೆಗೆ ನೌಕೆಯನ್ನು ಇಲ್ಲಿಯೇ ನಿಲ್ಲಿಸುವೆನೆಂದು ಅವನು ಕುಣಕ್ಯಾನಿಗೆ ಹೇಳಿದ್ದನು. ಕುಣಕ್ಯಾನು ಹರಗೋಲನ್ನು ತೆಗೆದುಕೊಂಡು ಹೋದೊಡನೆಯೆ ನಾಯಕನು ತನ್ನ ನೌಕೆಯನ್ನು ದಂಡೆಗೆ ಸಾಗಿಸಿದನು. ಅಂದು ಗಾಳಿಯು ಹೆಚ್ಚಾಗಿ ಬೀಸುತ್ತಿತ್ತು. ಗಾಳಿಯ ಹೊಡೆತಕ್ಕೆ ದೊಡ್ಡ ದೊಡ್ಡ ತೆರೆಗಳೇಳತೊಡಗಿದ್ದವು. ಕುಣಕ್ಯಾನ ಪರೀಕ್ಷೆಗೆ ಇದೇ ತಕ್ಕ ಸಮಯವೆಂದು ಬಕಾಜಿಗೆ ತೋರಿದ್ದರಿಂದ ಹಾಗೆ ಕುಣಕ್ಯಾನಿಗೆ ಆಜ್ಞಾಪಿಸಿದ್ದನು. ಒಂದು ವೇಳೆ ಕುಣಕ್ಯಾನು ಗಂಡಾಂತರದಲ್ಲಿ ಬಿದ್ದರೆ ಅವನನ್ನು ಪಾರ ಮಾಡಲು ಸಾಧ್ಯವಾಗುವಷ್ಟು ಅಂತರದಲ್ಲಿಯೇ ಬಕಾಜಿಯು ತನ್ನ ನೌಕೆಯನ್ನು ಸಾಗಿಸಿದ್ದನು. ಕುಣಕ್ಯಾನು ತೆಂಗಿನಕಾಯಿಯ ಪೆಂಡಿಯನ್ನು ತೆಗೆದುಕೊಂಡು ತನ್ನ ಹರಗೋಲಿನಲ್ಲಿ ಹಾಕಿದನು. ಅವನು ಬಿರುಗಾಳಿಗೂ ದೊಡ್ಡ ದೊಡ್ಡ ತೆರೆಗಳಿಗೂ ಸೊಪ್ಪು ಹಾಕದೆ ಒಳ್ಳೆಯ ಧೈರ್ಯದಿಂದ ಹರಗೋಲು ನಡೆಯಿಸಿ ದಂಡೆಯನ್ನು ತಲುಪಿದನು; ಬಕಾಜಿಯು ಅವನ ನೌಕಾವಿದ್ಯೆಯನ್ನು ಮನಸ್ವೀಯಾಗಿ ಹೊಗಳಿ ಅವನ ಬೆನ್ನು ಚಪ್ಪರಿಸಿದನು. ಕುಣಕ್ಯಾನ ಈ ಸಾಹಸ ನೋಡಿ ಎಲ್ಲ ನಾವಿಕರಿಗೂ ಸೋಜಿಗವೆನಿಸಿತು. "ಶಾಬಾಸ! ಬಾಲಕಾ, ನೀನು ದಿಟ್ಟನಿರುವೆ. ಸಹಜವಾಗಿ ಸಮುದ್ರ

ವನ್ನು ನೀನು ನಿವಾರಿಸಿದೆ!" ಎಂದು ಬಕಾಜಿಯು ಧನ್ಯೋದ್ಗಾರ ತೆಗೆಯಲು ಕುಣಕ್ಯಾನಿಗೆ ದೊಡ್ಡದೊಂದು ಪಾರಿತೋಷಕ ದೊರೆತದ್ದಕ್ಕಿಂತ ಹೆಚ್ಚು ಸಂಭ್ರಮ ವಾಯಿತು.

ಕುಣಕ್ಯಾನು ಥೋರಣೀ ಜನರ ಸ್ವಭಾವವನ್ನು ಗುರತಿಸುವಂತಹನಿದ್ದನು. ನಾವಿಕರ ಸ್ವಭಾವವು ಭೂಮಿಯಲ್ಲಿ ಕೆಲಸ ಮಾಡುವ ಜನರ ಸ್ವಭಾವಕ್ಕಿಂತ ವಿಕಾರ ವಶವಾದದ್ದಿರುವದೆಂಬದು ಬೇಗನೆ ಅವನ ನಿದರ್ಶನಕ್ಕೆ ಬಂತು. ಒಂದು ದಿನ ನೌಕೆಯು ಸಮುದ್ರದಲ್ಲಿದ್ದಾಗ ಬಕಾಜಿಯು ನಿದ್ರೆ ಹೋಗಿ ಎದ್ದ ಮೇಲೆ ಕುಣಕ್ಯಾ ನಿಗೆ:—"ಮಗೂ, ಇಂದು ಗಾಳಿಯು ಹೇಗೆ ಬೀಸುವದು?" ಎಂದು ಪ್ರಶ್ನೆ ಮಾಡಿದನು.

"ನಾಯಕರೇ, ಗಾಳಿಯನ್ನೇನು ಕೇಳುವಿರಿ? ಎದುರುಗಾಳಿಯು ಭರದಿಂದ ಬೀಸುತ್ತಿದೆ. ಶೀಡಿಗೆ ಕೈಹಚ್ಚಗೊಡದಾಗಿದೆ. ಎಲ್ಲ ಅಂಬಿಗರೂ ಹುಟ್ಟು ಹಾಕಿ ಹಾಕಿ ಬೇಸತ್ತಿದ್ದಾರೆ. ಎಲ್ಲರ ಕೈಗಳೂ ಬಾತುಹೋಗಿವೆ. ನೌಕೆಯು ಮುಂದೆ ಹೋಗುವ ಪ್ರತಿಯಾಗಿ ಹಿಂದೆ ಹೋಗುವದೇನೋ ಎಂದು ಭಾಸವಾಗುತ್ತಿದೆ" ಎಂದು ಕುಣಕ್ಯಾನು ಹೆದರುತ್ತ ಹೆದರುತ್ತ ಹೇಳಿದನು.

ಬಕಾಜಿ ನಾಯಕನಿಗೆ ಗಾಳಿಯ ಆಳವು ಗೊತ್ತಿಲ್ಲದೆ ಇರಲಿಲ್ಲ. ಅವನು ಸಹಜವಾಗಿ ವಿಚಾರಿಸಿದ ಕೂಡಲೆ ಕುಣಕ್ಯಾನಿಂದ ಮೇಲಿನ ಉತ್ತರ ದೊರೆಯಿತು. ಕೂಡಲೆ ನಾಯಕನು ಅವನ ಕೆನ್ನೆಗೆ ಭರದಿಂದ ಏಟು ಕೊಟ್ಟನು; ಆ ಏಟಿನಿಂದ ಕುಣಕ್ಯಾನ ತಲೆ ದಿಮ್ಮೆಂದು ಹೋಯಿತು. ಕುಣಕ್ಯಾನ ಉತ್ತರದಲ್ಲಿ ದೋಷ ವೇನು ಇರದಿದ್ದರೂ ಪೆಟ್ಟು ತಿನ್ನುವ ಪ್ರಸಂಗವೊದಗಿತು. ಇದಕ್ಕೆ ಕಾರಣವೆಂದರೆ ನಾಯಕನಿಗೆ ಇಂತಹ ಉತ್ತರದ ಆವಶ್ಯಕತೆಯಿರಲಿಲ್ಲ. ಅವನಿಗೆ ಮಿತಿಯಾದ ಉತ್ತರವು ಬೇಕಾಗಿತ್ತು. ಯಾಕೆಂದರೆ ವಸ್ತುಸ್ಥಿತಿಯು ಅವನಿಗೆ ಕಂಡದ್ದೇ ಆಗಿತ್ತು. ಕುಣಕ್ಯಾನು ಅದನ್ನು ಇಷ್ಟು ವರ್ಣಿಸಿ ಹೇಳುವ ಕಾರಣವಿರಲಿಲ್ಲ. ಎಂಥ ಪ್ರಸಂಗ ದಲ್ಲಿ ಸಹ ಎದೆಗೆಡುವಂತಹ ಮಾತುಗಳು ನಾವಿಕರ ಮುಖದಿಂದ ಹೊರಡಬಾರ ದೆಂಬ ಮಾತನ್ನು ಇಂದು ಹೊಸದಾಗಿ ಕುಣಕ್ಯಾನು ಕಲಿತನು.

ಮತ್ತೊಂದು ದಿವಸ ಇಂಥದೇ ಒಂದು ಪ್ರಸಂಗದಲ್ಲಿ ಬಕಾಜಿಯು ಕುಣಕ್ಯಾ ನನ್ನು ಕುರಿತು.—"ಬಾಲಕಾ, ಇಂದು ಗಾಳಿಯು ಹೇಗಿರುವದು?" ಎಂದು ಕೇಳಿ ದನು. ಆಗ ಕುಣಕ್ಯಾನು:—'ನಾಯಕರೇ, ಗಾಳಿಯನ್ನೇನು ಕೇಳುತ್ತೀರಿ? ಬೆನ್ನ ಗಾಳಿಯು. ಸರಳವಾಗಿ ಇಷ್ಟದಿಶೆಗೆ ಬೀಸತೊಡಗಿದೆ. ಎಲ್ಲ ಶೀಡುಗಳೂ ನಿಲ್ಲಿ ಸಲ್ಪಟ್ಟಿವೆ. ಅವು ಕದ್ದುತಿಂದ ಮಂಗನ ಗಲ್ಲಗಳಂತೆ ಉಬ್ಬಿಹೋಗಿವೆ. ನೌಕೆಯು ನೀರು ಮುಟ್ಟಿದೆಯೋ, ಅಂತರದಲ್ಲಿಯೇ ಸಾಗಿದೆಯೋ ಎಂಬದು ತಿಳಿಯದಂತಾ

ಗಿದೆ. ದಂಡೆಯು ಕಡೆಗೆ ನೋಡಿದರೆ ಗಿಡಗಳೇ ವೇಗವಾಗಿ ಓಡುತ್ತಿರುವಂತೆ ತೋರುವವು" ಎಂದು ಗಂಭೀರತೆಯಿಂದ ಉತ್ತರವಿತ್ತನು. ಬಕಾಜಿಯು ಆ ಉತ್ಸಾಹಪೂರ್ಣವಾದ ಮಾತು ಕೇಳಿದೊಡನೆಯೆ, ಹರ್ಷನಿರ್ಭರನಾಗಿ ಅವನನ್ನು ಆಲಿಂಗಿಸಿದನು. ಅವನು ಕುಣಕ್ಯಾನ ಬೆನ್ನು ಚಪ್ಪರಿಸಿ.—"ಹುಡುಗಾ. ನಿನ್ನ ಕಾಲಗುಣವೇ ಚಲೋದು ಹೀಗೆಯೇ ಒಂದೆರಡು ಪ್ರಹರ ಗಾಳಿ ಬೀಸಿತೆಂದರ ನಾವು ಅನುಮಾನಕ್ಕಿಂತ ಮುಂಚೆ ಎರಡು ದಿನ ವಿಜಯದುರ್ಗವನ್ನು ತಲುಪುವೆವು" ಎಂದು ನುಡಿದು, ಎಲ್ಲ ನಾವಿಕರಿಗೆ ಖಾದ್ಯ ಹಾಗು ತಂಬಾಕ ಕೊಟ್ಟನು.

ಮತ್ತೊಂದು ದಿನ ನೌಕೆಯನ್ನು ಸಾಗಿಸುವ ಸಮಯಕ್ಕೆ ಗಾಳಿಯೇ ಇರಲಿಲ್ಲ. ಶೀಡುಗಳನ್ನು ನಿಲ್ಲಿಸಿದೊಡನೆ ಅವು ಆಡಿನ ಸ್ತನಗಳಂತೆ ಜೋತಾಡತೊಡಗಿದವು; ಆಗ ನಾಯಕನು ಕುಣಕ್ಯಾನನ್ನು ಕುರಿತ .—"ಕುಣಕ್ಯಾ, ಇಂದು ಗಾಳಿಯು ಹೇಗಿರುವದು?"

ಹಿಂದಿನ ಅನುಭವವು ಲಕ್ಷ್ಯದಲ್ಲಿದ್ದುದರಿಂದ ಕುಣಕ್ಯಾನು ನಾಯಕನಿಗೆ ಸರಿಯಾಗಿಯೇ ಉತ್ತರ ಕೊಡಬೇಕೆಂದು ಯೋಚಿಸಿದನು. ಅವನು ಹುರುಪಿನಿಂದ ಒಡೆಯನನ್ನು ನಿರೀಕ್ಷಿಸುತ್ತ.—"ನಾಯಕರೇ, ಗಾಳಿಯು ಬೀಸುವ ಸಿದ್ಧತೆಯಲ್ಲಿರುವದು. ಶೀಡುಗಳನ್ನು ನಿಲ್ಲಿಸತೊಡಗಿದೊಡನೆಯೇ ಗಾಳಿಯು ಬೀಸತೊಡಗಿತೆಂದೇ ತಿಳಿಯಿರಿ."

"ಶಾಬಾಸ! ಧೀರಗಂಭೀರ ಬಾಲಕಾ! ನೀನು ನವೋತ್ಸಾಹಿಯಿರುವೆ. ಉದಯೋನ್ಮುಖನಾದ ನೀನು ಭಾವೀ ಕಾಲದಲ್ಲಿ ಅತ್ಯಂತ ಪ್ರಖ್ಯಾತನಾಗುವೆ" ಎಂದು ಬಕಾಜಿಭುವಾನು ಧನ್ಯೋದ್ಗಾರ ತೆಗೆದನು.

## ಮೊದಲನೆಯ ಕಲಿತನ.

(೧)

ವಿಜಯದುರ್ಗದ ನೆರೆಯ ಒಂದು ವಾಡಿಯಲ್ಲಿ ಕೋಳಿ ಜಾತಿಯ ಭಿವಾ ಬಾಂಧಕರ ಎಂಬ ಹೆಸರಿನ ಒಬ್ಬ ಪ್ರಸಿದ್ಧ ಮನುಷ್ಯನಿರುತ್ತಿದ್ದನು. ಇವನು ಮನೆತನದಿಂದ ಸುಖಸಂಪನ್ನನಾಗಿದ್ದನು. ಮನೆಯ ಅಂಗಳದೊಳಗಿನ ಮೀನ ಹಿಡಿಯುವ ಬಲೆ, ಒತ್ತಿನೊಳಗಿನ ಬಂದರದಲ್ಲಿದ್ದ ನೌಕೆ ಇವುಗಳ ಮೇಲಿಂದ ಕೋಳಿ ಜನರ ಸಂಪತ್ತಿನ ಎಣಿಕೆಯಾಗುತ್ತಿತ್ತು. ಈ ದೃಷ್ಟಿಯಿಂದ ಭಿವಾ ಬಾಂಧಕರನು ಸುಖಸಂಪನ್ನನಿದ್ದನೆಂದು ಹೇಳಬಹುದು. ಭಿವಾನು ವಯಾತೀತನಿದ್ದುದರಿಂದ ಬಹುತರ ಮನೆಯಲ್ಲಿಯೇ ಕಾಲಕಳೆಯುತ್ತಿದ್ದನು. ನಿಶ್ಚಿತ ಹಬ್ಬಹುಣ್ಣಿವೆಗಳ ದಿನಗಳಲ್ಲಿ ಅವನು ಕೆಮ್ಮುತ್ತ ಕೋಲೂರುತ್ತ ಹೋಗಿ, ಸರಖೇಲರ ಭೆಟ್ಟಿಯಾಗಿ ಮಾನದ ಕಾಯಿ ತರುತ್ತಿದ್ದನು. ಅವನ ಎಲ್ಲ ಉದ್ಯೋಗದಲ್ಲಿ ಅವನ ಹತ್ತುಗಡೆಯವರು ಪಾಲುಗಾರರಾಗಿದ್ದರು. ಭಿವಾನ ಹೆಂಡತಿಯು ಬಹಳ ದಿನಗಳ ಹಿಂದೆಯೇ ಮೃತಳಾಗಿದ್ದಳು. ಅವನಿಗೆ ಗಂಡು ಸಂತತಿಯಿರಲಿಲ್ಲ, ರತನೆಯೆಂಬ ಒಬ್ಬ ವಾತ್ಸಲ್ಯದ ಕುವರಿಯು ಮಾತ್ರ ಇದ್ದಳು. ರತನೆಯು ಮನೆಯ ಎಲ್ಲ ವ್ಯವಹಾರವನ್ನು ಒಳ್ಳೆಯ ದಕ್ಷತೆಯಿಂದ ನಡೆಯಿಸುತ್ತಿದ್ದಳು.

ರತನೆಯು ಉಪವರ ಕನ್ಯೆಯು. ತಂದೆಯ ಮೇಲಿನ ಪ್ರೇಮಕ್ಕಾಗಿ ಅವಳು ಲಗ್ನವಾಗಲು ಸಮ್ಮತಿಯನ್ನು ಕೊಡುತ್ತಿರಲಿಲ್ಲ. ಪತಿಯ ದಾಸ್ಯಕ್ಕಿಂತ ತಂದೆಯಲ್ಲಿಯ ಸ್ವಾತಂತ್ರ್ಯವೇ ಮೇಲೆಂದು ಅವಳು ಬಗೆದಿದ್ದಳು.

ರತನೆಯು ಒಳ್ಳೆಯ ಚಲುವೆಯು. ಇವಳು ಕೋಳಿಜಾತಿಯವಳಿದ್ದರೂ ಇವಳ ಉಡುಪು ಸುಧಾರಿಸಿದ ಜಾತಿಯವರಂತೆ ಇರುತ್ತಿತ್ತು. ಇವಳು ಸ್ವಚ್ಛತೆಯ ಕಡೆಗೆ ಬಹಳ ಲಕ್ಷ್ಯಗೊಡುತ್ತಿದ್ದಳು. ಇವಳು ಬಿಗಿಯಾದ ಕುಪ್ಪಸತೊಡುತ್ತಿದ್ದಳು. ಕೊರಳಲ್ಲಿ ಹವಳದ ಎರಡು ಸರಗಳನ್ನು ಹಾಕುತ್ತಿದ್ದಳು. ಪುಷ್ಪಮಾಲೆಯೊಂದು ಅವಳ ಕಂಠದಲ್ಲಿ ಯಾವಾಗಲೂ ಇದ್ದೇ ಇರುತ್ತಿತ್ತು. ಕೈಗಳಲ್ಲಿ ಬಿಗಿಯಾದ ನಾಲ್ಕು ನಾಲ್ಕು ಬಳೆಗಳನ್ನು ಇಟ್ಟುಕೊಂಡಿರುತ್ತಿದ್ದಳು, ಇವಳು ಹೆಳಲು ಹಾಕಿಕೊಳ್ಳುವದರ ಕಡೆಗೆ ಅಷ್ಟೊಂದು ಲಕ್ಷ್ಯಗೊಡುತ್ತಿದ್ದಿಲ್ಲ. ಗಾಳಿಯಿಂದ ಹಾರಾಡುವ ಅವಳ ಉಂಗುರಗೂದಲುಗಳ ಸೊಬಗು ಮನಮುಟ್ಟಿ ಹೆಳಲು ಹಾಕಿಕೊಳ್ಳುವದರಿಂದ ಸಹ ಉಂಟಾಗುತ್ತಿರಲಿಲ್ಲ. ಇವಳು ಹೂವಿನ ಮೇಲೆ ಹುಟ್ಟಾ ಮಮತೆಯುಳ್ಳವಳಿದ್ದುದರಿಂದ ಯಾವುದೊಂದು ಸುವಾಸಿಕ ಪುಷ್ಪವನ್ನು ಜಡೆಯಲ್ಲಿರಿಸಿಕೊಳ್ಳುತ್ತಿದ್ದಳು. ಇವಳು ಕಾಶಿಯನ್ನು ಕಟ್ಟಿ, ಸೆರಗು ಅಷ್ಟು ಬಿಗಿದು, ಕೆಲಸಗಾರರ

ಕೆಲಸದ ನಿರೀಕ್ಷಣೆಗೆ ಹೊರಟಳೆಂದರೆ, ಒಬ್ಬ ಸೈನಿಕನೇ ಬರುತ್ತಿರುವಂತೆ ಭಾಸವಾಗುತ ಲಿತ್ತು. ಇವಳು ದಪ್ಪವಾಗಿ ಅಡ್ಡ ಕುಂಕುಮ ಹಚ್ಚಿ, ನೊಸಲಿಗೆ ಗ್ರಾಮದೇವಿಯ ಪ್ರಸಾದವೆಂದು ಅವಳ ಭಂಡಾರವನ್ನು ಹಚ್ಚುತ್ತಿದ್ದಳು. ಅವಳ ನೇತ್ರಗಳು ಒಳ್ಳೆ ಯ ತೇಜಸ್ವಿಯಾದವುಗಳಿದ್ದು, ಮುಖವು ಸುಂದರವೂ ಗಂಭೀರವೂ ಆಗಿತ್ತು. ಮೈ ಬಣ್ಣವು ಗೌರವಿದ್ದು, ಕೋಳಿ ಜಾತಿಯಲ್ಲಿ ಇವಳು ತಪ್ಪಿಹುಟ್ಟಿರುವಳೆಂದು ನೋಡು ವವರಿಗೆ ಹೊಳೆಯುತ್ತಿತ್ತು. ಇವಳ ಮೈಯು ತೆಳ್ಳಗಿನದು ಆದುದರಿಂತ ನಡೆಯು ವಾಗ ಸಹಜವಾಗಿ ಅಂಗವಿಕ್ಷೇಪವು ದೃಗ್ಗೋಚರವಾಗುತ್ತಿತ್ತು. ಜನದಟ್ಟಣೆಯಲ್ಲಿ ಇತರರ ಸ್ಪರ್ಶ ತಪ್ಪಿಸಿಕೊಂಡು ಹೋಗುವಾಗ ಇವಳು ಭೀತಿಗ್ರಸ್ತವಾದ ಸರ್ಪವು ಬಿಲದಲ್ಲಿ ಹೋಗುತ್ತಿರುವಾಗ ಕಾಣುವಂತೆ ಕಾಣುತ್ತಿದ್ದಳು. ಜಲಕ್ರೀಡೆ ಮಾಡು ತ್ತಿರುವ ಮತ್ಸ್ಯದಲ್ಲಿ ಕೂಡ ಇಂತಹ ಚಪಲತೆಯು ಕಾಣುತ್ತಿರಲಿಲ್ಲ. ಇವಳ ಧ್ವನಿಯು ಕೋಮಲವಿದ್ದರೂ ಕೂಗುವಾಗ ತುತ್ತೂರಿಯಂತೆ ಅಥವಾ ಕೊಂಬಿನ ಧ್ವನಿಯಂತೆ ಕರ್ಕಶವಾಗುತ್ತಿತ್ತು. ಇವಳು ಯಾವ ಕೆಲಸಗಾರನಿಗಾದರೂ ಗದ್ದ ರಿಸಿ ಆಜ್ಞಾಪಿಸಿದರೆ ಇವಳ ಆಜ್ಞೆಯ ಅವಜ್ಞೆಮಾಡುವ ಎದೆಯು ಯಾವನಿಗೂ ಆಗುತ್ತಿದ್ದಿಲ್ಲ.

ರತನೆಯ ತಂದೆಯು ವಯಾತೀತನಿದ್ದುದರಿಂದ ಅವನ ಬಹುತರ ಕಾರ್ಯಗಳ ಮೇಲ್ವಿಚಾರಣೆಯ ಭಾರವು ಇವಳ ಮೇಲೆಯೇ ಇರುತ್ತಿತ್ತು. ಇವಳು ಕೋಳಿ ಸ್ತ್ರೀ ಜಂಗುಳಿಗಿಂತ ಪುರುಷ ಜಂಗುಳಿಯಲ್ಲಿಯೇ ಹೆಚ್ಚುಕಾಲ ಕಳೆಯುತ್ತಿದ್ದಳು. ಓಲಗ ದಲ್ಲಿ ಇವಳ ಕೆಲಸವೇನೂ ಇರುತ್ತಿದ್ದಿಲ್ಲವಾದರೂ ಒಮ್ಮೊಮ್ಮೆ ಯಾವುದೊಂದು ನಿಮಿತ್ತದಲ್ಲಿ ಸರಖೇಲರ ಓಲಗದೊಳಗೆ ಹೋಗಿ ತಂದೆಯ ಪಾಲಿನ ಮಾನದ ತೆಂಗಿನ ಕಾಯಿ ತರುವ ಕೆಲಸವು ಇವಳದಾಗಿರುತ್ತಿತ್ತು. ರತನೆಯು ಓಲಗದಲ್ಲಿ ಬಂದ ಕೂಡಲೆ ಸರಖೇಲ ಕಾನ್ಹೋಜಿ ಆಂಗ್ರೆಗೆ ಅತ್ಯಂತ ಕೌತುಕನೆನಿಸುತ್ತಿತ್ತು. “ಭಿವಾ ಬಾಂಧಕರನ ವೀರಾಗ್ರಣಿ ಪ್ರತಿನಿಧಿಯು ಆಗಮನವಾಯಿತು” ಎಂದು ಅವನು ನಗುತ್ತ ನಗುತ್ತ! ರತನೆಯನ್ನು ನೋಡಿ ನುಡಿಯುತ್ತಿದ್ದನು. ಭಿವಾನ ಕೆಲಸದ ವಿಷಯವಾಗಿ ಅವನು ರತನೆಯನ್ನು ಪ್ರಶ್ನೆ ಮಾಡುತ್ತಿದ್ದನು ಏನಾದರೂ ಕೆಲಸ ಹೇಳುವದಿದ್ದರೆ ಆಂಗ್ರೆಯು ಅವಳಿಗೇ ಹೇಳುತ್ತಿದ್ದನು ಮಾತುಕತೆಗಳು ಮುಗಿದ ಮೇಲೆ ಭಿವಾನ ಮಾನದ ಕಾಯಿಯನ್ನು ಅವನು ಕೈ ಮುಟ್ಟಿ ರತನೆಯ ಕೈಯಲ್ಲಿ ಕೊಡುತ್ತಿದ್ದನು.

ಕೋಳಿವಾಡಿಯಲ್ಲಿ ಶ್ರೀಮಂತನೂ ಪ್ರತಿಷ್ಠಿತನೂ ಎಂದರೆ ಭಾಗೋಜಿ ನಾಯಕನು. ಇವನು ಸರಖೇಲರ ಎಡಬಲಗೆಯೆಂದು ಜನರು ಅನ್ನು

ತ್ತಿದ್ದರು. ರತನೆಯು ಭಾಗೂಜಿಯು ಸಾಕುಮಗನಾದ ಧಾಕಲ್ಯಾನನ್ನೇ ವರಿಸುವ ಳೆಂದು ಜನರ ಎಣಿಕೆ. ಭಾಗೂಜಿಯ ತಿಳುವಳಿಕೆಯೂ ಹಾಗೆಯೇ ಇತ್ತು. ಧಾಕಲ್ಯಾನಾದರೂ ಅದರಂತೆಯೇ ಭಾವಿಸಿದ್ದನು. ಭಾಗೂಜಿಯ ಎದುರಿಗೆ ಭಿವಾ ಬಾಂಧಕರನು ರತನೆಯ ವಿವಾಹದ ವಿಷಯ ತೆಗೆದು, ಧಾಕಲ್ಯಾನಿಗೆ ರತನೆಯು ತಕ್ಕ ವಧುವಿರುವದರಿಂದ ಅವಳನ್ನು ಸ್ವೀಕರಿಸಬೇಕೆಂದು ಒಮ್ಮೆ ಆಡಿದ್ದನು. ಈ ಸಂಗತಿಯು ರತನೆಯ ಕಿವಿಗೆ ಬಿದ್ದಿತು. ಅವಳು ಈ ಮಾತನ್ನು ಚೆನ್ನಾಗಿ ನಿಷೇಧಿಸಿದಳು. ಅವಳು ತಂದೆಗೆ —"ಅಪ್ಪಾ, ನಾನು ನಿಮಗೆ ಬೇಡವಾಗಿರುವೆನೆಂಬಂತೆ ತೋರುವದು. ಅಂತೆಯೇ ಮನೆ ಬಿಟ್ಟು ಹೊರದೂಡುವ ವಿಚಾರ ನಡೆಸಿರುವಿರಿ!" ಎಂದು ಕಠೋರವಾಗಿ ಹೇಳಿದಳು.

"ಕುಮಾರಿ, ಇಷ್ಟು ದಿನ ನೀನು ಚಿಕ್ಕವಳಿದ್ದೆ, ಈಗ ಉಪವರಳಾಗಿರುವೆ. ಉಪವರ ಕನ್ಯೆಯನ್ನು ಹೀಗೆಯೆ ಅವಿವಾಹಿತ ಸ್ಥಿತಿಯಲ್ಲಿಟ್ಟರೆ ಜನರು ಉಪಹಾಸ ಮಾಡದಿರುವರೇ? ನೀನು ನನ್ನಲ್ಲಿ ಬಹಳವಾಗಿ ಮಮತೆಯುಳ್ಳವಳಿರುವೆ. ಮನೆ ಬಿಟ್ಟು ಹೋಗಲು ನಿನ್ನ ಮನಸ್ಸು ಒಪ್ಪದೆಂಬದನ್ನು ನಾನು ಒಲ್ಲೆನು. ವಿವಾಹಾನಂತರದಲ್ಲಿ ತವರುಮನೆ ಬಿಡಬೇಕಾಗಿರುವದೆಂಬ ಭಯದಿಂದಲೆ ನೀನು ವಿವಾಹಕ್ಕೆ ಅಸಮ್ಮತಿ ವ್ಯಕ್ತಮಾಡುವೆಯೆಂಬ ಮಾತು ನನಗೆ ಗೊತ್ತಿದೆ. ವಿವಾಹೋತ್ತರದಲ್ಲಿ ನಿನ್ನನ್ನು ನಾನು ಹೊರದೂಡುವದಿಲ್ಲ; ನಿನ್ನ ಪತಿಯನ್ನೇ ಮನೆಯ ಅಳಿಯನನ್ನು ಮಾಡಿಕೊಂಡು ನನ್ನ ಮನೆಯಲ್ಲಿಯೇ ಇರಿಸಿಕೊಳ್ಳುವೆನು. ನನ್ನ ತರುವಾಯ ನನ್ನ ಆಸ್ತಿಗೆ ನೀನೂ ನಿನ್ನ ಪತಿಯೂ ಒಡೆಯರಾಗುವಿರಿ. ಇನ್ನು ಮೇಲೆ ನೀನು ಲಗ್ನದ ವಿಚಾರಕ್ಕೆ ಅಡ್ಡಾಗಬೇಡ!"

ಭಿವಾನ ಈ ಯುಕ್ತಿವಾದವು ರತನೆಯನ್ನು ನಿರುತ್ತರಳನ್ನಾಗಿ ಮಾಡಿತು. ಮನೆಗೇ ಪತಿಯ ಆಗಮನವಾದರೆ ತಂದೆಯ ವಿಯೋಗವಾಗಲಾರದೆಂದು ಅವಳು ಸಂತುಷ್ಟಳಾದಳು; ಆದರೆ ತಂದೆಯು ಯೋಜಿಸಿದ ವರನು ಮಾತ್ರ ಅವಳ ಮನಸ್ಸಿಗೆ ಬಂದಿರಲಿಲ್ಲ. ಧಾಕಲ್ಯಾನ ಹೆಸರು ಕೇಳಿದ ಕೂಡಲೆ ಅವಳು ಮೂಗು ಮುರಿಯುತ್ತಿದ್ದಳು. "ತಂದೆಯು ದೊಡ್ಡ ರಾಜಪಿಂಡದವನನ್ನೇ ತನಗೆ ವರನನ್ನಾಗಿ ಆರಿಸಿರುವನು! ಅವನು ಮೀನುಜಾಲಗಾರಿಕೆಯಲ್ಲಿ ನಿಪುಣನಿರಬಹುದು. ಮೀನ ಹಿಡಿಯುವ ನೈಪುಣ್ಯ ಸಂಪಾದಿಸಿದ ಮಾತ್ರದಿಂದ ಮನುಷ್ಯನ ಇತಿಕರ್ತವ್ಯವಾಗಲಿಲ್ಲ. ಕೇವಲ ಮೀನವನ್ನೇ ತಿಂದು ಮನುಷ್ಯನು ಬಾಳಬೇಕೆ? ಕಾನ್ಹೋಜಿ ಆಂಗ್ರೆ ಸರಖೇಲನು ಎಷ್ಟೋ ದುರ್ಗಗಳನ್ನು ಕಟ್ಟಿಸಿದನು; ಎಷ್ಟೋ ಬಂದರಗಳನ್ನು ಕಟ್ಟಿಸಿದನು. ಅವುಗಳನ್ನು ಮೀನು ಒಣಗ ಹಾಕಲಿಕ್ಕೆ ಕಟ್ಟಿಸಿರುವನೆ? ಮೀನಗಳನ್ನು

ಒಣಗಿಸಲಿಕ್ಕೆ ಸಮುದ್ರತೀರದ ಉಸುಗಿನ ಬೈಲು ಬೇಕಾದಷ್ಟಿದೆ. ಮೀನು ಹಿಡಿಯುವ ಕೆಲಸವನ್ನು ಒಬ್ಬ ಕುಂಟ, ಹೆಳವ ಹುಡುಗನು ಅನಾಯಾಸವಾಗಿ ಮಾಡುವನು. ಸಮುದ್ರದಲ್ಲಿ ಬಡ ನಾವಿಕರ ಮೇಲೆ ಹಾಗು ಪ್ರವಾಸಿಗರ ಮೇಲೆ ದಾಳಿ ಮಾಡುವ ಫಿರಂಗಿಗಳ ಶಾಸನವು ಜಾಳಿಗೆ ಹಾಕುವದರಿಂದಾಗಲಿ, ಗುಟ್ಟು ಎತ್ತುವದರಿಂದಾಗಲಿ ಆಗುತ್ತಿರುವದಿಲ್ಲ. ಈ ಕೆಲಸಕ್ಕೆ ತೋಫು-ತುಬಾಕಿಗಳಿರಬೇಕು, ಕಲಿತನ ಬೇಕು; ರಣಕೌಶಲ್ಯ ಬೇಕು; ಜಲಯುದ್ಧ ನೈಪುಣ್ಯತೆ ಬೇಕು; ನೌಕಾವಿದ್ಯೆ ಪ್ರಾವೀಣ್ಯತೆ ಬೇಕು." ಎಂಬ ವಿಚಾರವು ಅವರಲ್ಲಿ ಹುಟ್ಟಿತ್ತು.

ಯುದ್ಧವಿದ್ಯೆಯಲ್ಲಿ ಥಾಕಲ್ಯಾನು ನಿಪುಣನಿರಲಿಲ್ಲ, ಆದರೆ ಕುಣಕ್ಯಾನ ಪ್ರತಾಪವು ಎಲ್ಲರಿಗೂ ದೃಗ್ಗೋಚರವಾಗತೊಡಗಿತ್ತು. ರೂಪದಲ್ಲಿ ಥಾಕಲ್ಯಾನು ಕುಣಕ್ಯಾನಿಗಿಂತ ಚಲುವನಿದ್ದನು; ಆದರೆ ಕಲಿತನದ ತೇಜದಿಂದ ಕುಣಕ್ಯಾನು ಅವನ ಚಲುವಿಕೆಯನ್ನು ಹಿಂದುಳಿಸಿದ್ದನು. ಹೇಡಿಯು ಮೃದುವಾದ ದೇಹಕ್ಕಿಂತ ಶೂರನ ಕಠಿಣವಾದ ದೇಹವೇ ವಿಹಿತವೆಂದು ರತನೆಯು ಅನ್ನುತ್ತಿದ್ದಳು. ಅವಳು ಕುಣಕ್ಯಾನಲ್ಲಿ ಮಮತೆಯುಳ್ಳವಳಾಗಿದ್ದುದರಿಂದ ಅವನನ್ನು ಮೇಲಿಂದ ಮೇಲೆ ನೋಡಬೇಕೆಂದು ಮನಸ್ಸು ಮಾಡುತ್ತಿದ್ದಳು. ರತನೆಯ ಒಲವು ಕುಣಕ್ಯಾನ ಮೇಲಿರುವದೆಂಬದು ಥಾಕಲ್ಯಾನಿಗೆ ತಿಳಿಯದೆ ಇರಲಿಲ್ಲ. ರತನೆಯ ಪಕ್ಷಪಾತಬುದ್ಧಿಗಾಗಿ ಅವನು ಮನದಲ್ಲಿ ಕುದಿಯುತ್ತಿದ್ದನು. ಕುಣಕ್ಯಾನ ವಿಷಯವಾಗಿಯೂ ಅವನ ಮನಸ್ಸು ಕಲುಷಿತವಾಗತೊಡಗಿತು, ಆದರೆ ಅವನು ತನ್ನ ಮನೋವಿಕಾರವನ್ನು ಹೊರಗೆ ತೋರಗೊಡದೆ, ಕುಣಕ್ಯಾನ ವಿಷಯವಾಗಿಯೂ ರತನೆಯ ವಿಷಯವಾಗಿಯೂ ಮೇಲೆ ಮೇಲೆ ಸ್ನೇಹಭಾವವನ್ನೇ ನಟಿಸುತ್ತಿದ್ದನು.

ಕುಣಕ್ಯಾನ ಚಾಣ್ಮೆ, ಪ್ರಸಂಗಾವಧಾನ, ಧೈರ್ಯ, ಪರಾಕ್ರಮ ಮೊದಲಾದ ಗುಣಗಳಲ್ಲಿ ತನಗಿಂತ ಶ್ರೇಷ್ಠನಿರುವನೆಂಬ ಸಂಗತಿಯು ಥಾಕಲ್ಯಾನಿಗೆ ತಿಳಿದಿತ್ತು. ಈ ಸಂಗತಿಯು ಇತರರಿಗೂ, ಇತರರಂತೆ ರತನೆಗೂ ಗೊತ್ತಾಗಿತ್ತು. ರತನೆಯು ಗುಣಗ್ರಾಹಿಯಿರುವಳೆಂಬ ಸಂಗತಿಯಾದರೂ ಥಾಕಲ್ಯಾನಿಗೆ ತಿಳಿದಿತ್ತು. ರತನೆಯಂತಹ ಹೆಂಡತಿಯು ತನ್ನ ಕೈಯಿಂದ ನುಸುಳಿ ಹೋಗುವದಕ್ಕೆ ಈ ವಸ್ತುಸ್ಥಿತಿಯು ಕಾರಣವೆಲ್ಲಾಗುವದೋ ಎಂದು ಅವನು ಭಯಗೊಂಡಿದ್ದನು. ಕುಣಕ್ಯಾನ ವಿಷಯವಾಗಿ ಅವನಲ್ಲಿ ಮತ್ಸರ ಬುದ್ಧಿಯು ಜಾಗ್ರತವಾಗಿತ್ತು. ಅವನು ಒಮ್ಮೊಮ್ಮೆ ರತನೆಯನ್ನು ಕಂಡು ಕುಣಕ್ಯಾನನ್ನು ಜರೆಯುತ್ತಿದ್ದನು. ಯಾವುದೊಂದು ಕಾಳಗದ ಸಂದರ್ಭವೊದಗಿದಾಗ ಕುಣಕ್ಯಾನು ಥಾಕಲ್ಯಾನಿಗಿಂತ ಕಲಿತನದಿಂದ ಕಾದಿ ಜನರನ್ನು ಬೆರಗುಗೊಳಿಸುತ್ತಿದ್ದನು; ಆದರೆ ರತನೆಯ ಸಮ್ಮುಖದಲ್ಲಿ ಥಾಕಲ್ಯಾನು

ತನ್ನ ವೀರತ್ವವನ್ನು ಹೊಗಳಿಕೊಂಡು ಕುಣಕ್ಯಾನ ಅವಹೇಲನೆ ಮಾಡುತ್ತಿದ್ದನು. ರತನೆಗೆ ಜನರ ಮುಖದಿಂದ ನಿಜ ಸಂಗತಿ ಗೊತ್ತಾಗುತ್ತಿತ್ತು; ಹಾಗು ಥಾಕಲ್ಯಾನ ಮೈಮೇಲೆ ಚಿವುರು ಗಾಯ ಕೂಡ ಇರದೆ, ಕುಣಕ್ಯಾನಿಗೆ ಗಾಯಗಳಾದದ್ದು ನೋಡಿಯೂ ಸತ್ಯವು ಅವಳಿಗೆ ತಿಳಿಯುತ್ತಿತು. ಒಮ್ಮೆ ಅವಳು ವಿನೋದಕ್ಕಾಗಿ ಥಾಕಲ್ಯಾನನ್ನು ಕುರಿತು:—"ಥಾಕಲ್ಯಾ, ಕುಣಕ್ಯಾನು ತನ್ನ ಕಲಿತನವನ್ನು ಸರಖೇಲರಿಗೆ ತೋರಿಸುವದಕ್ಕಾಗಿ ತನ್ನ ಕೈಯಿಂದಲೇ ಗಾಯಗಳನ್ನು ಮಾಡಿಕೊಂಡಂತೆ ನನಗೆ ತೋರುವದು. ಹೌದಲ್ಲವೆ?"

ಈ ಮಾತಿಗೆ ಹೌದೆನ್ನಲು ಥಾಕಲ್ಯಾನ ಮನಸ್ಸು ಒಪ್ಪದಿದ್ದರೂ:—"ಛೇ! ಹೀಗೇನೂ ಇರಲಿಕ್ಕಿಲ್ಲವೆಂಬಂತೆ ತೋರುವದು. ಯಾವುದು ಹೀಗೆಯೇ ಎಂದು ಹೇಳಲಿಕ್ಕೆ ಮಾತ್ರ ಬರುವದಿಲ್ಲ. ನೋಡದೆ ಹೀಗೆಯೇ ಎಂದು ಹೇಗೆ ಹೆಸರಿಡಬೇಕು? ಕುಣಕ್ಯಾನು ಒಂದು ವೇಳೆ ಹಾಗೆ ಆಡುತ್ತಿದ್ದರೂ ನಮ್ಮಂಥವರಿಗೆ ಹಾಗೆ ಅನ್ನಲಿಕ್ಕೆ ಬರುವದಿಲ್ಲ ನೋಡು" ಎಂದು ರತನೆಗೆ ಉತ್ತರ ಕೊಟ್ಟನು.

ಥಾಕಲ್ಯಾನ ಮಾತುಗಳಿಂದ ಅವನ ಹೀನ ವೃತ್ತಿಯು ರತನೆಗೆ ಚೆನ್ನಾಗಿ ತಿಳಿಯಿತು. ಕುಣಕ್ಯಾನ ವಿಷಯವಾಗಿ ಅವನಲ್ಲಿ ಮತ್ಸರ ಬುದ್ಧಿಯು ಉತ್ಪನ್ನವಾಗಿದೆಯೆಂಬದೂ ಅವಳಿಗೆ ಗೊತ್ತಾಯಿತು. ಅವನ ಈ ಮನೋವೃತ್ತಿಯನ್ನು ನೋಡಿ ರತನೆಯು ತಿರಸ್ಕಾರಗೊಳ್ಳುತ್ತಿದ್ದಳು. ಒಮ್ಮೊಮ್ಮೆ ಅವಳಿಗೆ ಕುಣಕ್ಯಾನೊಬ್ಬನೊಡನೆಯೇ ಮಾತಾಡುವ ಪ್ರಸಂಗವೂ ಬರುತ್ತಿತ್ತು. ಆಗ ಅವನು ಥಾಕಲ್ಯಾನಂತೆ ಆತ್ಮಪ್ರಶಂಸ ಪರನಿಂದ ಮಾಡದೆ ಯಥಾಸ್ಥಿತ ಸಂಗತಿಯನ್ನೇ ರತನೆಗೆ ಹೇಳುತ್ತಿದ್ದನು. ಪರಾಕ್ರಮದ ಪ್ರಸಂಗ ಹೇಳುವಾಗ ತಾನೂ ಥಾಕಲ್ಯಾನೂ ಕೂಡಿಯೇ ಆ ಕಾರ್ಯ ಮಾಡಿದೆವೆಂದು ನುಡಿಯುತ್ತಿದ್ದನು. ತನ್ನ ಮೇಲುಗೈಯಾಗಿದ್ದರೂ ಅವನು ಥಾಕಲ್ಯಾನನ್ನು ಜರೆಯುತ್ತಿದ್ದಿಲ್ಲ. ಕುಣಕ್ಯಾನ ಈ ಉದಾರ ಸ್ವಭಾವವೂ ನಿಸ್ಪೃಹ ಹಾಗು ನಿರಹಂಕಾರ ವೃತ್ತಿಯೂ ರತನೆಯ ಮನಸ್ಸನ್ನಾಕರ್ಷಿಸಿದ್ದವು. ಕುಣಕ್ಯಾನಿಗೆ ತಾಯಿಯಿಲ್ಲ, ತಂದೆಯಿಲ್ಲ. ಹೇಳಿ ಕೇಳಿ ಪರದೇಶಿ. ಹೊಲವಿಲ್ಲ, ಮನೆಯಿಲ್ಲ; ಸಿರಿಸಂಪತ್ತಿಯಿಲ್ಲ; ಆಪ್ತೇಷ್ಟರಿಲ್ಲ. ಇಂಥವನು ತನ್ನ ಗುಣದಿಂದಲೇ ಹೇಗೆ ಬೆಳಕಿಗೆ ಬಂದನೆಂಬ ವಿಚಾರವು ರತನೆಯಲ್ಲಿ ಬಂದೊಡನೆಯೇ ಅವನ ವಿಷಯವಾಗಿ ಪ್ರೇಮಭಾವ ತಳೆಯುತ್ತಿದ್ದಳು. ಇಂಥ ಗುಣಿಯು ಆಯುಷ್ಯದ ತನ್ನ ಸಂಗಡಿಗನಾದರೆ ಬಹಳೇ ಚೆನ್ನಾಗುವದೆಂದು ಮನದಲ್ಲಿ ಅನ್ನುತ್ತಿದ್ದಳು.

ಯುದ್ಧಪ್ರಸಂಗವನ್ನು ಬಿಟ್ಟು ಉಳಿದ ವೇಳೆಯಲ್ಲಿ ಸಹ ಥಾಕಲ್ಯಾನ ಕ್ಷುದ್ರವೃತ್ತಿಯೂ ಕುಣಕ್ಯಾನ ಉಚ್ಚವೃತ್ತಿಯೂ ರತನೆಗೆ ದೃಗ್ಗೋಚರವಾಗುತ್ತಿದ್ದವು.

ಒಮ್ಮೆ ಕೋಜಾಗರೀ ಪೌರ್ಣಿಮೆಯ ದಿನ ಧಾಕಲ್ಯಾನು ರತನೆಯನ್ನು ಕರೆದು :—
"ರತನೇ, ಇಂದು ರಾತ್ರಿಯ ಬೆಳದಿಂಗಳಲ್ಲಿ ನಾವಿಬ್ಬರೂ ನೌಕಾವಿಹಾರ ಮಾಡಿ ಬರೋಣ. ಜೊತೆಯಲ್ಲಿ ಮತ್ತಾರೂ ಬೇಡ. ಬೆಳದಿಂಗಳ ರಾತ್ರಿಯಲ್ಲಿ ನೌಕಾವಿಹಾರವು ನಾವಿಬ್ಬರಿದ್ದರೇ ಮಾತ್ರ ಹೆಚ್ಚು ಆಹ್ಲಾದದಾಯಕವಾಗುವದಿಲ್ಲವೆ?"

ಧಾಕಲ್ಯಾನ ಉದ್ದೇಶವು ರತನೆಗೆ ತಿಳಿಯದಿರಲಿಲ್ಲ. ಆಗ ಅವಳು :—"ನೌಕಾವಿಹಾರ ವಿನೋದದ ಹಾಗು ಆಹ್ಲಾದದ ವಿಷಯ. ಅದಕ್ಕಾಗಿ ಬೇರೆ ಹಲಕೆಲವರಿದ್ದರೆ ಒಳಿತಲ್ಲವೆ?"

"ಇತರರು ಏತಕ್ಕೆ ಬೇಕು? ಬೇರೆಯವರಿದ್ದರೆ ಮೈಚಳಿ ಬಿಟ್ಟು ಮಾತಾಡಲಿಕ್ಕೆ ನೆಟ್ಟಗಾಗುವದಿಲ್ಲ. ನೀನು ಹುಟ್ಟು ಹಾಕು. ನಾನು ನೌಕೆ ನಡೆಯಿಸುವೆನು. ಸ್ವಲ್ಪ ಗಾಳಿ ಬೀಸತೊಡಗಿದರೆ ಶೀಡುಗಳು ತಮ್ಮ ಕೆಲಸ ಮಾಡತೊಡಗುವವು. ಆಗ ನಿನ್ನ ಕೈ ತೆರವಾಗುವದು. ತರುವಾಯ ವಿನೋದದಿಂದ ಮಾತಾಡಲು ಅವಕಾಶವು ದೊರೆಯುವದು."

"ಒಳ್ಳೇದು. ಚಂದ್ರೋದಯವಾಗುತ್ತಲೆ ಬಂದರದಲ್ಲಿ ನೌಕೆ ಸಿದ್ಧವಾಗಿರಬೇಕೆಂದು ಆಳುಗಳಿಗೆ ಹೇಳುತ್ತೇನೆ. ನೀನು ವೇಳೆಗೆ ಸರಿಯಾಗಿ ಬಾ. ಇಬ್ಬರೇ ಹೋಗೋಣ. ವೇಳೆ ಮಾಡಕೂಡದು. ತಿಳಿಯಿತೇ?"

ರತನೆಯ ಮಾತುಗಳಿಂದ ಧಾಕಲ್ಯಾನು ಸಂಭ್ರಮಗೊಂಡನು. ನೌಕಾವಿಹಾರ ನಡೆದಾಗ ಮನಬಿಚ್ಚಿ ಮಾತಾಡಲು ಅವಕಾಶ ದೊರೆಯುವದು. ಆಗ ರತನೆಯ ಮನವೊಲಿಸಲಿಕ್ಕೂ, ಪ್ರಸಂಗಪೊದಗಿದರೆ ಕಾಲು ಹಿಡಿಯಲಿಕ್ಕೂ ಸಂಧಿ ಸಿಗುವದು. ಮೊದಲಾದ ವಿಚಾರಗಳು ಅವನ ಮನಸ್ಸಿನಲ್ಲಿ ಹುಟ್ಟಿದವು. ಯಾವಾಗ ಸಂಜೆಯಾಗುವದೋ, ಯಾವಾಗ ಚಂದ್ರೋದಯವಾಗುವದೋ ಎಂದು ಹಾತೊರೆದು ಕುಳಿತಿದ್ದ ಅವನಿಗೆ ಸಂಜೆಯ ವೇಳೆಯಲ್ಲಿ ಒಂದು ಅಗತ್ಯದ ಕೆಲಸವು ಬಿದ್ದು ರತನೆ ತಿಳಿಸಿದ ವೇಳೆಗೆ ಬಂದರಕ್ಕೆ ಹೋಗಲಾಗಲಿಲ್ಲ. ಈ ಅವಕಾಶದ ಲಾಭ ಹೊಂದಿ ರತನೆಯು ಗತ್ತುಗಾರಿಕೆ ಮಾಡಿಬಿಟ್ಟಿದ್ದಳು. ಅವಳು ಮೊದಲೇ ಕುಣಕ್ಯಾನಿಗೆ ನಿರೋಪ ಕಳುಹಿಸಿ ಅವನನ್ನು ಬಂದರಕ್ಕೆ ಕರೆಯಿಸಿದ್ದಳು. ಮಸಾಲೆಯ ಹಾಲೂ ಇನ್ನಿತರ ತಿಂಡಿಗಳೂ ಆಗಲೆ ನೌಕೆಯಲ್ಲಿಡಲ್ಪಟ್ಟಿದ್ದವು. ಚಂದ್ರೋದಯವಾಗುತ್ತಲೆ ರತನೆಯೂ ಕುಣಕ್ಯಾನೂ ನೌಕೆಯಲ್ಲಿ ಕುಳಿತುಕೊಂಡರು. ಇನ್ನು ಮೇಲೆ ನೌಕೆ ಸಾಗುವದಿತ್ತು. ತನ್ನ ಆಳಾದ ಮಾಣಕ್ಯಾನಿಗೆ ಹುಟ್ಟು ಹಾಕಲು ರತನೆಯು ಅಜ್ಞಾಪಿಸಿದ್ದಳು ಸಹ. ಅಷ್ಟರಲ್ಲೇ ದೂರಿನಿಂದ ಕೂಗು ಕೇಳಿತು :—"ನಾನೂ ಬಂದೆನು; ನೌಕೆ ಸಾಗಿಸಬೇಡ ರತನೇ!" ಎಂದು.

ಥಾಕಲ್ಯಾನ ದನಿಯೇ ಇದೆಂಬದು ಎಲ್ಲರಿಗೂ ತಿಳಿಯಿತು. ನೋಡ ನೋಡು ವಷ್ಟರಲ್ಲಿ ಅವನೂ ಬಂದನು. ಆಗ ರತನೆಯು :—"ಥಾಕಲ್ಯಾ, ಧಾವಿಸಿ ಬರಬೇಡ. ಎಡವಿ ಬಿದ್ದೀ! ನಾವೇನೂ ನಿನ್ನನ್ನು ಬಿಟ್ಟು ಹೋಗುವದಿಲ್ಲ ತಿಳಿಯಿತೇ? ನೌಕೆ ಯಲ್ಲಿ ನಿನಗೂ ಸಹ ಕುಳ್ಳಿರಲು ಸ್ಥಳವಿದೆ. ಇಷ್ಟು ವೇಳೆ ನಿನ್ನ ದಾರೀ ನೋಡಿ ದೆವು. ಹೊತ್ತು ಬಹಳವಾದುದರಿಂದ ಬರುವ ಭರವಸೆ ತೋರಲಿಲ್ಲ. ಯಾವು ದಾದರೂ ಕೆಲಸದಲ್ಲಿ ಬಿದ್ದಿರಬಹುದು, ಬರದಿದ್ದರೆ ಬಿಡಲಿ, ನೌಕಾವಿಹಾರದ ನಮ್ಮ ಯೋಜನೆಯನ್ನು ವ್ಯರ್ಥಹೋಗಗೊಡಬೇಕೇ? ಎಂದು ಕುಣಕ್ಯಾನನ್ನು ಕರೆದು ಇದೀಗ ನೌಕೆಯಲ್ಲಿ ಕುಳಿತುಕೊಂಡೆನು. ಇನ್ನು ನೌಕೆ ಸಾಗುವದಿತ್ತು; ನೀನು ಬಂದೆ. ಮನಸ್ಸಿದ್ದರೆ ನೀನೂ ಬರಬಹುದು. ಯಾಕಂದರೆ ಇಲ್ಲಿ ನಿನಗೂ ಸ್ಥಳ ಉಳಿದಿರುವದರಿಂದ ಕರೆದೆನು. ಸ್ಥಳವೇ ಇಲ್ಲದಿದ್ದರೆ ನನ್ನ ಆಗ್ರಹವಿರಲಿಲ್ಲ; ಮತ್ತೆ ನಿನ್ನ ಇಚ್ಛೆ ಇಲ್ಲದಿದ್ದರೂ ನನ್ನ ಬಲುಮೆಯಿಲ್ಲ ಕಂಡೆಯಾ?"

ತಾವಿಬ್ಬರೇ ಹೋಗಬೇಕೆಂದು ಮಾಡಿದ ನಿರ್ಧರವು ಎಲ್ಲಿಗೆ ಬಂದಿತಲ್ಲ, ಎಂದು ಥಾಕಲ್ಯಾನು ನೊಂದುಕೊಂಡನು. 'ಕುಳಿತುಕೊಳ್ಳಲು ಸ್ಥಳವಿದೆ, ಇಚ್ಛೆಯಿಲ್ಲ ದಿದ್ದರೆ ಆಗ್ರಹವಿಲ್ಲ' ಮೊದಲಾದ ಮಾತುಗಳಂತೂ ಅವನಿಗೆ ಚೆನ್ನಾಗಿ ನಟ್ಟವು. ಈ ನಗೆಗೇಡುತನದಿಂದ ಮನಸ್ಸಿನ ಮೇಲಾದ ಪರಿಣಾಮವನ್ನು ಹೊರಗೆ ಹಾಕದೆ ಸುಳ್ಳು ನಗೆ ತಂದುಕೊಂಡು ಅವನು :—"ಛೆ! ನೀನು ಕರೆದ ಮೇಲೆ ನಾನು ಬಾರ ದಿರುವೆನೇ? ಇಷ್ಟಾಗಿ ನಾವಿಬ್ಬರೇ ನೌಕಾವಿಹಾರಕ್ಕೆ ಹೊರಡಬೇಕೆಂದು ಮೊದಲೇ ನಿರ್ಧರ ಮಾಡಿರಲಿಲ್ಲವೆ? ಆದರೆ ಕುಣಕ್ಯಾನೊಬ್ಬನು ಬಂದನು. ಬರಲೊಲ್ಲನೇಕೆ. ಅವನೇನೂ ನಮಗೆ ಪರಕೀಯನಲ್ಲ. ನನಗೆ ಗೆಳೆಯನು, ನಿನಗೂ ಪರಿಚಿತನು."

"ಥಾಕಲ್ಯಾ, ನಿನ್ನ ಮಾತು ನಿಜ. ಕುಣಕ್ಯಾನು ಪರಕೀಯನೆಂದು ನಿನ್ನಂತೆ ನಾನೂ ತಿಳಿದಿಲ್ಲ. ಅವನು ನನಗೂ ಸ್ನೇಹಿತನೇ ಇರುವನು."

ರತನೆಯ ಈ ಮಾತುಗಳು ಥಾಕಲ್ಯಾನಿಗೆ ಮತ್ತಿಷ್ಟು ನಟ್ಟವು. ಅವನು ನೌಕೆಯನ್ನೇರಿ ಕುಳಿತುಕೊಳ್ಳಲು ಸ್ಥಳ ನೋಡಿದನು. ಒಂದು ಹಲಗೆಯ ಮೇಲೆ ಕುಣಕ್ಯಾ ರತನೆಯರು ಎದುರು ಬದಿರು ಕುಳಿತಿದ್ದರು. ಇನ್ನೊಂದು ಹಲಗೆಯು ರತನೆಯ ಬೆನ್ನ ಹಿಂದೆ ಇತ್ತು. ಅಲ್ಲಿ ಥಾಕಲ್ಯಾನಿಗೆ ಕುಳಿತುಕೊಳ್ಳಲು ಸ್ಥಳವಿದ್ದಿತು. ಅವನು ನಿರ್ವಾಹವಿಲ್ಲದೆ ಆ ಹಲಗೆಯ ಮೇಲೆಯೇ ಕುಳಿತನು. ರತನೆಯ ಬೆನ್ನ ಕಡೆಗೆ ಅವನ ಮುಖವಾಯಿತು. ಎದುರು ಬದರು ಕುಳಿತ ರತನೆ ಹಾಗು ಕುಣಕ್ಯಾ ಇವರು ನಗುತ್ತ ಕೆಲೆಯುತ್ತ ಮಾತಾಡತೊಡಗಿದ್ದುದನ್ನು ನೋಡಿ ಥಾಕಲ್ಯಾನ ಹೊಟ್ಟೆಯಲ್ಲಿ ಕಾರ ಕಲಿಸಿದಂತಾಯಿತು. ರತನೆಯ ಬೆನ್ನ ಹಿಂದೆ ಕುಳಿತ ಅವನ

ಮನಸ್ಸಿನಲ್ಲಿಯ ಹುರುಪೇ ಮಾಯವಾಗಿ ಪೆಚ್ಚು ಮೋರೆ ಮಾಡಿಕೊಂಡು ಸ್ವಸ್ಥವಾಗಿ ಕುಳಿತನು. ಅವನಿಗೆ ತನ್ನ ಆಯುಷ್ಯದಲ್ಲಿ ಇಂತಹ ಮಾನಗೇಡು ಪ್ರಸಂಗವು ಇಂದೇ ಮೊದಲು ಬಂದೊದಗಿದ್ದರಿಂದ ಅವನ ಮನಸ್ಸು ಅತ್ಯಂತ ಉದ್ವಿಗ್ನತೆ ಹೊಂದಿತು. ರತನೆ-ಕುಣಕ್ಯಾರಲ್ಲಿ ವಿನೋದದ ಮಾತು-ಕಥೆಗಳೂ, ನಗುವದೂ, ಕೆಲೆಯುವದೂ ನಡೆದೇ ಇತ್ತು. ಕೆಲವು ವೇಳೆ ಮಾತು ನಡೆದ ಮೇಲೆ ರತನೆಯು ತನ್ನ ಅನುಚರನಾದ ಮಾಣಕ್ಯಾನಿಗೆ:—".ಮಾಣಕ್ಯಾ, ಕೆಲಸದ ವೇಳೆಯಲ್ಲಿ ನೀನು ಸುಮ್ಮಸುಮ್ಮನೆ ಗಂಟಲು ಹರಿಯುವಂತೆ ಕೂಗಿ ಹಾಡುತ್ತಿರುವೆ. ಈಗ ಒಂದು ಹಾಡು ಹಾಡು ನೋಡುವಾ. ನಾವು ಹುಟ್ಟು ಹಾಕುವೆವು. ನಮ್ಮ ಕೈಯು ಕೆಲದಲ್ಲಿ ತೊಡಗಿದರೆ ನಿನ್ನ ಬಾಯಿಯೂ ಕೆಲಸ ಮಾಡಲಿ."

"ಅವ್ವಾ, ನಾವೇನು ದಿನಾಲು ಹಾಡುತ್ತೇವೆ. ನಮ್ಮ ಹಾಡುಗಳನ್ನು ನೀನು ಕೇಳೀ ಕೇಳುತ್ತೀ. ನಿನ್ನೆದುರಿನಲ್ಲಿ ಕುಳಿತ ಕುಣಿಕೆಪ್ಪನು ನಮ್ಮ ನಾಡಿನವನಲ್ಲ; ಎರಡನೆಯ ನಾಡಿನವರ ಬಾಯ ಹಾಡು ಕೇಳುವದು ಸೊಗಸಲ್ಲವೆ ತಾಯೀ? ಹೇಳು ತಾಯಿ, ಇವನಿಗೆ ನೀನೇ ಹೇಳು ನಾವು ಹೇಳಿದರೆ ಕೇಳುವದಿಲ್ಲ. ಇವನಿಗೆ ನಮ್ಮ ದಾಕ್ಷಿಣ್ಯವೇನು? ಅಕ್ಕಸಾಲಿಗನೇ ಮುರುವು ಚುಚ್ಚಬೇಕು. ನೀನು ಹೇಳು; ಅವನು ಕೂಡಲೆ ಬಾಯ ಬಿಡುವನು. ನಾವು ಹಾಡ ಹೇಳಿದರೆ ಇವನು ಹಾಡುವದಿಲ್ಲ. ತಾಯೀ? ನಮಗೆ ಎಲ್ಲರ ಮರ್ಮವು ಗೊತ್ತು. ಹೌದಲ್ಲೋ ಕುಣಿಕೆಪ್ಪಾ?"

"ಮಾಣಕ್ಯಾ, ನಾನು ಹಾಡಲಿಕ್ಕೆ ಒಲ್ಲೆನೆನ್ನುವದಿಲ್ಲ. ನಿಮ್ಮ ನಾವಿಕರ ಹಾಡು ನನಗೆ ಗೊತ್ತಿಲ್ಲ."

"ನೀನು ಹೇಳು ತಾಯೀ, ಬೇಕಾದ ಹಾಡು ಹಾಡಲಿ. ಅಂಬಿಗರ ಒರಟು ಗಾನವೇನು ದಿನಾಲು ಕೇಳುತ್ತೀ. ನಮ್ಮ ಬಾಯಿಂದ ಹೇಳಿದರೆ ಇವನು ಹಾಡುವದಿಲ್ಲ. ನಮಗೂ ನಿಮಗೂ ಬಹಳ ಅಂತರ. ನಿನ್ನ ಬಾಯಿಂದ ಹಾಡೆಂದು ಹೇಳು. ಹೇಳಿ ನೋಡು, ಹೇಗೆ ಹಾಡುವನು?"

"ಮಾಣಕ್ಯಾ, ನಾನು ಹಾಡು ಕಲಿತಿಲ್ಲ. ಅಂಬಿಗರಾದ ನೀವು ಚಿಕ್ಕಂದಿನಿಂದಲೂ ಗಾಯನದ ಅಭ್ಯಾಸ ಮಾಡುತ್ತಿರುತ್ತೀರಿ. ನಿಮ್ಮ ಅಂಬಿಗರ ಗಾಯನ ನನಗೆ ಬಾರದು. ಉಳಿದ ಹಾಡುಗಳಲ್ಲಾದರೂ ನನಗೆ ಗತಿಯಿಲ್ಲ."

"ಹಾಡು ಹಾಡಲಿಕ್ಕೆ ಕಲಿಯದೆ ಅಂಬಿಗ ವಿದ್ಯೆಯನ್ನೇಕೆ ಕಲಿತೆ? ನಾವು ಮೊದಲು ಹಾಡು ಕಲಿಯುತ್ತೇವೆ, ಇಲ್ಲವೆ ಹಾಡು ಕಲಿಯುತ್ತಲೆ ಅಂಬಿಗರ ವಿದ್ಯೆಯ ಅಭ್ಯಾಸ ಮಾಡುತ್ತೇವೆ. ನಿನಗೆ ಯಾವ ಹಾಡು ಬರುವವೊ ಅವನ್ನೇ ಹಾಡು. ಹೇಳು ತಾಯಿ, ಇವನು ನಮ್ಮ ಮಾತು ಕೇಳಲೊಲ್ಲನು."

"ಕುಣಕ್ಯಾ, ಮಾಣಕ್ಯಾನ ಆತುರ ಬಹಳವಾಗಿದೆ. ಒಂದು ಹಾಡು ಹಾಡು; ನಿನಗೆ ಬರುವಂಥವನ್ನೇ ಹಾಡು."

ರತನೆಯು ಹೀಗೆ ನುಡಿದ ಮೇಲೆ ಕುಣಕ್ಯಾನು ಅವಳನ್ನು ಕುರಿತು:— "ರತನೆ, ನಾನು ಚಿಕ್ಕಂದಿನಿಂದ ಗೋಸಾವಿಯ ಬಳಿಯಲ್ಲಿದ್ದವನು ನನಗೆ ದೇವರ ನಾಮಸಂಕೀರ್ತನೆ ಭಜನೆಗಳ ಹೊರತು ಬೇರೆ ಯಾವ ಹಾಡೂ ಬರುವದಿಲ್ಲ. ಆ ಹಾಡುಗಳನ್ನಾದರೂ ನಿಮ್ಮ ಭಾಷೆಯಲ್ಲಿ ಹೇಳಲಿಕ್ಕೆ ಬರುವದಿಲ್ಲ. ನಾನು ಕಲಿತ ಹಾಡು ಹಿಂದುಸ್ತಾನಿ ಭಾಷೆಯವು. ನಾನು ನನ್ನ ಗುರುಗಳೊಡನೆ ಉತ್ತರ ಹಿಂದುಸ್ತಾನದಲ್ಲಿ ಬಹಳ ದಿನ ವಾಸವಾಗಿದ್ದೆನಾದ್ದರಿಂದ ನಾನು ಹಿಂದಿ ಭಾಷೆಯಲ್ಲಿಯ ಭಜನಗಳನ್ನೇ ಕಲಿತಿರುವೆನು."

"ಒಳ್ಳೇದು. ಅವನ್ನೇ ಅನ್ನು. ಮೊದಲು ಪದಗಳನ್ನು ಹೇಳು; ನಮಗೆ ಅರ್ಥವಾಗದಿದ್ದರೆ ಹಿಂದಿನಿಂದ ಅರ್ಥ ಹೇಳು."

"ಒಳ್ಳೇದು ಹಾಡುತ್ತೇನೆ. ರತನೆ, ನಿನಗೆ ಭಜನೆಗಳ ಅರ್ಥವಾಗುವದೋ ಹೇಗೆ ಚನ್ನಾಗಿ ಲಕ್ಷ್ಯಗೊಟ್ಟು ಕೇಳು."

ಕುಣಕ್ಯಾನು ಹೀಗೆ ಹೇಳಿ, ಭಜನೆಯನ್ನು ತನ್ನ ಮಧುರವಾದ ಕಂಠದಿಂದ ಅನ್ನತೊಡಗಿದನು. ಅವನ ಪದ್ಯಗಳ ಅರ್ಥವು ರತನೆಗೆ ಆಗಲಿಲ್ಲ. ಆದರೂ ಪದ್ಯಗಳ ದಾಟಿ ಹಾಗು ಕುಣಕ್ಯಾನ ಧ್ವನಿ ಮೊದಲಾದವುಗಳಿಂದ ಅವಳು ಸಂತೋಷಬಟ್ಟಳು. ಅನಂತರದಲ್ಲಿ ರತನೆಯ ಹೇಳಿಕೆಯ ಮೇರೆಗೆ ಕುಣಕ್ಯಾನು ಕೋಳಿ ಭಾಷೆಯಲ್ಲಿ ಭಜನೆಯ ಅರ್ಥ ಹೇಳಿದನು. ಭಜನೆಗಳ ಭಾವವು ಮನೋಹರವಾಗಿಯೂ ಭಕ್ತಿಜನಕವಾಗಿಯೂ ಇದ್ದುದರಿಂದ ರತನೆಯು ಮತ್ತಿಷ್ಟು ಸಂಭ್ರಮಗೊಂಡಳು. ಆಗ ಅವಳು: —"ನಮ್ಮ ಅಂಬಿಗರ ಹಾಡುಗಳಲ್ಲಿ ಕೆಲವುಗಳಿಗೆ ಅರ್ಥವೇ ಇರುವದಿಲ್ಲ. ಬರೇ ಹಾವಭಾವಗಳಿಂದಲೇ ಹಾಡು ಮುಗಿಯುವದು, ಕೆಲವು ಮನೆಯಲ್ಲಿ ನಡೆಯುವ ಗಂಡ-ಹೆಂಡಿರ, ತಂದೆ-ಮಕ್ಕಳ ಮಾತುಗಳಿಂದ ಕೂಡಿರುವವು; ಕೆಲವು ಹಾಡುಗಳು ಬರೀ ಬಡಿದಾಟದವಿರುವವು. ಹೀಗೆ ಭಕ್ತಿ ಹುಟ್ಟುವಂತಹ ಹಾಡುಗಳು ನಮ್ಮ ಕೋಳಿಜಾತಿಯವರಿಗೇ ಗೊತ್ತಿಲ್ಲ. ಕುಣಕ್ಯಾ, ನಿನ್ನ ಹಾಡುಗಳು ಮಾತ್ರ ಬಹಳೇ ಚೆನ್ನಾಗಿರುವವು. ಕೂಡಿದಾಗ ಇನ್ನೊಮ್ಮೆ ಹಾಡಿ ತೋರಿಸುವೆಯಾ?"

"ರತನೇ, ನೀನು ಹಾಡ ಹೇಳಿದರೆ ಹಾಡದೆ ಇರಲಾದೀತೇ?"

"ಅವ್ವಾ, ಹೇಗಿದೆ ನೋಡು? ಅವ್ವನು ಹಾಡ ಹೇಳಬೇಕು, ಅಪ್ಪನು ಹಾಡಬೇಕು. ಅಂದರೇ ಚಂದ! ನಾವು ಹೇಳಿದರೆ ಇವನು ಬಾಯಿ ಬಿಟ್ಟನೇ ತಾಯಿ?"

"ನನ್ನ ಹಾಡು ಕೇಳಿದೆ: ನೀನು ಒಂದು ಹಾಡು ನೋಡೋಣ ?" ಎಂದು ಕುಣಕ್ಯಾನು ಮಾಣಕ್ಯಾನಿಗೆ ಹೇಳಿದನು.

"ನಮ್ಮ ಹಾಡನ್ನೇನು ಕೇಳುವೆ? ಈ ತಾಯಿ ಹಾಡು ಕೇಳು. ರತನೆವ್ವಾ, ನೀನು ಹಾಡು. ನಿನ್ನ ಸವಿಯಾದ ದನಿಯ ಹಾಡು ಕೇಳಿ ಮೊದಲು ಈ ಕುಣಿಕೆಪ್ಪನು ಸಂತೋಷಪಡಲಿ."

"ಮಾಣಕ್ಯಾ, ಚಲೋ ಮಾತು ಹೇಳಿದೆ. ರತನೆಯ ಹಾಡು ಕೇಳಬೇಕೆಂದು ನನ್ನ ಮನಸ್ಸು ಹರಿಯುತ್ತಲಿದೆ."

"ನಾವು ಸುಳ್ಳು ಹೇಳುವವಿಲ್ಲ. ನಿನ್ನ ಮನಸ್ಸಿನಲ್ಲಿದ್ದದ್ದನ್ನೇ ಹೇಳಿದೆವಲ್ಲವೆ?"

"ರತನೆ, ಹಾಡು. ನಿನ್ನೊಡನೆ ನೌಕಾವಿಹಾರ ಮಾಡುವ ಪ್ರಸಂಗವೊದಗಿದ್ದು ಇದೇ ಮೊದಲು." ಎಂದು ಕುಣಕ್ಯಾನು ಮಾತಾಡುತ್ತಿರುವಾಗ ಮಾಣಕ್ಯಾನು ಮಧ್ಯವಲ್ಲಿಯೇ:—"ರತನೆವ್ವನ ಹಾಡು ಕೇಳುವ ಪ್ರಸಂಗವೊದಗಿದ್ದೂ ಇದೇ ಮೊದಲು. ನಾವು ಸುಳ್ಳು ಹೇಳುವದಿಲ್ಲ. ಹೌದಲ್ಲೋ ಕುಣಿಕೆಪ್ಪ? ಗಂಡಸರಿಗಿಂತ ಹೆಂಗಸರಿಗೇ ಹಾಡು ಬಹಳ ಬರುತ್ತಿರುವವು."

"ಗಂಡಸರಿಗಿಂತ ಹೆಂಗಸರಿಗೆ ಹಾಡು ಬಹಳ ಬರುತ್ತಿರುವದು ನಿಜವಿರಬಹುದು. ಆದರೂ ಇದು ವರೆಗೆ ನಾನು ಹೆಂಗಸರ ಮುಖದಿಂದ ಹಾಡು ಕೇಳಿಲ್ಲ" ಎಂದು ಕುಣಕ್ಯಾನು ಹೇಳಿದನು.

"ಇಂದು ಕೇಳು. ಹೆಂಗಸರ ಕಂಠವು ಗಂಡಸರಿಗಿಂತ ಕೋಮಲವಿರುವದೆಂಬದನ್ನು ಇಂದು ಮನನ ಮಾಡಿಕೋ" ಎಂದು ಮಾಣಕ್ಯಾನು ಹೇಳಿದನು.

ರತನೆಯು ಹಾಡು ಪ್ರಾರಂಭಿಸಿದಳು:—

"ಹಾಕಾರ ಹಾಕಾರ ರೇ ವ್ಹಲಕಾರಾ । ಹೀನಾರ ಚಾಲಲೀ ಮ್ಹಾಯೇರಾ ।
ಮ್ಹಾಯೇರಾಸನ ಆಣೀನ ಮಿ । ಫಳ ಫುಲ ನಾವೀ ನಾಮೀ ।
ಪಾರವ್ಯಾ ನಗರೀ ಬೋಲಾವಣ । ಪಂತುನ ಲಾವಿನ ಮೀ ಪಾವ್ಹಣಾ ।
ಚಢಲೀ ಹಂಡೀ ಚುಲೀವರೀ । ಭರಲೀಯಾ ತುಪಾನ ಘಾಘರಿ ।
ಖಾವೂನ ಪಿವೂನ ಫುಗಲ್ಯಾವರೀ । ಯೇಯೀನ ಪರತೂನ ತುಝ್ಯಾಘರೀ
ಹಾಕಾರ ಹಾಕಾರ ರೇ ಭರತಾರಾ ॥"

ರತನೆಯು ಹಾಡಿದ ಮೇಲೆ ಮಾಣಕ್ಯಾನು ಒಂದು ಹಾಡು ಹಾಡಿದನು. ಮತ್ತೆ ರತನೆಯೊಂದು ಹಾಡಿದಳು. ಹೀಗೆ ಅವರು ಕೆಲವು ಹೊತ್ತು ಹಾಡುತ್ತ ಮಾತಾಡುತ್ತ ನಗುತ್ತ ಕೆಲೆಯುತ್ತ ವೇಳೆಗಳೆದರು. ಆ ಬೆಳದಿಂಗಳ ರಾತ್ರಿಯು ನೌಕಾವಿಹಾರವು ಅವರಿಗೆ ಎಂದೂ ಇಲ್ಲದಂತಹ ಆನಂದವನ್ನುಂಟು ಮಾಡಿತು.

ಇಷ್ಟು ವೇಳೆಯಾದರೂ ಧಾಕಲ್ಯಾನು ಇರುವನೋ ಸತ್ತಿರುವನೋ ಎಂಬುದನ್ನು ಕೇಳುವವರೇ ಗತಿಯಿದ್ದಿಲ್ಲ. ಧಾಕಲ್ಯಾನ ಅವಸ್ಥೆಯು ಇದ್ದರೂ ಸತ್ತವರಂತೆ ಆಗಿತ್ತು. ಇಂಥ ಸ್ಥಿತಿಯಲ್ಲಿಯೇ ಎಷ್ಟು ವೇಳೆ ಇರಬೇಕಾಗುತ್ತಿತ್ತೊ ಏನೋ! ಆ ಅವಸ್ಥೆಯು ಅಸಹನೀಯವಾಗಿ ಧಾಕಲ್ಯಾನು ಬೇಸರಗೊಂಡ ದನಿಯಿಂದ:—"ನಾನು ಇಂದು ಇಲ್ಲಿಗೆ ಬಂದದ್ದೇ ಹೆಡ್ಡತನವಾಯಿತು" ಎಂದು ನುಡಿದು, ನಿಟ್ಟುಸಿರು ಬಿಟ್ಟನು.

ಧಾಕಲ್ಯಾನ ವಿಷಾದವಾಣಿಯನ್ನು ಕೇಳಿ ರತನೆಗೆ ಕನಿಕರವೆನಿಸಿತು. ಅವಳು ಅವನನ್ನು ಸಮಾಧಾನ ಪಡಿಸುವ ಉದ್ದೇಶದಿಂದ:—"ಧಾಕಲ್ಯಾ, ಕುಣಕ್ಯಾನ ಗಾಯನದ ಭರದಲ್ಲಿ ನಿನ್ನನ್ನು ಮರೆತಿದ್ದೆವು. ನೀನೂ ಒಂದು ಹಾಡು ಹಾಡು."

ಧಾಕಲ್ಯಾನಿಗೆ ಇದ್ದುದರಲ್ಲಿಯೇ ಸಮಾಧಾನವೆನಿಸಿತು. ಅವನು ಅಂಬಿಗರ ಕಾವ್ಯಗಾನ ಮಾಡಿದನು. ರತನೆಯು ಧಾಕಲ್ಯಾನ ಗಾನವನ್ನು ನಿಮಿತ್ತಕ್ಕೆ ಹೊಗಳಿದಳು. ನೌಕಾವಿಹಾರ ಮುಗಿದ ಮೇಲೆ ನೌಕೆಯು ದಂಡೆಗೆ ಬಂತು. ಎಲ್ಲರೂ ಉಪಾಹಾರ ತೀರಿಸಿ ತಮ್ಮ ತಮ್ಮ ನಿವಾಸಕ್ಕೆ ತೆರಳಿದರು.

ಮತ್ತೊಮ್ಮೆ ಧಾಕಲ್ಯಾನ ಮಾನ ಕಳೆಯುವಂತಹ ಮತ್ತೊಂದು ಪ್ರಸಂಗವು ಘಟಿಸಿತು. ಸರಖೇಲನ ಆಜ್ಞೆಯ ಮೇರೆಗೆ ಕುಣಕ್ಯಾನು ನೌಕಾವಿದ್ಯೆಯಲ್ಲಿ ಪ್ರವೇಶ ಮಾಡಿದ ಬಗ್ಗೆ ಸಮಾರಂಭ ಮಾಡಬೇಕಾಗಿದ್ದಿತು. ಭಾಗೂಜಿಯು ತನ್ನ ಮಗನಾದ ಧಾಕಲ್ಯಾನ ಪ್ರತಿಷ್ಠೆಗಾಗಿ ಈ ಕಾರ್ಯವನ್ನು ಅವನ ಮೇಲೆ ವಹಿಸಿದನು. ಅರ್ಥಾತ್ ಧಾಕಲ್ಯಾನಿಗೆ ಗುರುಸ್ಥಾನವು ಪ್ರಾಪ್ತವಾಯಿತು. ಈ ಪ್ರಸಂಗದಿಂದ ಅವನು ಉಬ್ಬಿದನು. ಆಗ ಅವನು ಕುಣಕ್ಯಾನಿಗೆ:—"ಕುಣಕ್ಯಾ, ನಾಳೆ ನೀನು ಗುರುಕಾಣಿಕೆಗಾಗಿ ಟೆಂಗಿನಕಾಯಿ-ಬಟ್ಟೆಗಳನ್ನು ತೆಗೆದುಕೊಂಡು ಬಾ. ನಾನು ನಿನ್ನ ಕೈಯಿಂದ ಸಮುದ್ರ ಪೂಜೆ ಮಾಡಿಸುವೆನು. ನೀನು ಬರುವಾಗ ಜೊತೆಗೆ ನಿಮ್ಮ ಶಾಸ್ತ್ರಿಗಳನ್ನೂ ಕರೆದುಕೊಂಡು ಬಾ."

"ಸಮುದ್ರ ಪೂಜೆಯಾದ ಮೇಲೆ ಗುರುಪೂಜೆಯೂ ಆಗಬೇಕಷ್ಟೆ?" ಕುಣಕ್ಯಾನು ಪ್ರಶ್ನೆ ಮಾಡಿದನು.

"ಅದು ತಾನಾಗಿ ಆಗಿಯೇ ಆಗುವದು. ಇಂಥ ಸಮಾರಂಭದಲ್ಲಿ ಗುರುಪೂಜೆಯಾಗದಿದ್ದರೆ ಹೇಗೆ?"

"ನಾನೂ ಅದನ್ನೇ ಕೇಳಿದೆನು. ವಿಧ್ಯುಕ್ತವಾಗಿ ಎಲ್ಲ ಕೆಲಸಗಳೂ ನೆರವೇರಬೇಕು. ಹಾಗೆ ಮಾಡದಿದ್ದರೆ ನನ್ನ ವಿದ್ಯೆಯು ವ್ಯರ್ಥವಾದೀತು."

ಕುಣಕ್ಯಾನಿಗೆ ಧಾಕಲ್ಯಾನೆಂಬ ಬಹಿರಂಗ ಸ್ನೇಹಿಯ ಹೊರತು ಡಾಮ್ಯಾ ಸಖ್ಯಾ ಎಂಬ ಅಂತರಂಗ ಸ್ನೇಹಿಗಳೂ ಇದ್ದರು. ಕುಣಕ್ಯಾನು ಧಾಕಲ್ಯಾನ

ಗುರುಪೂಜೆಯ ಸಂಗತಿಯನ್ನು ಅವರಿಗೆ ತಿಳಿಸಿದನು. "ಒಳ್ಳೇದು. ನಾಳೆ ಗುರು ಪೂಜೆಯ ಸಮಾರಂಭವನ್ನು ಚೆನ್ನಾಗಿ ನೆರವೇರಿಸೋಣ. ಸರಖೇಲನು ಭಾಗೂಜಿ ಯನ್ನೂ ಧಾಕಲ್ಯಾನನ್ನೂ ಬಹಳವಾಗಿ ಏರಿಸಿರುವನು. ಒಮ್ಮೆ ಅವರ ಸೊಕ್ಕು ಇಳಿಸಬೇಕು."

ಮೂರನೆಯ ದಿವಸ ಸಮುದ್ರಪೂಜೆ ಗುರುಪೂಜೆಯ ಸಮಾರಂಭವು ಪ್ರಾರಂಭ ವಾಯಿತು. ಒಂದು ನೌಕೆಯಲ್ಲಿಯೇ ಪೂಜೆಯ ಕೆಲಸ ಸಾಗಿತು ಕುಣಕ್ಯಾ, ಡಾಮ್ಯಾ, ಸಖ್ಯಾ, ಶಾಸ್ತ್ರಿಬುವಾ ಮೊದಲಾದವರ ಸಮಾರಂಭದಲ್ಲಿ ಭಾಗವಹಿಸಿದ್ದರು. ಶಾಸ್ತ್ರಿಬುವಾನು ನೌಕೆಯ ಪೂಜೆ ಮಾಡಿದನು. ಸಮುದ್ರ ಪೂಜೆಯೂ ಆಯಿತು. ಗುರುಪೂಜೆ ನಡೆಯಿತು. ಕುಣಕ್ಯಾನು ಧಾಕಲ್ಯಾನ ತಲೆಯ ಮೇಲೆ ಗಂಧ-ಪುಷ್ಪ ಗಳನ್ನು ಏರಿಸಿದನು. ಹೊಸ ಮೋತರ, ಹೊಸ ಅಂಗಿ, ಹೊಸ ಕಂಬಳಿ ಮೊದ ಲಾದವುಗಳಿಂದ ಸಿಂಗಾರಾದ ಧಾಕಲ್ಯಾನು ತನ್ನ ಪೂಜೆ ನಡೆದ ಕೂಡಲೆ ಹಿರಿ ಹಿರಿ ಹಿಗ್ಗತೊಡಗಿದನು. ಆಗ ಸಖ್ಯಾನು—"ಕುಣಕ್ಯಾ, ಟೆಂಗಿನಕಾಯಿ ತರಲಿಲ್ಲವಲ್ಲ ಗುರುವಿನ ತಲೆಯ ಮೇಲೆ ಒಡೆಯಲಿಕ್ಕೆ?" ಎಂದು ಕೇಳಿದನು.

"ನಿನ್ನೇನೋ ಧಾಕಲ್ಯಾನು ಹೇಳಿದ್ದನು; ಆದರೆ ನಾನು ಮರೆತೆನು."

"ಟೆಂಗಿನಕಾಯಿಯಿಲ್ಲದಿದ್ದರೂ ಎರಡು ಅಡಿಕೆ ಬೇಡವೆ ಗುರುವಿಗೆ? ಎಂಥ ಕಂಗಾಲ ಶಿಷ್ಯನೋ ನೀನು?" ಎಂದು ಸಖ್ಯಾನು ಹೇಳುವಸ್ವರದಲ್ಲಿ ಮೇಲೆಯೆ ಇದ್ದ ಅಡಿಕೆಯ ಗಿಡದಿಂದ ಒಂದು ಅಡಿಕೆಯ ಗೊಂಚಲವು ಧಾಕಲ್ಯಾನ ಬೊಕ್ಕ ತಲೆಯ ಮೇಲೆ ಬಿತ್ತು. ಆಗ ಎಲ್ಲರೂ ನಕ್ಕರು.

"ಧಾಕಲ್ಯಾ ಗುರುವಿಗೆ ಒಂದಲ್ಲ, ನೂರಾರು ಅಡಿಕೆಗಳಿದ್ದ ಒಂದು ಗೊಂಚಲ ವನ್ನೇ ಕುಣಕ್ಯಾನ ಸಲುವಾಗಿ ಅರ್ಪಿಸಿರುವೆನು." ಎಂದು ಡಾಮ್ಯಾನು ಅಡಿಕೆಯ ಗಿಡದ ಮೇಲೆ ಕುಳಿತು ಉತ್ತರ ಕೊಡಲು, ಎಲ್ಲರೂ ಚಪ್ಪಾಳೆ ಬಾರಿಸಿ ಮತ್ತೊಮ್ಮೆ ನಕ್ಕರು. ಧಾಕಲ್ಯಾನು ಮೋರೆ ಕೆಳಗೆ ಮಾಡಿ ತಲೆಯನ್ನು ತಿಕ್ಕಿಕೊಳ್ಳತೊಡಗಿದನು.

"ಗುರುದಕ್ಷಿಣೆ ತಲೆಗೆ ಚೆನ್ನಾಗಿ ಮುಟ್ಟಿತೆಂಬಂತೆ ತೋರುವದು" ಎಂದು ಸಖ್ಯಾನು ನಗುತ್ತಲೆ ನುಡಿಯಲು, ಧಾಕಲ್ಯಾನಿಗೆ ಕಸಪಿಸಿಯಾಯಿತು, ಆದರೆ ಅವನು ಏನೂ ಮಾತಾಡಲಿಲ್ಲ.

ಗುರುಪೂಜೆಯು ನೌಕೆಯಲ್ಲಿ ಒಂದು ಹಲಗೆಯ ಮೇಲೆ ಸಾಗಿತ್ತು. ಆ ಹಲ ಗೆಯ ಒಂದು ಕಡೆಗೆ ಧಾಕಲ್ಯಾನೂ ಮತ್ತೊಂದು ಕಡೆಗೆ ಸಖ್ಯಾನೂ ಕುಳಿತಿದ್ದರು. ಆ ಹಲಗೆಯು ತೂಕದ ಮೇಲೆ ಇಡಲ್ಪಟ್ಟಿತ್ತು. ಧಾಕಲ್ಯಾನು ಇನ್ನೂ ತನ್ನ ತಲೆ ತಿಕ್ಕುತ್ತಿದ್ದುದನ್ನು ನೋಡಿ ಸಖ್ಯಾನು:—"ಧಾಕಲ್ಯಾ, ತಲೆಗೆ ನೋವು ಬಹಳ

ವಾಗಿರಬಹುದಲ್ಲವೆ?" ಎಂದು ನುಡಿದು, ತಾನು ಕುಳಿತ ಹಲಗೆಯಿಂದ ನೌಕೆಯಲ್ಲಿ ಜಿಗಿದನು. ಕೂಡಲೆ ಧಾಕಲ್ಯಾನು ಹಲಗೆ ಸಹಿತವಾಗಿ ನೌಕೆಯಿಂದ ಸಮುದ್ರದಲ್ಲಿ ಬಿದ್ದನು. ಎಲ್ಲರೂ ಖೊಳ್ಳನೆ ನಗತೊಡಗಿದರು. ಇದೇ ಸಮಯದಲ್ಲಿ ಕರ್ಮಧರ್ಮ ಸಂಯೋಗದಿಂದ ರತನೆಯ ಆಗಮನವು ಏಕಾಯಿತೊ? ಯಾಕೆ ಆಯಿತೋ ಏನೋ ಆದದ್ದು ಮಾತ್ರ ನಿಜ.

ಧಾಕಲ್ಯಾನು ಈಸುತ್ತ ನೌಕೆಯ ಬಳಿಗೆ ಬಂದು, ಅದನ್ನು ಹಿಡಿದು ಏರುತ್ತಿದ್ದನು. ಆಗ ರತನೆಯು:—"ಇದೇನು? ನೀವೆಲ್ಲರೂ ನೌಕೆಯಲ್ಲಿ, ಧಾಕಲ್ಯಾನೊಬ್ಬನೇ ನೀರೊಳಗೆ! ಹೀಗೇಕೆ? ನೀರಲ್ಲಿ ಜಿಗಿಯಬೇಕೆಂಬ ಹುರುಪು ಹುಟ್ಟಿತೇನು ಅವನಿಗೆ? ಓಹೋ! ಉಡುಪು ಸಮೇತನಾಗಿ ಜಿಗಿದಿರುವನಲ್ಲ! ಶಾಬಾಸ!"

"ಏನೇ ರತನೆ, ನಿನಗೆ ಏನೂ ಗೊತ್ತಿಲ್ಲವೆಂಬಂತೆ ತೋರುವದು. ಸರಖೇಲರ ಆಜ್ಞೆಯ ಮೇರೆಗೆ ಧಾಕಲ್ಯಾನು ಕುಣಕ್ಯಾನ ಗುರುವಾಗಿದ್ದಾನೆ. ಇಂದು ನೌಕಾಪ್ರವೇಶ ಸಮಾರಂಭವು. ಎಂಥ ಕಂಗಾಲ ಶಿಷ್ಯನಿವನು ಕುಣಕ್ಯಾ? ಗುರುಪೂಜೆಗೆ ಟೆಂಗಿನಕಾಯಿಯಿಲ್ಲ; ಅಡಿಕೆಯಿಲ್ಲ" ಎಂದು ಡಾಮ್ಯಾನು ನಗುತ್ತ ಹೇಳಿ:—"ಕಾಯಿಯಿಲ್ಲದಿದ್ದರೂ ಹೇರಳ ಅಡಿಕೆ ಬೇಡವೆ? ಅದಕ್ಕಾಗಿ ಒಂದು ಅಡಿಕೆಯ ಗೊಂಚಲನ್ನೇ ಗುರುವಿನ ಶಿರಕ್ಕೆ ಅರ್ಪಿಸಿದೆನು."

"ಗುರುಪೂಜೆಯಾಗಬೇಕಾದರೆ ಸ್ನಾನಬೇಡವೆ? ಅದಕ್ಕೆ ಧಾಕಲ್ಯಾ ಗುರುವಿಗೆ ಸಮುದ್ರಸ್ನಾನ ಮಾಡಿಸಿದೆನು" ಎಂದು ಸಖ್ಯಾನು ನಗುತ್ತಲೆ ಹೇಳಿದನು.

"ಕುಣಕ್ಯಾನಂತಹನಿಗೆ ನೌಕೆವಿದ್ಯೆ ಕಲಿಸುವಂಥ ಗುರುವೇ ಇವನು? ಹುಟ್ಟು ಹಿಡಿಯಲು ಚನ್ನಾಗಿ ಬರುವದೋ ಇಲ್ಲವೋ! ನೌಕಾವಿದ್ಯೆ ಕಲಿಸುವ ಮೋರೆಯಿದು!" ಎಂದು ರತನೆಯು ಉಪಹಾಸದಿಂದ ನುಡಿದಳು.

ನೌಕೆಯನ್ನೇರಿ ನಿಂತ ಮೇಲೆ ಧಾಕಲ್ಯಾನು ರತನೆಯನ್ನು ಸಿಟ್ಟಿನಿಂದ ನೋಡುತ್ತ:—"ಈ ವೇಳೆಯಲ್ಲಿ ನಿನ್ನನ್ನು-ಭವಾನಿಯನ್ನು-ಯಾರು ಕರೆಯಿಸಿದರು? ನೀನು ನಿನ್ನ ಉಡಾಳತನ ಈಗಲೇ ಬಿಡುವದಿಲ್ಲ; ನಾಳೆ ಲಗ್ನವಾದ ಮೇಲೆ ಎಲ್ಲವೂ ತಿಳಿಯುವದು."

"ನನ್ನ ಉಡಾಳತನದ ಗೊಡವೆ ನಿನಗೇಕೆ? ಧಾಕಲ್ಯಾ, ನಾನು ಇಲ್ಲಿಗೆ ಬಂದದ್ದರಿಂದ ನಿನ್ನದೇನೂ ಹಾನಿಯಿಲ್ಲವಷ್ಟೇ? ನೀನು ಗುರುವಾಗಿ ಕ್ಷಣ ಸಹ ಆಗಿಲ್ಲ, 'ಸಮುದ್ರಾಸ್ತೃಪ್ಯಂತು' ಆಗುತ್ತಿದ್ದೆ. ಗುರುಪೂಜೆಯ ವಿನೋದ ನೋಡ ಬಂದರೆ ತಪ್ಪೇನು? ಲಗ್ನವಾಗದ್ದರಿಂದ ಉಡಾಳಳೆಂದು ನನಗೆ ಹೆಸರಿಟ್ಟೆ, ನಿನ್ನದಾದರೂ ಎಲ್ಲಿ ಲಗ್ನವಾಗಿದೆ? ಅಂತೆಯೇ ಈ ಬಗೆಯ ಉಡಾಳತನ ಮಾಡತೊಡಗಿರುವೆ."

"ನಾವಿಬ್ಬರೂ ಬೇಗನೆ ನಮ್ಮ ಉಡಾಳತನವನ್ನು ಬಿಟ್ಟು ಬಿಡೋಣ ತಿಳಿಯಿತೇ? ನಾವು ಉಡಾಳತನ ಬಿಡುವ ಕಾಲವೂ ಸಮೀಪದಲ್ಲಿಯೇ ಬಂದಿರಬಹುದು. ಅಲ್ಲವೇ ರತನೆ?" ಎಂದು ಥಾಕಲ್ಯಾನು ವಿಕಟಹಾಸ್ಯ ಮಾಡುತ್ತ ರತನೆಯನ್ನು ನೋಡಿ ನುಡಿದನು.

"ಶಾಬಾಸ್! 'ಸುಮುಹೂರ್ತೇ ಸಾವಧಾನಃ' ಶಾಸ್ತ್ರಿಗಳವರು ಬಳಿಯಲ್ಲಿಯೇ ಇರುವರು ಮಂಗಳಾಷ್ಟಕಕ್ಕೆ; ಆದರೆ ಅಪ್ಪಾ, ಮಾನ-ಮನ್ನಣೆಗಳು ಅನಾಯಾಸವಾಗಿ ಬೇಕುಬೇಕಾದವರಿಗೆ ದೊರೆಯುತ್ತಿರುವದಿಲ್ಲ ತಿಳಿಯಿತೇ? ನಾನು ಸಹಜವಾಗಿ ಇತ್ತ ಬಂದೆನು; ನಿನ್ನ ನಗಿಗೇಡಿತನವು ದೃಷ್ಟಿಗೆ ಬಿತ್ತು. ನೀರಲ್ಲಿ ಬಿದ್ದ ನಾವಿಕ ಪುಂಗವನ ಮೈಯಾದರೂ ಆರಲಿ. ಅನಂತರ ವೇದಿಕೆಯನ್ನೇರುವ ಸಿದ್ಧತೆಮಾಡುವಿಯಂತೆ."

ರತನೆಯು ಮಾತು ಕೇಳಿ ಶಾಸ್ತ್ರಿಗಳು ನಕ್ಕರು. ಆಗ ಅವರು ಥಾಕಲ್ಯಾನಿಗೆ. "ಥಾಕಲ್ಯಾ, ರತನೆಯು ಒಳ್ಳೆಯ ಮಾರ್ಮಿಕವಾಗಿ ಮಾತಾಡಿದಳು. ನೀವಿಬ್ಬರೂ ಸಿದ್ಧರಾಗಿ ವೇದಿಕೆಯನ್ನೇರಿದರೂ, ಮಂಗಳಾಷ್ಟಕವನ್ನನ್ನಲಿಕ್ಕೆ ನಾನು ಸಿದ್ಧನಾಗಬೇಕಲ್ಲವೆ? ನಾನು ಕುಣಕ್ಯಾನ ಸಮುದ್ರಪೂಜೆಯ ಮಂತ್ರವನ್ನನ್ನಲಿಕ್ಕೆ ಬಂದಿರುವೆನು. ಆಕಸ್ಮಿಕ ಭೆಟ್ಟಿಯಾದ ನಿಮ್ಮಂತಹ ಉಡಾಳ ಮದುಮಕ್ಕಳ ಮದುವೆಯ ಮಂಗಳಾಷ್ಟಕ ನುಡಿಯಲಿಕ್ಕೆ ಬಂದಿಲ್ಲ. ಲಗ್ನಸಂಕಲ್ಪದ ಪುಸ್ತಕವೇ ಮನೆಯಲ್ಲಿದೆ. ಏನು ಮಾಡಲಿ?" ಹೀಗೆ ನಗುತ್ತ ಹೇಳಿ, ಶಾಸ್ತ್ರಿಗಳು ಹೊರಟು ಹೋದರು.

ಅನಂತರದಲ್ಲಿ ರತನೆಯು:—"ಮದುವೆ ಮಾಡಿಸುವವರೇ ಹೋದರು ಏನು ಮಾಡಬೇಕು ಥಾಕಲ್ಯಾ? ಪ್ರಸಂಗವೊದಗಲಿ. ನಿನ್ನ ಮದುವೆಯು ಚೆನ್ನಾಗಿ ಆಗಿಯೇ ಆಗುವದು; ಆಂ?"

ಥಾಕಲ್ಯಾನು ಮೂರ್ಖನೆಂಬ ಮಾತು ಇತರರಂತೆ ಕುಣಕ್ಯಾನಿಗೂ ಗೊತ್ತಿತ್ತು. ಆದರೂ ಉಳಿದವರಂತೆ ಅಷ್ಟು ಪ್ರಕಟವಾಗಿ ಆತನ ಮನಸ್ಸಿಗೆ ಹತ್ತುವಂತೆ ಮಾತಾಡುತ್ತಿದ್ದಿಲ್ಲ. ಸರಖೇಲರ ಪ್ರೀತಿಗೊಳಗಾದ ಭಾಗೂಜಿಯ ಮಗನಾದ ಥಾಕಲ್ಯಾನ ಮನಸ್ಸು ನೋಯಿಸುವದು ಉಚಿತವಲ್ಲವೆಂಬದು ಕುಣಕ್ಯಾನಿಗೆ ಗೊತ್ತಿತ್ತು; ಆದರೆ ಆವನ ಮಾನಹಾನಿಕರವಾದ ಘಟನೆಗೆ ತನ್ನ ಮೂಕ ಸಮ್ಮತಿಯನ್ನು ಕೊಡದೆ ಇರುತ್ತಿದ್ದಿಲ್ಲ. ತನ್ನ ಸಂಗಡಿಗರು ಥಾಕಲ್ಯಾನ ಫಜೀತಿ ಮಾಡಿದ್ದು ಒಳಿತಾಯಿತೆಂದು ಕುಣಕ್ಯಾನು ತಿಳಿಯುತ್ತಿದ್ದರೂ, ತೋರಿಕೆಗಾಗಿ ಅವರ ಕೃತ್ಯಗಳನ್ನು ನಿಷೇಧಿಸಬೇಕಾಗಿತ್ತು. ಆಗ ಅವನು ಸಖ್ಯಾ ಡಾಮ್ಯಾ ಮೊದಲಾದವರಿಗೆ:—"ಯಾಕೆ ಮಕ್ಕಳಿರಾ, ಹೇಗೆ ಕಾಣುತ್ತದೆ? ನನ್ನ ಅಣ್ಣನಿಗೆ ಚೇಷ್ಟೆ ಮಾಡುವಿರಾ? ಜೋಕೆ!

ಸರಖೇಲರಿಗೆ ಈ ಸಂಗತಿ ತಿಳಿಯಿತೆಂದರೆ ನಿಮ್ಮ ಹೆಣ ಬಿದ್ದೀತು. ಥಾಕಲ್ಯಾನೆಂದರೆ ಏನೆಂದು ತಿಳಿದಿರುವಿರಿ? ಸರಖೇಲರ ಬಲಗೈಯ ಹೆಬ್ಬೆರಳು! ತಿಳಿಯಿತೆ? ಇಷ್ಟು ದಿನ ಏನಾದರೂ ನಡೆಯುತ್ತಿತ್ತು. ಇಂದು ಮಾತ್ರ ನಾನು ಥಾಕಲ್ಯಾ ಗುರೂಜಿಯ ಪ್ರಿಯ ಶಿಷ್ಯನಿದ್ದೇನೆ. ಎಚ್ಚರಿಕೆ, ಎಚ್ಚರಿಕೆ!"

"ನಿದ್ರಿಸಬೇಡಿರಿ; ಕುಣಕ್ಯಾ ಶಿಷ್ಯನ ಆದೇಶ ನೆನಪಿಟ್ಟು ಎಚ್ಚರಿಕೆಯಾಗಿಯೇ ಇರ್ರಿ. ತಿಳಿಯಿತೇ?" ಎಂದು ರತನೆ ನಗುತ್ತ ನುಡಿದಳು.

"ನಿದ್ರಿಸಿರಿ, ಆದರೂ ಎಚ್ಚರವಿರಲಿ" ಎಂದು ಸಖ್ಯಾನು ಹೇಳಿದನು.

"ಯಾಕಂದರೆ ಕಳ್ಳಕಾಕರ ಅಂಜಿಕೆ. ಹಡಗುಗಳ್ಳ ಫಿರಂಗಿಗಳು ಹಗಲು ಹಾದೇ ಬಡಿಯುತ್ತಾರೆ; ರಾತ್ರಿಯಲ್ಲಿ ಕೇಳುವರೇ? ಅದಕ್ಕಾಗಿ ಎಚ್ಚರವಿರಬೇಕು. ಅಂತೆಯೇ ಹೇಳುತ್ತೇನೆ, ಎಚ್ಚರಿಕೆ, ಎಚ್ಚರಿಕೆ ಎಂದು!"

"ಫಿರಂಗಿಗಳ ಸಲುವಾಗಿ ಎಚ್ಚರಿಕೆಯೋ, ಈ ನಿನ್ನ ಗುರುವಿನ ಸಲುವಾಗಿ ಎಚ್ಚರಿಕೆಯೋ? ಇದೇನು ಅಸಂಗತ ಮಾತು?" ರತನೆ ಕೇಳಿದಳು.

"ಓಹೋ! ವಿಷಯಾಂತರವಾಯಿತು. ನೆನಪಾಗಲಿಲ್ಲ. ಈ ಗುರುವಿಗಾಗಿ ಎಚ್ಚರಿಕೆ ಹೇಳಿದೆನೇನು? ಹಾಗೆಯೇ ತಿಳಿದುಕೊಳ್ಳಿರಿ. ರತನೆ, ನೀನು ಹಾಗೆ ಹೀಗೆ ಮಾತಾಡಿದರೆ ನಮ್ಮ ಶಾಸ್ತ್ರಿಗಳು ಬೇಗನೆ ನಿನ್ನ ಮದುವೆಯನ್ನೇ ಮಾಡಿಬಿಟ್ಟಾರು. ಜೋಕೆ!" ಎಂದು ಕುಣಕ್ಯಾನು ಹೇಳಿದನು.

"ನಾನಿಲ್ಲದೆ ನಿನ್ನ ಮದುವೆಯಾಗುವದಿಲ್ಲ; ನೀನಿಲ್ಲದೆ ನನ್ನ ಮದುವೆಯಾಗುವದಿಲ್ಲ."

"ನಿಮ್ಮಿಬ್ಬರ ಮದುವೆ ನಿಶ್ಚಿತವಾಗಿದೆಯೆ?" ಥಾಕಲ್ಯಾ ಗಾಬರಿಗೊಂಡು ಕೇಳಿದನು.

"ಹಾಗಲ್ಲ ಪಶು! ಸ್ನೇಹಿತರಾದವರು ಒಬ್ಬರನ್ನೊಬ್ಬರು ಮದುವೆಗೆ ಕರೆಯಿಸದೆ ಇರುವರೆ? ಪಶುಬುದ್ಧಿ; ವಿಪರೀತ ಚಿತ್ತ!" ರತನೆ ನಗುನಗುತ್ತಲೆ ನುಡಿದು:— "ಬುದ್ಧಿವಂತನಿರುವೆ ನಡೆ. ನಡಗು ಹತ್ತಿ ಸಟೆದು ಹೋದೀ. ಮನೆಗೆ ಹೋಗಿ ಒಣ ಬಟ್ಟೆ ಧರಿಸು."

ರತನೆ ಹೀಗೆ ಹೇಳಿದಳು. ಥಾಕಲ್ಯಾನು ನೌಕೆ ಬಿಟ್ಟು ನಡೆದನು. 'ಗುರು ದಕ್ಷಿಣೆ ಚೆನ್ನಾಗಿ ಮುಟ್ಟಿತು' ಅನ್ನುತ್ತ ಕುಣಕ್ಯಾನು ನಗತೊಡಗಿದನು. ರತನೆಯೂ ಹೊಟ್ಟೆಹಿಡಿಸಲಾರದಷ್ಟು ನಕ್ಕಳು.

( ೨ )

ಒಂದು ದಿನ ಧಾಕಲ್ಯಾನಿಗೆ ಬಿಡುವು ದೊರೆತಿತ್ತು. ಅಂದು ಅವನು ಕುಣಕ್ಯಾನಿಗೆ:—“ಗೆಳೆಯಾ, ಇಂದು ಬೆಳದಿಂಗಳ ರಾತ್ರಿ. ಸಮುದ್ರವೂ ಶಾಂತವಿದೆ. ನಾವಿಬ್ಬರೂ ಸಮುದ್ರಕ್ಕೆ ಹೋಗಿ ನೌಕಾವಿಹಾರ ಮಾಡಿಬರೋಣವೇ?”

ಕುಣಕ್ಯಾನು ಈ ಮಾತಿಗೆ ಒಪ್ಪಿದನು. ಇಬ್ಬರೂ ಒಂದು ನೌಕೆಯನ್ನು ಜಲವಿಹಾರಕ್ಕೆ ಸಿದ್ಧಪಡಿಸಿದರು. ಉಪಾಹಾರ ದ್ರವ್ಯಗಳನ್ನೂ ನೌಕೆಯಲ್ಲಿರಿಸಿದರು. ಅನಂತರ ಕುಣಕ್ಯಾನು ಧಾಕಲ್ಯಾನಿಗೆ:—“ಇಂದು ಜಲವಿಹಾರಕ್ಕೆ ರತನ ಬೇಡವೆ?” ಎಂದು ಬುದ್ಧಿಪೂರ್ವಕವಾಗಿ ಕೇಳಿದನು.

“ಬಂದರೆ ನೆಟ್ಟಗೆಂದು ಮನಸ್ಸಿಗೆ ಅನಿಸುವದು; ಆದರೂ ಬೇಡ. ಅವಳು ಉಡಾಳ ಅಡವೀ ಹುಡುಗಿ. ಮಾನ-ಮನ್ನಣೆ ಗೊತ್ತಿಲ್ಲ. ನಾಳೆ ನನ್ನೊಡನೆ ಮದುವೆಯಾದ ಮೇಲೆ ಈಗಿನ ಉಡಾಳತನವು ಹೇಗೆ ಉಳಿದೀತು? ಈಗ ನಾವಿಬ್ಬರೂ ಪರಕೀಯರಂತಿರುವದರಿಂದ ಕುಚೇಷ್ಟೆ ನಡೆದಿದೆ ಲಗ್ನವಾದ ಮೇಲೆ ಈಗಿನ ಕುಚೇಷ್ಟೆ ಉಳಿಯುವದಿಲ್ಲ; ಅಲ್ಲವೇನೋ?”

“ಹೌದು. ಅಣ್ಣಾ, ನಿನ್ನ ಮಾತಿಗೆ ಅಲ್ಲವೆಂದು ನಾನು ಹೇಗೆ ಅನ್ನಲಿ?” ಎಂದು ಕುಣಕ್ಯಾನು ನೌಕೆ ಏರಿದನು; ಧಾಕಲ್ಯಾನೂ ಏರಿದನು. ಅನುಕೂಲವಾದ ಗಾಳಿಯ ಮೂಲಕ ಹುಟ್ಟು ಹಾಕುವ ಆವಶ್ಯಕತೆಯೇ ಇರಲಿಲ್ಲ. ಧಾಕಲ್ಯಾನು ನೌಕೆಯಲ್ಲಿದ್ದ ಎಳಗಾಯಿ ಒಡೆದನು. ಇಬ್ಬರೂ ಹಾಲು ಕುಡಿದು ಎಳೆ ಕೊಬ್ಬರಿ ತಿಂದರು. ಉಪಾಹಾರ ತೀರಿತು. ಅನಂತರದಲ್ಲಿ ಕುಣಕ್ಯಾನು:—“ಅಣ್ಣಾ, ಧಾಕಲ್ಯಾ, ಫಿರಂಗಿ ಜನರನ್ನು ಕಂಡರೆ ನನಗೆ ಕೌತುಕವೆನಿಸುವದು. ಅವರ ಹುಚ್ಚು ವೇಷವೇನು, ಸೊಟ್ಟ ಭಾಷೆಯೇನು? ನೋಡಿದಾಗೆಲ್ಲ ಅವರು ಗುಂಗಿನಲ್ಲಿಯೇ ಇರುವರು. ಅಮಲಿನಲ್ಲಿದ್ದರೂ ಅವರ ವ್ಯಾಪಾರೀ ಬುದ್ಧಿಯು ಮಾತ್ರ ಯಾವಾಗಲೂ ಜಾಗ್ರತವಿರುವದು. ಅವರು ಯಾವಾಗ ನಿದ್ರಿಸುವರೋ ಏನೋ! ಯಾವಾಗಲೂ ಕೆಲಸದಲ್ಲಿಯೇ ತೊಡಗಿರುತ್ತಾರೆ ಶಸ್ತ್ರಹಿಡಿಯುವ ಪ್ರಸಂಗವೊದಗಿದರೆ ಅದಕ್ಕೆ ಅವರು ಸದಾ ಸಿದ್ಧರೇ ಇರುವರು. ಇಂಥ ಚಮತ್ಕಾರಿಕ ಜನರಾದ ಇವರ ದೇಶವಾದರೂ ಎಲ್ಲಿ ಇದೆ?”

ಧಾಕಲ್ಯಾನಿಗೆ ಈ ಸಂಗತಿ ಹೇಗೆ ಗೊತ್ತಾಗಬೇಕು? ಆದರೂ ಜಾಣ್ಮೆ ತೋರಿಸುವ ಹವ್ಯಾಸಕ್ಕೆ ಬಿದ್ದು:—“ಕುಣಕ್ಯಾ, ಇವರಿಗೆ ದೇಶವೆಲ್ಲಿಂದ ಬರಬೇಕು? ನೌಕೆಯಲ್ಲಿ ಹುಟ್ಟಿ ನೌಕೆಯಲ್ಲಿ ಬೆಳೆಯತಕ್ಕ ಜಾತಿಯದು!”

“ನೀನು ಹುಚ್ಚನಿರುವೆ” ಎಂದು ನಗುತ್ತ ಕುಣಕ್ಯಾನು ಹೇಳಿ:—“ಮನುಷ್ಯ ಜಾತಿಯು ಸಮುದ್ರದ ಮೇಲೆ ಹುಟ್ಟಿ ಸಮುದ್ರದಲ್ಲಿಯೇ ಸಾಯುತ್ತಿರುವದಿಲ್ಲ.

ಅವರದೊಂದು ದೇಶವು ಭೂಮಿಯ ಮೇಲೆ ಎಲ್ಲಿಯಾದರೂ ಇರಲಿಕ್ಕೇ ಬೇಕು. ಅವರು ತಮ್ಮ ದೇಶವನ್ನು ಬಿಟ್ಟು ನಮ್ಮ ದೇಶದ ಮೇಲೆ ಹೇಗೆ ದಾಳಿ ಮಾಡುವರೋ, ಹಾಗೆಯೇ ನಾವೂ ಅವರ ದೇಶದ ಮೇಲೆ ದಾಳಿ ಮಾಡದೆ ಇರುವದನ್ನು ನೋಡಿದರೆ ಮನಸ್ಸು ಉದ್ವಿಗ್ನವಾಗುವದು. ನಾವೂ ಅವರಂತೆ ನೌಕಾವಿಶಾರದರೂ, ಶಸ್ತ್ರಾಸ್ತ್ರನಿಪುಣರೂ, ರಣಧುರೀಣರೂ ಆದರೆ ಹಾಗೆ ಮಾಡುವದು ಅಸಾಧ್ಯವಾದೀತೇ? ನಮ್ಮ ಜನರಲ್ಲಿ ಅಂತಹ ಸಾಹಸವೇ ಇಲ್ಲ. ಅವರು ತಮ್ಮ ಒಡನೆ ತಂದು, ನಮ್ಮಲ್ಲಿಂದ ಅನೇಕ ವಸ್ತುಗಳನ್ನು ಒಯ್ಯುತ್ತಾರೆ. ನಾವೂ ಹಾಗೇಕೆ ಮಾಡಬಾರದು? ಅವರು ತಮ್ಮಲ್ಲಿಂದ ವಸ್ತುಗಳನ್ನು ತರುವದು ನೋಡಿದರೆ ಅಲ್ಲಿ ಅವರ ಭೂಮಿ, ಸೀಮೆ, ಕಾರ್ಯಾಲಯ, ಪೇಟೆ ಮೊದಲಾದವುಗಳು ಇರಲಿಕ್ಕೇ ಬೇಕು. ಮೊನ್ನೆ ಮೊನ್ನೆ ನಮ್ಮ ದರ್ಯಾಸಾರಂಗ ಸರಖೇಲರು ಗೌರ ನಾವಿಕರನ್ನು ತಮ್ಮಲ್ಲಿ ಕೆಲಸಕ್ಕೆ ನಿಯಮಿಸಿಕೊಂಡಿರುವರು. ನಾನು ಅವರಿಗೆ ಭೆಟ್ಟಿಯಾಗಿದ್ದೆನು. ಅವರಿಂದ ಅವರ ದೇಶದ ಬಗ್ಗೆ ಅಲ್ಪಸ್ವಲ್ಪ ಸಂಗತಿ ಅರಿತುಕೊಂಡೆನು. ಅವರು ತಮ್ಮ ದೇಶದ ಹೆಸರು ಹೇಳಿದರು; ಆದರೆ ಅದು ನನ್ನ ನೆನಪಿನಲ್ಲಿ ಉಳಿಯಲಿಲ್ಲ. ಅವರ ಸಾಹಸ ನೋಡಿದರೆ ನನಗೆ ಸೋಜಿಗವಾಗುವದು. ಅವರಲ್ಲಿ ಕೆಲಸಗಾರನಾಗಿ ಅವರ ದೇಶವನ್ನೂ, ಆ ಜನರ ಸ್ಥಿತಿರೀತಿಗಳನ್ನೂ, ಅವರ ಉದ್ಯೋಗಶಾಲೆ-ಕಲೆ ಮೊದಲಾದವುಗಳನ್ನೂ ಅರಿತುಕೊಂಡು ಬರಬೇಕೆಂಬ ಕುತೂಹಲ ನನ್ನಲ್ಲುಂಟಾಗಿದೆ."

"ಆ ಮಾತು ಆಡಬೇಡ. ಅವರು ನಮ್ಮನ್ನು ತಮ್ಮ ಕೆಲಸದಲ್ಲಿ ಸೇರಿಸಿಕೊಳ್ಳುವದಿಲ್ಲ. ಅವರು ನಮ್ಮನ್ನು ಗುಲಾಮರನ್ನಾಗಿ ಮಾಡಿಕೊಂಡು ಹೋಗಿ ಅಲ್ಲಿ ಯಾರಿಗಾದರೂ ಮಾರಬಹುದು. ಹೋದವರು ತಿರುಗಿ ಬಂದ ಸುದ್ದಿಯೇ ಇಲ್ಲ. ಹಿಡಿದುಕೊಂಡು ಹೋದವರನ್ನು ಏನು ಮಾಡುವರೋ ದೇವರಿಗೇ ಗೊತ್ತು" ಎಂದು ಥಾಕಲ್ಯಾನು ತರ್ಕಬದ್ಧಿಯಿಂದ ಹೇಳಿದನು.

"ನಮ್ಮ ಜನರನ್ನು ತೆಗೆದುಕೊಂಡು ಹೋಗಿ ಗೌರ ಮನುಷ್ಯನಿಗೆ ಮಾರಿಬಿಡಬಹುದು. ಕೊಂಡು ತಕ್ಕೊಂಡ ಗೌರಕಾಯನು ಆ ಗುಲಾಮರನ್ನು ತಮ್ಮ ಸೇವೆಯಲ್ಲಿರಿಸಿಕೊಳ್ಳಬಹುದು."

"ಹಾಗಿದ್ದರೆ ನಾವಾದರೂ ಆ ಗೌರಾಂಗಿಗಳನ್ನು ನಮ್ಮ ಗುಲಾಮರನ್ನಾಗಿ ಯಾಕೆ ಮಾಡಬಾರದು""

"ಚೆನ್ನಾಗಿ ಮಾಡೀ! ಆದರೆ ಮೊದಲು ಅವರನ್ನು ಹಿಡಿಯುವ ಕೆಲಸ ನೆರವೇರಬೇಕಲ್ಲವೆ? ಒಂದು ವೇಳೆ ಹಿಡಿದರೂ ಮಾರುವದೆಲ್ಲಿ? ನಮ್ಮ ದೇಶದಲ್ಲಿ ಮನುಷ್ಯರನ್ನು ಮಾರುವ ರೂಢಿಯೆಲ್ಲಿದೆ? ಒಂದು ವೇಳೆ ನಮ್ಮ ಬಂದರಕ್ಕೆ ಬಂದರೆ ಅವರ

ಪದಾರ್ಥಗಳನ್ನು ಸ್ವಾಧೀನಪಡಿಸಿಕೊಳ್ಳಬಹುದು. ಒಮ್ಮೊಮ್ಮೆ ನಮ್ಮ ವಶಕ್ಕೆ ಬಂದ ಫಿರಂಗಿಗಳು ಹೇಗೆ ವರ್ತಿಸುವವೆಂಬದು ನಿನಗೆ ಗೊತ್ತಿಲ್ಲವೆ? ಹಿಂಸ್ರ ಪಶುವನ್ನು ತಂದು ಮನೆಯಲ್ಲಿ ಪಾಲನ ಮಾಡಲಿಕ್ಕೆ ಸಾಧ್ಯವಾದೀತೇ? ಕೆಲಸಗಾರರಾಗಿಯೂ ಸೇವಕರಾಗಿಯೂ ಇದ್ದ ಆ ಜನರೇ ಎಷ್ಟು ಜಂಭಮಾಡುತ್ತಿರುವರೆಂಬದನ್ನು ನೋಡಿಲ್ಲವೆ? ಬಿಡುವಿನ ವೇಳೆಯಲ್ಲಿ, ಬಿಡುವಿನ ದಿನಗಳಲ್ಲಿ ಅವರು ಒಡೆಯನ ಹಂಬೆಯನ್ನೇ ಹಿಡಿಯುವದಿಲ್ಲ."

ಕುಣಕ್ಯಾನು ಹೀಗೆ ನುಡಿಯುತ್ತಿರಲು, ದೂರದಲ್ಲಿ ಒಂದು ನೌಕೆಯು ಬರುತ್ತಿರುವದು ಅವನ ದೃಷ್ಟಿಗೆ ಬಿತ್ತು. ಆಗ ಅವನು ಥಾಕಲ್ಯಾನಿಗೆ:—"ಅಗೋ, ಅಲ್ಲಿ ಕಾಣುತ್ತಿರುವದೇನು?"

"ಹೌದು ಗೆಳೆಯಾ! ಇಂದು ಅಮಾವಾಸ್ಯೆಯಲ್ಲವೆ? ಅಲ್ಲಿ ಕಾಣುವದು ವೇತಾಳ! ಕೊಳ್ಳೀದೆವ್ವ!"

ಕುಣಕ್ಯಾನು ಘೊಳ್ಳನೆ ನಕ್ಕನು. ಅವನು ನಗುತ್ತಲೆ:—"ನಿನಗೆ ಹುಚ್ಚು ಹಿಡಿದಿದೆಯೆ? ಇಂದು ಪೂರ್ಣ ಪೌರ್ಣಿಮೆ. ಆಕಾಶದಲ್ಲಿ ಪೂರ್ಣ ಚಂದ್ರನು ಪ್ರಕಾಶಿಸುತ್ತಿದ್ದಾನೆ. ಮೇಘಮಾಲೆಯೊಂದೂ ಇಲ್ಲ; ಇಂಥ ಹುಣ್ಣಿವೆಯ ರಾತ್ರಿಗೆ ನೀನು ಅಮಾವಾಸ್ಯೆಯೆನ್ನುವೆಯಲ್ಲ? ಎಲ್ಲಿ ಹೋದರೂ ಎಲ್ಲಿ ನೋಡಿದರೂ ನಿನ್ನ ವೇತಾಳವು ಹಿಂದೆಯೂ ಎದುರೂ ಇದ್ದೇ ಇರುವದೆಂದ ಹಾಗಾಯಿತು!"

"ಅಮಾವಾಸ್ಯೆಯಲ್ಲವೆ ಇಂದು? ಅಲ್ಲ, ನಿಜ; ಆದರೆ ಹುಣ್ಣಿವೆಯ ದಿನ ಕೊಳ್ಳಿಯ ದೆವ್ವಗಳು ಸಮುದ್ರದಲ್ಲಿ ಏಳುತ್ತಿರಬಹುದು ಹಾಗಿಲ್ಲದಿದ್ದರೆ ಇಂತಹ ರಾತ್ರಿಯಲ್ಲಿ ಕೊಳ್ಳಿಗಳೇಳಲು ಕಾರಣವೇನು? ನಮ್ಮ ಊರ ಪಶ್ಚಿಮ ದಿಶೆಗೆ ಅಮಾವಾಸ್ಯೆಗೊಮ್ಮೆ ಕೊಳ್ಳಿಯ ದೆವ್ವಗಳೇಳುತ್ತವೆಂದು ಅಜ್ಜನು ಕತೆ ಹೇಳುತ್ತಿದ್ದನು. ಅಂತೆಯೇ ನಾವು ಇಂದಿಗೂ ಅಮಾವಾಸ್ಯೆಯ ರಾತ್ರಿ ಅತ್ತ ಮೋರೆ ಕೂಡ ಹೊರಳಿಸುವದಿಲ್ಲ. ಒಮ್ಮೊಮ್ಮೆ ಹುಣ್ಣಿವೆಯ ಬೆಳದಿಂಗಳಲ್ಲಿ ಸಹ ಕೊಳ್ಳಿಯ ದೆವ್ವಗಳು ಕಾಣಿಸುತ್ತವೆಯೆಂದು ಅಜ್ಜನು ಅಂದನಂತಾಗಿದೆ. ಇವರೆ ಕೇಳುತ್ತಿದ್ದೆನು. ಪಾಪ, ಆತ ಅಕಾಲದಲ್ಲಿಯೇ ಸತ್ತನು!"

"ನಿಮ್ಮ ಅಜ್ಜ ನೀನು ಪ್ರಬುದ್ಧನಾದ ಮೇಲೆ ಸತ್ತರೂ ಅಕಾಲವೇ? ಸರಿ."

"ಕುಣಕ್ಯಾ, ಹೇಗಿದ್ದರೂ ಹುಟ್ಟಿದವರು ಸತ್ತರೆ ದುಃಖವಲ್ಲವೆ? ಇನ್ನೂ ಅಜ್ಜನು ಬದುಕಿದ್ದರೆ ಬದುಕಬಹುದಾಗಿತ್ತು. ಸತ್ತು ಎಷ್ಟೋ ದಿನಗಳಾದವೆಂದ ಮೇಲೆ ಅಕಾಲವಲ್ಲವೆ? ಇರಲಿ ಬಿಡು. ಕುಣಕ್ಯಾ, ಅಲ್ಲಿ ನೋಡು. ಒಂದಕ್ಕೆ ಪ್ರತಿಯಾಗಿ ಎರಡು-ಮೂರು ದೀಪಗಳು ಕಾಣತೊಡಗಿವವು. ಅವು ಏನಿರಬಹುದು?"

"ಫಿರಂಗಿಗಳ ನೌಕೆಯಿರಬಹುದು."

"ಬಹಳೇ ಚೆನ್ನಾಯಿತು, ಸರಖೇಲರ ಆಜ್ಞೆಯನ್ನು ಪ್ರಚಾರದಲ್ಲಿ ತರಲಿಕ್ಕೆ. ಯಾರ ನೌಕೆಗಳು ಬಂದರೂ ಅವುಗಳನ್ನು ಪ್ರತಿಬಂಧಿಸಬೇಕೆಂದು ಸರಖೇಲರ ಆಜ್ಞೆಯಿದೆ. ಅವರ ಆಜ್ಞಾಪತ್ರವಿದ್ದರೆ ಮಾತ್ರ ಆ ನೌಕೆಗಳನ್ನು ಬಿಟ್ಟುಬಿಡತಕ್ಕದ್ದು. ನಮ್ಮ ನೌಕೆಯನ್ನು ಆ ನೌಕೆಯ ಕಡೆಗೆ ಸಾಗಿಸು. ಹುಲಿಯಂತೆ ಏರಿ ಹೋಗಿ ಅದನ್ನು ಪ್ರತಿಬಂಧಿಸೋಣ. ನಾನಿದ್ದೇನೆ; ನೀನು ಎಷ್ಟೂ ಹೆದರಬೇಡ ಕಂಡೆಯಾ?"

ನೀನಿದ್ದ ಮೇಲೆ ನಾನು ಹೆದರುವದೇಕೆ? ನಾವು ನಮ್ಮ ನೌಕೆಯನ್ನು ಆ ನೌಕೆಯ ಕಡೆಗೆ ಸಾಗಿಸುವ ಕಾರಣವಿಲ್ಲ; ಅದೇ ಇತ್ತ ಬರತೊಡಗಿದೆ."

"ಬಹಳೇ ಚೆನ್ನಾಯಿತು. ದೇವರೇ ದಯಪಾಲಿಸಿದನೆನ್ನಬೇಕು."

"ದೇವನೋ ದೆವ್ವನೋ ಸಮೀಪದಲ್ಲಿ ಬಂದ ಹೊರತು ಗೊತ್ತಾಗುವದಿಲ್ಲ. ಆ ನೌಕೆಯು ಬಡ ವ್ಯಾಪಾರಿಗಳದೋ, ಮೋಸಗಾರ ಫಿರಂಗಿಗಳದೋ? ಯಾವುದೂ ತಿಳಿಯುವಂತಿಲ್ಲ. ಖಡ್ಗವನ್ನು ಟೊಂಕಕ್ಕೆ ಕಟ್ಟು. ಕೈಗೆ ಕೈಹತ್ತುವ ಪ್ರಸಂಗ ಒದಗಿದರೆ ಧೈರ್ಯಗೆಡಬೇಡ."

ಇಬ್ಬರೂ ತಮ್ಮ ಹುಟ್ಟು ಒಳಗೆ ತೆಗೆದುಕೊಂಡರು; ಶೀಡನ್ನು ಸಡಿಲು ಮಾಡಿದರು. ಸಮುದ್ರವು ಶಾಂತವಿದ್ದುದರಿಂದ ನೌಕೆಯು ನಿಂತಲ್ಲಿಯೇ ನಿಂತಿತು. ಸ್ವಲ್ಪ ವೇಳೆಯಲ್ಲಿಯೇ ಎರಡನೆಯ ನೌಕೆಯು ಅಲ್ಲಿಗೆ ಬಂತು. ಎರಡೂ ನೌಕೆಗಳು ಒಂದಕ್ಕೊಂದು ಹತ್ತಿದವು. ಎರಡನೆಯ ನೌಕೆಯೊಳಗಿನ ನಾವಿಕನು ಹುಟ್ಟು ಹಾಕುವದನ್ನು ನಿಲ್ಲಿಸಿ ಎದ್ದು ನಿಂತನು. ಕೂಡಲೆ ಧಾಕಲ್ಯಾನು:—"ನೀವು ಯಾರು? ಮುಂದೆ ಹೋಗಕೂಡದು. ಇದು ಸರಖೇಲ ಕಾನ್ಹೋಜಿರಾವ ಆಂಗ್ರೆಯವರ ಗಡಿಯು. ಅವರ ಆಜ್ಞಾಪತ್ರವಿಲ್ಲದೆ ಯಾರನ್ನೂ ತಿರುಗಾಡಗೊಡುವದಿಲ್ಲ. ನಿಮ್ಮಲ್ಲಿ ಆಜ್ಞಾಪತ್ರವಿದ್ದರೆ ತೋರಿಸಿರಿ."

ಎರಡನೆಯ ನೌಕೆಯೊಳಗಿನ ನಾವಿಕನು ತನ್ನ ಫಿರಂಗೀ ಭಾಷೆಯಲ್ಲಿ ಏನೇನೋ ಹೇಳಿದನು. ಅದು ಧಾಕಲ್ಯಾನಿಗೂ ಕುಣಕ್ಯಾನಿಗೂ ತಿಳಿಯಲಿಲ್ಲ. ಫಿರಂಗಿ ನಾವಿಕನು ಧಾಕಲ್ಯಾನ ನೌಕೆಯನ್ನು ಹಗ್ಗದಿಂದ ತನ್ನ ನೌಕೆಗೆ ಬಂಧಿಸಿದನು. ಈ ಲಕ್ಷಣವು ಸ್ನೇಹಭಾವದ್ದಾಗಿ ಧಾಕಲ್ಯಾ-ಕುಣಕ್ಯಾರಿಗೆ ತೋರಲಿಲ್ಲ.

ಫಿರಂಗಿಗಳ ಹಡಗದೊಳಗಿನ ಒಬ್ಬನಿಗೆ ಕೊಂಕಣೀ ಭಾಷೆ ಬರುತ್ತಿತ್ತು. ಅವನು:—"ಮಿತ್ರರೇ, ಆ ಪತ್ರವನ್ನು ಕನ್ನಡಿಯ ಚೌಕಟ್ಟಿನಲ್ಲಿ ಕೂಡಿಸಿ ಹಡಗದ ಹಲಗೆಗೆ ಅಂಟಿಸಿದ್ದೇವೆ. ಇಲ್ಲಿ ಬಂದು ಅದನ್ನು ನೋಡಬಹುದು."

ತಮ್ಮ ನೌಕೆಯನ್ನು ಹಗ್ಗದಿಂದ ಬಿಗಿದ ಹಾಗು ಆಜ್ಞಾಪತ್ರ ಕೇಳಿದರೆ ಹಡಗವನ್ನೇರಿ ನೋಡಬೇಕೆಂದು ಹೇಳಿದ ಲಕ್ಷಣಗಳು ಕುಣಕ್ಯಾನಿಗೆ ಚೆನ್ನಾಗಿ ತೋರಲಿಲ್ಲ. ಆಗ ಅವನು ಥಾಕಲ್ಯಾನಿಗೆ:—"ಎಚ್ಚರಿಕೆಯಿಂದಿರು. ಲಕ್ಷಣ ಚೆನ್ನಾಗಿಲ್ಲ. ಮೊದಲು ನೌಕೆಯು ಹುಟ್ಟಿನ ಗೂಟಕ್ಕೆ ಕಟ್ಟಿದ ಹಗ್ಗವನ್ನು ಬಿಚ್ಚಲಿಕ್ಕೆ ಬೇಕು. ಅಂದರೆ ನಮ್ಮ ನೌಕೆಯನ್ನು ಬೇಕಾದತ್ತ ಸಾಗಿಸಲಿಕ್ಕೆ ನೆಟ್ಟಗಾಗುವದು. ಹಡಗದಲ್ಲಿ ಮೂರು-ನಾಲ್ಕು ಜನರಿದ್ದಂತೆ ತೋರುವದು. ಕಾದುವ ಪ್ರಸಂಗವೇ ಒದಗಿದರೆ ಎಚ್ಚರದಿಂದ ಕಾದು."

ಕುಣಕ್ಯಾನ ಮಾತುಗಳ ಭಾವವು ಫಿರಂಗಿಗಳಲ್ಲೊಬ್ಬನಿಗೆ ತಿಳಿದು:-"ಮಿತ್ರರೆ, ಗಾಬರಿಯಾಗಬೇಡಿರಿ. ಈ ಅಗಾಧವಾದ ಸಮುದ್ರದಲ್ಲಿ ನಾವು ಪರಸ್ಪರರು ಭೇಟಿಯಾದದ್ದು ಸುದೈವವೆಂದೇ ತಿಳಿದು, ಪರಸ್ಪರರು ಸ್ನೇಹದಿಂದ ವರ್ತಿಸಲಿಕ್ಕೆ ಬೇಕು. ನಮ್ಮನ್ನು ಶತ್ರುಗಳೆಂದು ಭಾವಿಸಬೇಡಿರಿ."

"ನಾವು ದರ್ಯಾಸಾರಂಗ ಆಂಗ್ರೆ ಕಾನ್ಹೋಜಿರಾಯರ ಹಡಗುಪಡೆಯೊಳಗಿನ ನಾವಿಕರು. ಸಮುದ್ರದಲ್ಲಿಯ ನೌಕೆಗಳ ಆಜ್ಞಾಪತ್ರ ಪರೀಕ್ಷೆಯ ಕೆಲಸವು ನಮ್ಮದಾಗಿದೆ." ಎಂದು ಥಾಕಲ್ಯಾನು ಜಂಭದಿಂದ ಹೇಳಿದನು.

"ಬಹಳೇ ನೆಟ್ಟಗಾಯಿತು. ನಾವು ಆಂಗ್ರೆ ಸರಕಾರದ ಆಜ್ಞಾಪತ್ರ ಹೊಂದಿಯೇ ಸಂಚರಿಸುವವರಾದ್ದರಿಂದ ನಾವೂ ನೀವೂ ಮಿತ್ರರಾದೆವು. ನಮ್ಮ ಹಡಗದಲ್ಲಿಯ ನಿಶಾಪಾನ ನಿಮಗೆ ಕೊಡುವೆವು, ನಿಮ್ಮ ನೌಕೆಯಲ್ಲಿಯ ನಿಶಾಪಾನ ನಮಗೆ ಕೊಡಿರಿ. ಅನಂತರ ನಿಮ್ಮ ದಾರಿ ನಿಮಗೆ; ನಮ್ಮ ದಾರಿ ನಮಗೆ. ನಿಮ್ಮ ನೌಕೆ ಸಣ್ಣದಿದ್ದು, ಇಬ್ಬರೂ ಹುಟ್ಟು ಹಾಕಿದರೆ ಬೇಗನೆ ತೀರಕ್ಕೆ ಮುಟ್ಟುವಿರಿ. ನಮ್ಮ ನೌಕೆ ದೊಡ್ಡದು, ದೂರದಿಂದ ಬಂದವರು; ದೂರ ಹೋಗಬೇಕಾಗಿದೆ. ಗಾಳಿಯು ಅನುಕೂಲತೆಯಿಲ್ಲದ್ದರಿಂದ ದಣಿದಿರುವೆವು. ಸ್ವಲ್ಪವಿಶ್ರಾಂತಿ ಹೊಂದಿ ಹೋಗಬೇಕೆಂಬ ವಿಚಾರದಿಂದ ನಿಶಾಪಾನಕ್ಕಾಗಿ ನಿಮ್ಮನ್ನು ಕರೆದೆವು. ನೀವು ಇಬ್ಬರೂ ಹಡಗ ನಡೆಯಿಸಲು ನಮಗೆ ಅನುಕೂಲರಾದರೆ ಉಪಕಾರವಾಗುವದು."

"ನಿಮ್ಮ ಹಡಗದಲ್ಲಿ ಏನೇನು ಒಡವೆಗಳಿವೆ?" ಎಂದು ಥಾಕಲ್ಯಾನು ಪ್ರಶ್ನೆ ಮಾಡಿದನು.

"ನಮ್ಮನ್ನು ವಸತಿಗೆ ಮುಟ್ಟಿಸಿರಿ. ಅಲ್ಲಿ ಎಲ್ಲ ವಸ್ತುಗಳನ್ನೂ ತೋರಿಸುವೆವು. ಗೋವೆಯ ಬಂದರಕ್ಕೆ ಹಡಗವು ಹೋಗಿ ಲಂಗರ ಹಾಕಿ ನಿಲ್ಲಿಸುವಷ್ಟರಲ್ಲಿ ಎಲ್ಲ ವಸ್ತುಗಳ ವಿಕ್ರಯವಾಗಿ ಹೋಗುವದು. ಅಂತರದಲ್ಲಿ ನಾವೂ ನೀವೂ ಕೂಡಿ ವಿಜಯದುರ್ಗಕ್ಕೇ ಹೋಗೋಣ. ಅಲ್ಲಿ ನೀವು ನಮಗೆ ಸರಖೇಲರ ಭೆಟ್ಟಿ

"ಮಾಡಿಸತಕ್ಕದ್ದು" ಹೀಗೆ ನುಡಿದು, ಆ ಫಿರಂಗಿಯು ಥಾಕಲ್ಯಾನ ನೌಕೆಯಲ್ಲಿಳಿದನು. ತರುವಾಯ ತೆಕ್ಕೆ ಬಿದ್ದು ಬಲುಪ್ರೇಮದಿಂದ ತನ್ನ ಹಡಗದಲ್ಲಿ ಅವನನ್ನು ಎಳೆದು ಕೊಂಡು ಹೋದನು. ಕುಣಕ್ಯಾನಿಗೆ ಈ ಘಟನೆಯು ವಿಪರೀತವಾಗಿ ತೋರಿದ್ದರಿಂದ ಅವನೂ ಹಿಂದೆ ಹೋದನು. ಫಿರಂಗಿ ನಾವಿಕನು ತನ್ನಲ್ಲಿಯ ಹಣ್ಣು-ಹಂಪಲ ಮದ್ಯ ಮೊದಲಾದವುಗಳನ್ನು ಥಾಕಲ್ಯಾನ ಮುಂದೆ ಇಟ್ಟನು; ಹಾಗು "ಸ್ನೇಹದ ಕಾಣಿಕೆಯಿದು" ಎಂದು ನುಡಿದು, ಅವನ ಕೈಯಲ್ಲಿ ಸುರಾಪಾತ್ರೆಯನ್ನು ಕೊಟ್ಟನು. ಮತ್ತೊಂದು ಪಾತ್ರೆಯನ್ನು ಅವನು ಕುಣಕ್ಯಾನ ಕೈಯಲ್ಲಿ ಕೊಡಹೋದನು. ಕುಣಕ್ಯಾನು ದೂರದಿಂದಲೆ ಅದಕ್ಕೆ ನಮಸ್ಕಾರ ಮಾಡಿದನು. ಥಾಕಲ್ಯಾನು ಕೋಳಿ ಜಾತಿಯವನಿದ್ದನು. ಅವನಿಗೆ ಸುರಾಪಾನ ಮಾಡುವ ಅಭ್ಯಾಸವಿದ್ದುದರಿಂದ ಪಾತ್ರೆಯನ್ನು ಬಾಯಿಗೆ ಹಚ್ಚಿದನು. ಆ ಹಡಗದಲ್ಲಿದ್ದ ಫಿರಂಗಿಯೊಬ್ಬನು ಥಾಕಲ್ಯಾ-ಕುಣಕ್ಯಾರ ನೌಕೆಯ ಹಗ್ಗ ಬಿಚ್ಚಿ ಅದನ್ನು ದೂಡಿಬಿಟ್ಟನು.

"ಅದನ್ನೇಕೆ ದೂಡಿದೆ?" ಎಂದು ಕುಣಕ್ಯಾನು ಫಿರಂಗಿಯನ್ನು ಕೇಳಿ, ಥಾಕಲ್ಯಾನನ್ನು ಕುರಿತು:—"ಥಾಕಲ್ಯಾ, ಮೋಸಗಾರಿಕೆ ತೋರುವದು. ಏಳು, ಬೇಗ ಏಳು."

ಥಾಕಲ್ಯಾನು ಎದ್ದನು. ಸುರಾಪಾನ ಮಾಡಿದ್ದರಿಂದ ಮತ್ತೆ ಬಿದ್ದನು. ಫಿರಂಗಿಯು ಕುಣಕ್ಯಾನ ಕೊರಳಿಗೆ ಹಗ್ಗ ಹಾಕಿ ಎಳೆದನು. ಕೂಡಲೆ ಕುಣಕ್ಯಾನು ಅವನ ಮೇಲೆ ಶಸ್ತ್ರನೆತ್ತಿದನು. ಅಷ್ಟರಲ್ಲಿ ಮತ್ತೊಬ್ಬ ಫಿರಂಗಿಯು ಅವನ ಕೈ ಹಿಡಿದನು. ಕೂಡಲೆ ಇನ್ನೊಬ್ಬ ಫಿರಂಗಿಯು ಕುಣಕ್ಯಾನನ್ನು ಹಗ್ಗದಿಂದ ಬಿಗಿದನು. ಮದ್ಯಪಾನದಿಂದ ಎಚ್ಚರದಪ್ಪಿದ ಥಾಕಲ್ಯಾನನ್ನು ಬಂಧಿಸಲು ಅವರಿಗೆ ಏನೂ ಶ್ರಮವಾಗಲಿಲ್ಲ. ಇಬ್ಬರನ್ನೂ ಹಗ್ಗದಿಂದ ಬಿಗಿದ ಮೇಲೆ ಅವರನ್ನು ಎತ್ತಿ ಹಡಗದ ತಳಮನೆಯಲ್ಲಿ ಹಾಕಿದರು. ಆಗ ಒಬ್ಬ ಫಿರಂಗಿಯು:—"ಇಲ್ಲಿ ನಿಮ್ಮ ಸರಖೇಲರ ಆಜ್ಞಾಪತ್ರ ಶೋಧಿಸಿರಿ; ಇಲ್ಲವೆ ಆಜ್ಞಾಪತ್ರವಿಲ್ಲದೆ ತಂದ ಒಡವೆಗಳ ಚೀಲಗಳನ್ನೆಣಿಸಿರಿ" ಎಂದು ನಗುತ್ತ ಹೇಳಿದನು.

ಥಾಕಲ್ಯಾನು ಎಚ್ಚರದಪ್ಪಿ ಬಿದ್ದಿದ್ದನು; ಈ ಆಕಸ್ಮಿಕ ಘಟನೆಯಿಂದ ಕುಣಕ್ಯಾನು ಮಾತ್ರ ಬಹಳೇ ಚಡಪಡಿಸಹತ್ತಿದನು. ಫಿರಂಗಿಗಳು ನಗುತ್ತ ಕೆಲೆಯುತ್ತ ತಮ್ಮ ಹಡಗವನ್ನು ಸಾವಕಾಶವಾಗಿ ನಡೆಯಿಸತೊಡಗಿದರು. ಮುಖ್ಯ ಫಿರಂಗಿಯೊಬ್ಬನು ಚುಕ್ಕಾಣಿಯ ಬಳಿಯ ಹಲಗೆಯ ಮೇಲೆ ಕುಳಿತು ಮದ್ಯಪಾನದ ಗುಂಗಿನಲ್ಲಿ ತನ್ನ ಸೊಟ್ಟಡೊಂಕ ಭಾಷೆಯಿಂದ ಹಾಡತೊಡಗಿದನು. ಆ ಬೆಳದಿಂಗಳ ರಾತ್ರಿಯಲ್ಲಿ ಹಡಗವು ಪರತೀರವನ್ನು ತಲುಪಲು ಸಾವಕಾಶವಾಗಿ ಸಾಗಿತು.

( ೩ )

ಹಡಗದ ತಳಮನೆಯಲ್ಲಿ ಕುಣಕ್ಯಾ-ಧಾಕಲ್ಯಾರ ಹೊರತು ಯಾರೂ ಇದ್ದಿಲ್ಲ. ಆದ್ದರಿಂದ ಮೆಲ್ಲನೆ ಮನಬಿಚ್ಚಿ ಮಾತಾಡಲು ಅವರಿಗೆ ಸೌಕರ್ಯವಾದಂತಾಗಿತ್ತು. ತಳಮನೆಯಲ್ಲಿ ಕತ್ತಲೆಯಿದ್ದುದರಿಂದ ಯಾರು ಯಾರಿಗೆ ಹೇಗೆ ಕಟ್ಟಿ ಬಿದ್ದಿವೆ. ಕಟ್ಟಿದ ಹಗ್ಗವನ್ನು ಬಿಚ್ಚಲು ಸಾಧ್ಯವಿದೆಯೋ ಹೇಗೆ ಎಂಬದನ್ನು ತಿಳಿಯಲಿಕ್ಕೆ ಬರುವಂತಿರಲಿಲ್ಲ. ಹೇಗಾದರೂ ಮಾಡಿ ತಮ್ಮ ಕಟ್ಟುಗಳನ್ನು ಸಡಿಲು ಮಾಡ ಬೇಕೆಂದು ಇಬ್ಬರೂ ಪ್ರಯತ್ನಿಸತೊಡಗಿದ್ದರು. ಆಗ ಕುಣಕ್ಯಾನು ಮೆಲ್ಲ ಮೆಲ್ಲನೆ ಸರಿಯುತ್ತ ಧಾಕಲ್ಯಾನ ಬಳಿಗೆ ಹೋಗಿ, ಮೆಲ್ಲನೆ ಹಗ್ಗದ ಕಟ್ಟು ಸಡಿಲಿಸಲು ಹೇಳಿ, ತಾನೂ ಅದೇ ಪ್ರಯತ್ನದಲ್ಲಿ ತೊಡಗಿದನು. ಆಗ ಅವನು ಮೆಲ್ಲನೆ:—"ಆ ದುಷ್ಟರು ನನ್ನ ಕತ್ತಿಯನ್ನು ಕಸಿದುಕೊಂಡರು. ನಿನ್ನ ಕತ್ತಿ ನಿನ್ನ ಬಳಿಯಲ್ಲಿರುವದಲ್ಲವೆ?" ಎಂದು ಪ್ರಶ್ನೆ ಮಾಡಿದನು.

"ಇರುವದು ಇದ್ದು ಪ್ರಯೋಜನವೇನು? ಅದು ಹಗ್ಗದ ಕಟ್ಟಿನಲ್ಲಿ ಬಿಗಿ ಯಾಗಿ ಕುಳಿತು ನನ್ನ ಮೈಗೆ ಚುಚ್ಚುತ್ತಿದೆ ಕತ್ತಿ ಉಳಿಯಿತೆಂದು ಸಂತೋಷ ವುಂಟಾದರೆ, ಅದು ಚುಚ್ಚುವ ದುಃಖವೊಂದು ಬಾಧಿಸುತ್ತಿದೆ."

"ಖಡ್ಗವು ಉಳಿದದ್ದು ಚೆನ್ನಾಯಿತು. ನೀನು ನಿನ್ನ ಕಟ್ಟು ಸಡಿಲಿಸು. ಹಗ್ಗ ದಿಂದ ಕೈಕಾಲುಗಳು ಕಡೆಗಾದರೆ ಏನಾದರೂ ಮಾಡಲಿಕ್ಕೆ ಅನುಕೂಲವಾಗಬಹುದು. ನಮ್ಮ ಧ್ವನಿಯಾಗಲಿ ನಮ್ಮ ಚಲನವಲನದ ಶಬ್ದವಾಗಲಿ ಮೇಲಿನವರಿಗೆ ಕೇಳದ ಹಾಗೆ ಎಚ್ಚರದಿಂದ ನಡೆಯಬೇಕು ಕಂಡೆಯಾ?"

ಇಬ್ಬರೂ ಹಾಗೂ ಹೀಗೂ ಪ್ರಯತ್ನ ಮಾಡಿ ಕಟ್ಟುಗಳನ್ನು ಸಡಿಲು ಮಾಡಿ ಕೊಂಡರು. ಧಾಕಲ್ಯಾನಿಗೆ ಖಡ್ಗದ ಇರಿತವೂ ತಪ್ಪಿತು. ಇದ್ದುದರಲ್ಲಿ ಇಬ್ಬರೂ ಸಂತೋಷಪಟ್ಟರು. ಆಗ ಧಾಕಲ್ಯಾನು:—"ಈ ಕಟ್ಟುಗಳಿಂದ ನಾವು ಮುಕ್ತರಾದರೆ ಆ ಫಿರಂಗಿಗಳಿಗೆ ಚೆನ್ನಾಗಿ ಕೈ ತೋರಿಸೋಣ."

"ಮಧ್ಯಸ್ಥಾನದ ಗುಂಗಿನಲ್ಲಿ ನೀನು ಪರಾಧೀನನಾದುದರಿಂದ ನಮಗೆ ಬಹು ಬೇಗ ಈ ದುರವಸ್ಥೆ ಪ್ರಾಪ್ತವಾಯಿತು ಆಗದ್ದು ಆಗಿಹೋಯಿತು. ಇನ್ನು ಮೇಲಾ ದರೂ ಜಾಗ್ರತೆಯಿಂದ ನಡೆ. ನಾವು ಇಬ್ಬರೇ ಇರುವದರಿಂದ ಒಳ್ಳೆಯ ಹಂಚಿಕೆ ಯಿಂದ ನಡೆದು ಪಾರಾಗಬೇಕು. ನಮ್ಮ ಚಲನವಲನವು ಅವರಿಗೆ ತಿಳಿದರೆ ಮತ್ತೆ ನಮ್ಮ ಹಗ್ಗದ ಕಟ್ಟುಗಳು ಬಿಗಿಯಾಗುವವು. ನೀನು ಹೆಚ್ಚಿಗೆ ಮಾತಾಡ ಬೇಡ. ಮಾತಾಡುವ ಕೆಲಸವು ನನ್ನದು. ನೀನು ಕೇವಲ ನರಳುವದು, ಅಳುವದು ಮಾಡು ತ್ತಿರು. ಈ ಕೆಲಸವು ನನಗಿಂತ ನಿನ್ನಿಂದ ಚೆನ್ನಾಗಿ ನೆರವೇರುವದು. ಒಂದು

ವೇಳೆ ನಿನಗೆ ಮಾತಾಡುವ ಪ್ರಸಂಗವೇ ಒದಗಿದರೆ ನನ್ನ ಮಾತಿಗೆ ಅನುಸಾರ ವಾಗಿಯೇ ಮಾತಾಡು. ಫಿರಂಗಿಗಳೆದುರಿಗೆ ಸರಖೇಲರ ನಾವಿಕರೆಂದು ಹೇಳಿದ ಮಾತು ಅಲ್ಲಗಳೆದು, ವಿನೋದಕ್ಕೆ ಹಾಗೆ ಹೇಳಿದೆವೆಂದು ತಿಳಿಸಬೇಕು. ಹಡಗ ದಲ್ಲಿಯ ನಾವಿಕನೊಬ್ಬನು ಕೊಂಕಣೀಯನಿರಬಹುದೆಂದೂ ಹಡಗವು ಸರಖೇಲರ ದಿರಬಹುದೆಂದೂ ತಿಳಿದು ವಿನೋದವಾಡಿದೆವೆಂಬದನ್ನು ಅವರಿಗೆ ತಿಳಿಸಬೇಕು. ನೀನು ನನ್ನ ಒಡೆಯನ ಸ್ಥಾನ ವಹಿಸು. ನಿನ್ನ ತಂದೆಗೆ ಬೇನೆ ಬಂದು, ಮೃತ್ಯು ಶಯ್ಯಾಶಾಯಿಯಾಗಿರುವನೆಂಬದನ್ನು ಆ ಫಿರಂಗಿಗಳಿಗೆ ತಿಳಿಸಿ, ಅವರಿಗೆ ದಯೆಹುಟ್ಟು ವಂತೆ ಮಾಡಬೇಕು. ನಾವು ಸರಖೇಲರ ಸೇವಕರು ಅಥವಾ ನಾವಿಕರು ಎಂಬದನ್ನು ಅವರ ಮನಸ್ಸಿನಿಂದ ಹೋಗಲಾಡಿಸಲು ಯತ್ನಿಸಬೇಕು."

ಕುಣಕ್ಯಾನ ಮಾತುಗಳು ಥಾಕಲ್ಯಾನಿಗೆ ಸರಿದೋರಿದವು. ಆಗ ಇಬ್ಬರೂ ತಮ್ಮ ಕಟ್ಟುಗಳನ್ನು ಮತ್ತಿಷ್ಟು ಸಡಿಲಿಸಿಕೊಳ್ಳತೊಡಗಿದರು. ರಾತ್ರಿ ಅವರಿಗೆ ನಿದ್ರೆ ಯೂ ಬರಲಿಲ್ಲ. ಶತ್ರುಗಳು ಏನೇನು ಮಾಡುವರೆಂಬದನ್ನು ಅವರು ಕಿವಿಗೊಟ್ಟು ಕೇಳುತ್ತ ಬಿದ್ದುಕೊಂಡಿದ್ದರು.

ಮಾರನೆಯ ದಿನ ಸೂರ್ಯೋದಯವಾದ ಕೂಡಲೆ ಗಾಳಿಯು ಅನುಕೂಲ ವಾಗಿ ಬೀಸತೊಡಗಿದ್ದರಿಂದ ಹಡಗವು ಶೀಡಿನ ಸಹಾಯದಿಂದಲೆ ನಡೆಯತೊಡಗಿತು. ಆಗ ಮೇಲಿನ ಫಿರಂಗಿ ನಾವಿಕರಿಗೆ ಅವಕಾಶವು ದೊರೆಯಿತು. ಮೊದಲು ದಿನ ಹಡ ಗವು ನಡೆಯುವಂತಿಲ್ಲವೆಂದು ಸ್ವಸ್ಥ ಕುಳಿತು ಮದ್ಯಪಾನ ಮಾಡಿದರು; ಇಂದು ಹಡಗವು ತಾನೇ ನಡೆಯತೊಡಗಿದ ಮೂಲಕ ಅವಕಾಶ ದೊರೆತು ಯಥೇಷ್ಟ ಮದ್ಯ ಪಾನ ಮಾಡಿದರು.

ಮೂರನೆಯ ನಾವಿಕನು ಮಾತ್ರ ಮದ್ಯಪಾನದಲ್ಲಿ ಭಾಗವಹಿಸಿರಲಿಲ್ಲ. ಅವ ನಿಗೆ ಹಸಿವೆಯಾದ ಮೂಲಕ ಕೆಳಗಿನ ಮನೆಯಲ್ಲಿ ಏನಾದರೂ ತಿನ್ನುವ ಪದಾರ್ಥ ತರಬೇಕೆಂದು ಅಲ್ಲಿಗೆ ಬಂದನು, ಅಲ್ಲಿ ಕುಣಕ್ಯಾ-ಥಾಕಲ್ಯಾರು ಬವಳಿ ಬಂದವರಂತೆ ಬಿದ್ದುಕೊಂಡಿದ್ದರು. ಥಾಕಲ್ಯಾನು ಕುಣಕ್ಯಾನ ಹೇಳಿಕೆಯ ಮೇರೆಗೆ ರೋದನ ವನ್ನು ಪ್ರಾರಂಭಿಸಿದನು. ಕುಣಕ್ಯಾನೂ ಮೆಲ್ಲಮೆಲ್ಲನೆ ನರಳತೊಡಗಿದನು. ಕೆಳ ಗಿಳಿದ ನಾವಿಕನು ಅವರನ್ನು ನೋಡಿ:—"ಯಾಕೆ ಮಿತ್ರರೆ, ನರಳುತ್ತೀರಿ?" ಎಂದು ಕೇಳಿದನು.

"ನರಳದೆ, ಅಳದೆ ನಾವು ಮಾಡಬೇಕಾದುವೇನು?" ಎಂದು ಕುಣಕ್ಯಾನ ನುಡಿದು:—'ನಾವಿಕಣ್ಣಾ, ನಿನಗೆ ನಮ್ಮ ಕೊಂಕಣೀ ಭಾಷೆ ಚೆನ್ನಾಗಿ ಬರುವದು ನೀನು ಆ ಫಿರಂಗಿ ನಾವಿಕರ ಜಾತಿಯವನಲ್ಲವೇನು?"

"ಅಲ್ಲ; ನಾನು ಕೊಂಕಣಿಗನಿದ್ದೇನೆ."

"ನೀನು ಕೊಂಕಣಿಗನೇ? ಹಾಗಾದರೆ ಫಿರಂಗಿಗಳ ಸೇವೆಯನ್ನೇಕೆ ಮಾಡ ತೊಡಗಿರುವೆ? ನೀನು ಸರಖೇಲರ ಸೇವಕನಿರುವೆಯೆಂದು ತಿಳಿದು ಆಜ್ಞಾಪತ್ರ ಕೇಳಿ ದೆವು. ನಮ್ಮ ಹುಡುಗಾಟಿಕೆಯು ನಮ್ಮ ಮೈಮೇಲೆ ಬಂದಿತು" ಎಂದು ಕುಣ ಕ್ಯಾನು ನುಡಿದನು.

"ನಮ್ಮ ಹಡಗವೆಂದೇ ತಿಳಿದು ಹುಡುಗಾಟಿಕೆ ಮಾಡಿದ್ದು ನಿಜ. ಈ ಹಡಗ ದಲ್ಲಿ ಕುಳಿತು, ಬೇಗನೆ ಬೇನೆಯಿಂದ ನರಳುವ ತಂದೆಯ ಭೆಟ್ಟಿ ತೆಗೆದುಕೊಳ್ಳಬೇಕೆಂ ದರೆ ನಮಗೇ ನರಳುವ ಪ್ರಸಂಗವೊದಗಿತು. ನಾವಿಕಣ್ಣಾ, ನಮ್ಮನ್ನು ಬಿಡುಗಡೆ ಮಾಡಿ ನಮ್ಮ ಬಂದರಕ್ಕೆ ತಲುಪಿಸಿದರೆ ಬಹಳೇ ಉಪಕೃತರಾಗುವೆವು."

"ನಿಮ್ಮ ತಂದೆ ಬೇನೆ ಬಿದ್ದಿರಬಹುದು, ಸಾಯುತ್ತಿರಬಹುದು. ಜೀವಂತ ವಿದ್ದವರನ್ನು ಕೊಲ್ಲುವಂತಹ ಜನರು ನಿಮ್ಮ ರೋದನವನ್ನು ಲಕ್ಷಿಸುವರೇ?" ನಾವಿ ಕನು ದರ್ಪದಿಂದ ನುಡಿದನು.

"ನೀವು ನಮ್ಮನ್ನು ಬಂದರಕ್ಕೆ ಇಳಿಸುವದಿಲ್ಲವೇನು?" ಎಂದೆಂದು, ಕುಣ ಕ್ಯಾನು ದೈನ್ಯದಿಂದಲೇ ಕೇಳಿದನು.

"ಇಲ್ಲ. ನಿಮ್ಮನ್ನು ಇಲ್ಲಿ ಇಳಿಸುವದೇ ಇಲ್ಲ."

"ನಮ್ಮನ್ನು ಒಯ್ಯುವದಾದರೂ ಎಲ್ಲಿಗೆ?" ಎಂದು ಥಾಕಲ್ಯಾನು ಅಳುತ್ತ ಪ್ರಶ್ನೆ ಮಾಡಿದನು.

"ಈ ಹಡಗವು ಪಾಶೀ ನೇರಕ್ಕೆ ಹೋಗುವದಿದೆ. ಅಲ್ಲಿ ನೀವು ದನಗಳಂತೆ ಮಾರಲ್ಪಡುವಿರಿ. ಒಮ್ಮೆ ಗುಲಾಮರಾಗಿ ಮಾರಲ್ಪಟ್ಟರೆಂದರೆ, ನಿಮ್ಮ ಜನ್ಮಭೂಮಿ ಯನ್ನು ಕಾಣುವ ಆಶೆಯೇ ಇಲ್ಲ."

ನಾವಿಕನ ಮಾತು ಕೇಳಿ ಥಾಕಲ್ಯಾನು ರೋದನವನ್ನು ಇಮ್ಮಡಿಸಿದನು. "ಅಯ್ಯೋ ದೇವರೇ! ಇದೇನು ಹೊತ್ತು ತಂದೆ! ತಂದೆಯೇ, ನಿನ್ನ ಅವಸ್ಥೆ ಏನಾ ಗಿದೆಯೋ, ದೇವರೇ ಬಲ್ಲ. ನೀವು ಬಲ್ಲವರಲ್ಲ, ಅಜ್ಞರು; ಅಂತೆಯೇ ಈಗಿನ ಕಟುಫಲವನ್ನು ಉಣಬೇಕಾಯಿತು. ಇಂಥ ಮಂದಬುದ್ಧಿಗೆ ಧಿಃಕಾರ!" ಎಂದು ಅವನು ಅಳತೊಡಗಿದನು

ಕೆಳಗೆ ಇಳಿದು ಬಂದ ನಾವಿಕನು ಫಿರಂಗಿಜಾತಿಯವನಲ್ಲವಾದ್ದರಿಂದ ಈ ಕೊಂಕಣೀಯರ ವಿಷಯವಾಗಿ ದಯೆಯು ಹುಟ್ಟಿತು. ಇವರ ಗದ್ದಲವನ್ನು ಮೇಲಿನ ಫಿರಂಗಿ ನಾವಿಕರು ಕೇಳಿದರೆ, ಇಳಿದು ಬಂದು ಚನ್ನಾಗಿ ಏಟು ಕೊಡಬಹು ದೆಂದು ಬಗೆದು ಅವನು:—"ನೀವು ಸುಮ್ಮನೆ ಇರತಕ್ಕದ್ದು. ಗದ್ದಲ ಮಾಡಿದರೆ

ಪೇಚಾಟಕ್ಕೆ ಬಿದ್ದೀರಿ. ನಿಮ್ಮ ದೈವದಲ್ಲಿ ಬಿಡುಗಡೆಯಾಗಬೇಕೆಂಬದಿದ್ದರೆ ಆಗಿಯೇ ಆಗುವದು. ನಾನು ಮೇಲಿಂದ ಮೇಲೆ ಬಂದು ನಿಮಗೆ ನೀರು ಕೊಡುತ್ತಿರುವೆನು. ನಾನು ಕೊಂಕಣೀಯನೇ ಇದ್ದುದರಿಂದ ನಿಮ್ಮ ಬಿಡುಗಡೆಯಾಗಬೇಕೆಂದು ಇಚ್ಛೆಯುಳ್ಳವನಾಗಿದ್ದೇನೆ, ಆದರೆ ನಿಮ್ಮ ಪ್ರಾರಬ್ಧದಲ್ಲಿ ಹೇಗಿರುವದೋ ಹಾಗಾಗುವದು."

ಕೊಂಕಣೀಯ ನಾವಿಕನು ಇಷ್ಟು ಹೇಳಿ ಮೇಲೆ ಹೋದನು. ಅವನು ಹೋದ ನಂತರ ಅಲ್ಲಿ ಗುದುಮುರಿಗೆ ನಡೆಯಿತು. ಕುಣಕ್ಯಾ-ಧಾಕಲ್ಯಾರಿಗೆ ಮೇಲಿನ ಗದ್ದಲವು ಕೇಳತೊಡಗಿತು. ಆ ನಾವಿಕರಲ್ಲಿ ಒಬ್ಬನು ಅಚ್ಚ ಫಿರಂಗಿಯು, ಇನ್ನೊಬ್ಬನು ಅರ್ಧ ಗೌರನು, ಮತ್ತೊಬ್ಬನು ಕೊಂಕಣೀಯ ನಾವಿಕನು. ಆ ಮೂವರಲ್ಲಿ ಮಾತಿನ ಘರ್ಷಣೆ ನಡೆದು 'ಖಡಖಡ' ಬೂಟುಗಳ ಧ್ವನಿಯು ಕೇಳತೊಡಗಿತು ಅವರಲ್ಲಿ ಗುದ್ದಾಟವೇ ನಡೆಯಿತೆಂದು ಕೆಳಗಿನವರಿಗೆ ತಿಳಿಯಹತ್ತಿತು. ಅಷ್ಟರಲ್ಲಿ ಸಿಕ್ಕಿನ ಧ್ವನಿಯೂ ತುತ್ತೂರಿಯ ಧ್ವನಿಯೂ ಕೇಳಹತ್ತಿತು. ಯಾವುದೋ ಒಂದು ವಿಷಯಕ್ಕಾಗಿ ಮೇಲಿನ ನಾವಿಕರಲ್ಲಿ ದ್ವಂದ್ವವೇ ನಡೆದಿರುವದೆಂದು ಧಾಕಲ್ಯಾ-ಕುಣಕ್ಯಾರು ತಿಳಿದು ಸಂತೋಷಪಟ್ಟರು. ಆ ದ್ವಂದ್ವದಲ್ಲಿ ಅವರು ಮೃತರಾಗಿ ಹೋದರೆ ಲೇಸಾಗುವದೆಂದು ಅವರು ಮನಸ್ಸಿನಲ್ಲಿ ಅನ್ನತೊಡಗಿದ್ದರು.

ಸ್ವಲ್ಪ ವೇಳೆಯ ಮೇಲೆ ಕೊಂಕಣೀ ನಾವಿಕನು ನೀರಿನ ಪಾತ್ರೆ ಹಿಡಿದುಕೊಂಡು ಕೆಳಗೆ ಬಂದನು. ಆಗ ಅವನ ಮೈಮೇಲಿನ ಅರಿವೆಗಳು ಅಲ್ಪ ಸ್ವಲ್ಪ ಹರಿದಿದ್ದವು. ಮೈಮೇಲೆ ಚಿವುರು-ಗಾಯಗಳಾಗಿದ್ದು, ಅಲ್ಪ ಸ್ವಲ್ಪ ರಕ್ತವೂ ಹೊರ ಚಿಮ್ಮುತ್ತಿತ್ತು. ಅವನು ಕೈಬೆರಳಿಗೆ ಒಂದು ಅರಿವೆಯ ಪಟ್ಟಿಯನ್ನು ಕಟ್ಟಿಕೊಂಡಿದ್ದು ನಡೆಯುವಾಗ ಸ್ವಲ್ಪ ಕುಂಟುತ್ತಲಿದ್ದನು. ಬೆನ್ನೆಲುವು ನೋವಾದುದರಿಂದ ಸೆಟೆದು ನಡೆಯಲು ಬರುತ್ತಿರಲಿಲ್ಲ. ಮುಂಚಿನ ದಿನದಂತೆ ಅವನ ಧ್ವನಿಯಲ್ಲಿ ಬಿರಸುತನ ಕಾಣಲಿಲ್ಲ, ಅದು ಬಹಳೇ ಮಾರ್ದವತೆ ಹೊಂದಿತ್ತು. ಏತದ್ದೇಶೀಯ ನಾವಿಕನಾದ ಅವನಿಗೆ ಆ ಸೆರೆಯಾಳುಗಳ ಸಲುವಾಗಿ ಕನಿಕರ ಹುಟ್ಟಿತ್ತು. ಅವನು ಕೆಳಗಿಳಿದು ಬಂದು ಅಲ್ಲಿದ್ದ ಸರಕಿನ ಚೀಲದ ಮೇಲೆ ಕುಳಿತು:—"ನಿಮ್ಮ ಬಗ್ಗೆ ಕೆಲವು ಸಂಗತಿಯನ್ನು ನಾನು ಮೇಲಿನ ಫಿರಂಗಿ ನಾವಿಕರಿಗೆ ತಿಳಿಸಿದೆನು. ಅವರಲ್ಲಿ ಒಬ್ಬನು ಭೂತಸಂಚಾರವಾದವರಂತೆ ನಡೆದನು. ಇನ್ನೊಬ್ಬನು ಅರ್ಧಗೌರನಿದ್ದು ಅವನು ಸಾಧಾರಣವಾಗಿ ನನ್ನ ಪಕ್ಷಪಾತಿಯಿದ್ದಾನೆ. ಅವನಲ್ಲಿ ತುಬಾಕಿ ಶಸ್ತ್ರಾಸ್ತ್ರಗಳಿವೆ. ಅಂತೆಯೇ ನನ್ನ ಅವಸ್ಥೆ ಒಳಿತಾಯಿತು."

ಕುಣಕ್ಯಾನಿಗೆ ಈ ಸಂಧಿಯು ಚೆನ್ನಾಗಿ ಲಭಿಸಿತು. ಆಗ ಅವನು:—"ನಾವಿಕಣ್ಣಾ, ನೀನು ಹಿಂದುವು, ಕೊಂಕಣದ ನಿವಾಸಿಯು. ನನ್ನ ತಂದೆಗೆ ಸಮಾನನಾಗಿ

ರುವ ಸರಖೇಲರ ಸೇವೆ ಬಿಟ್ಟು, ವಿದೇಶಿಗಳಾದ ಫಿರಂಗಿಗಳ ಸೇವೆ ಮಾಡತೊಡಗಿದ್ದು ಅತ್ಯಂತ ಹೇಯವಾದ ಸಂಗತಿ. ಈ ದುಷ್ಟ ಫಿರಂಗಿಗಳು ನಮ್ಮ ದೇಶದವರನ್ನು ಹೀಗೆಯೇ ಮೋಸದಿಂದ ಹಿಡಿದು ವಿದೇಶಕ್ಕೆ ಒಯ್ದು ಮಾರುತ್ತಾರೆಂಬ ಸಂಗತಿಯು ನಿನ್ನಿಂದ ನಮಗೆ ತಿಳಿಯಿತಲ್ಲದೆ, ಅದು ಈಗ ನಮ್ಮ ಅನುಭವಕ್ಕೂ ಬಂದಿದೆ. ನಾವೂ ಅದೇ ಗತಿ ಹೊಂದುವೆವೆಂದು ತಿಳಿದುಕೊಂಡಿದ್ದೇವೆ. ಈ ವೃತ್ತಿಯು ನಿನಗೆ ಸರಿಯಾಗಿ ತೋರುವದೆ? ನೀನು ವಯಾತೀತನಿರುವದರಿಂದಲೂ ಅವರ ಸೇವೆ ಮಾಡುತ್ತಿರುವದರಿಂದಲೂ ನಿನ್ನನ್ನು ಗುಲಾಮನನ್ನಾಗಿ ಮಾರಲಿಕ್ಕಿಲ್ಲ; ಆದರೆ ನಿನ್ನ ಮಕ್ಕಳ ಮೇಲೆ ನಮ್ಮ ಹಾಗೆಯೇ ಪ್ರಸಂಗವೊದಗಲಾರದೆಂದು ಹೇಗೆ ತಿಳಿಯುವೆ? ಸಮುದ್ರಗಳ್ಳತನ ಮಾಡುವದೊಂದೇ ಈ ಜನರ ಕೃತ್ಯವೆಂದು ಬಗೆದಿದ್ದೆನು; ಅದರ ಜೊತೆಗೆ ಈ ಭಯಂಕರ ಕೆಲಸವೂ ಇರುವದೆಂದ ಹಾಗಾಯಿತು."

"ಒಮ್ಮೆ ಮನುಷ್ಯನು ಸ್ವಾತಂತ್ರ್ಯ ಕಳೆದುಕೊಂಡ ಮೇಲೆ ಮಾಡುವದೇನು? ನಮ್ಮ ಸರಖೇಲರ ಕೀರ್ತಿಯನ್ನು ನಾನು ಕೇಳಿದ್ದೇನೆ. ಒಮ್ಮೊಮ್ಮೆ ಅವರ ನೌಕೆಯೊಡನೆ ನಮ್ಮ ನೌಕೆಯ ಯುದ್ಧವು ಜರಗುತ್ತಿದೆ. ಆಗ ನಮ್ಮ ಕೊಂಕಣಿಗಳ ನೌಕಾನಯನ ಪ್ರಾವೀಣ್ಯತೆಯನ್ನೂ ಶೌರ್ಯಧೈರ್ಯಸಾಹಸಗಳನ್ನೂ ನೋಡಿ ಕೌತುಕವಾಗುವದು. ಕೃತಘ್ನ ಫಿರಂಗಿಗಳ ಸೇವೆಯನ್ನು ಬಿಟ್ಟು ಸರಖೇಲರ ಸೇವೆ ಹಿಡಿಯಬೇಕೆಂಬ ಯೋಚನೆ ನನ್ನಲ್ಲಿ ಆಗಾಗ ಹುಟ್ಟುತ್ತಿದೆ. ನಿಮ್ಮನ್ನು ಇದೇ ಬಂದರದಲ್ಲಿ ಬಿಡಬೇಕೆಂದು ನಾನು ಫಿರಂಗಿಗೆ ಹೇಳಿದೆನು. ಅವನು ನನ್ನನ್ನು ಒಳತಾಗಿ ತಳಿಸಿದನು. ಅವನು ಮುಖ್ಯ ನಾವಿಕನಿರುವದರಿಂದ ನಾನು ಎಲ್ಲ ಬಗೆಯ ಅಪಮಾನ ಸಹಿಸಬೇಕಾಯಿತು.

ಕುಣಕ್ಯಾನು ಕೊಂಕಣೀ ನಾವಿಕನ ಮಾತು ಕೇಳಿ ಸಂಭ್ರಮಗೊಂಡನು. ಆ ನಾವಿಕರಲ್ಲಿ ವಿತುಷ್ಣತೆಯುಂಟಾದದ್ದೇ ತಮಗೆ ಕ್ಷೇಮಕರವಾಯಿತೆಂದೂ ಆ ವಿತುಷ್ಣತೆಯ ಲಾಭತೆಗೆದುಕೊಳ್ಳಲಿಕ್ಕೆ ಸಂಧಿದೊರೆಯಿತೆಂದೂ ಅವನು ತಿಳಿದನು. ಆಗ ಅವನು:—"ಪರಕೀಯರ ಸೇವೆ ಮಾಡಬಾರದು. ಸ್ವಕೀಯರಲ್ಲಿ ಇಂಥ ಕಠೋರತೆಯು ಎಂದೂ ಉಂಟಾಗುತ್ತಿರುವದಿಲ್ಲ. ಕೈಕೆಳಗಿನವರ ಮೇಲೆ ಹೀಗೆ ನಿರ್ದಯತನ ಮಾಡುವದನ್ನು ನಾನು ನಮ್ಮ ಸರಖೇಲರ ರಾಜ್ಯದಲ್ಲಿ ಇದುವರೆಗೂ ಕಂಡಿಲ್ಲ. ನಾವಿಕಣ್ಣ, ನಮ್ಮ ಹಾಗು ನಿನ್ನ ಬಿಡುಗಡೆಯಾಗಬೇಕೆಂದು ಈಶಸಂಕೇತವಿದ್ದುದರಿಂದ ನಿನ್ನಲ್ಲಿ ವಿತುಷ್ಣತೆಯುಂಟಾಗಿರುವದು. ನಿನ್ನ ಇಚ್ಛೆಯಿದ್ದರೆ ಹೇಳು. ನಾವೂ ನೀವೂ ಕೂಡಿಯೇ ಆ ಫಿರಂಗಿಯ ಪಾರುಪತ್ಯ ಮಾಡೋಣ. ನೀನು ಆ ಫಿರಂಗಿ ನಾವಿಕನಲ್ಲಿಯ ಶಸ್ತ್ರಾಸ್ತ್ರ ತುಬಾಕಿ ಕಸಿದುಕೊಂಡು ಸಮುದ್ರದಲ್ಲಿ ಚೆಲ್ಲು. ಒಂದು

ವೇಳೆ ದ್ವಂದ್ವವು ಉಪಸ್ಥಿತವಾದರೆ ನಾವು ಮೂವರು ಆ ಇಬ್ಬರೂ ಫಿರಂಗಿಗಳನ್ನು ಹೊರುವೆವು. ನೀನು ಪರಕೀಲರ ಸೇವೆಯಲ್ಲಿರಲು ಮನಸ್ಸು ಮಾಡಿದರೆ ನಿಮ್ಮ ಫಿರಂಗಿಯ ಪಾರುಪತ್ಯ ಮಾಡುವದಕ್ಕೆ ನಾವು ಸಹಾಯರಾಗುವೆವು."

ಕುಣಕ್ಯಾನ ಮಾತು ಕೇಳಿ ಕೊಂಕಣದ ನಾವಿಕನ ಮನಸ್ಸು ಸ್ಥಿತ್ಯಂತರ ಹೊಂದಿತು. ದುಷ್ಟರಾದ ವಿದೇಶೀಯರ ಸೇವೆ ಮಾಡುವದಕ್ಕಿಂತ ಸುಷ್ಟರಾದ ಸ್ವಜನರ ಸೇವೆ ಮಾಡುವದು ವಿಹಿತವೆಂದು ಅವನಿಗೆ ತೋರಿತು. ಆಗ ಅವನು: "ಇದು ವ್ಯಾಪಾರೀ ಹಡಗವು. ಫಿರಂಗಿಗಳ ಹೊರತು ಯಾರೂ ಇಲ್ಲಿ ಬರುವದಿಲ್ಲ. ಆದ್ದರಿಂದ ನನ್ನ ಬಿಡುಗಡೆಯ ಆಶೆಯೇ ಇದ್ದಿಲ್ಲ. ಇಂದು ಅವರ್ಣನೀಯ ಸಂಯೋಗದಿಂದ ನಿಮ್ಮ ನೆರವು ದೊರೆಯಿತು. ನಾನು ನಿಮ್ಮ ಕಟ್ಟುಗಳನ್ನು ಸಡಿಲಿಸುವೆನು. ನೀವು ಮೊದಲಿನ ಹಾಗೆಯೇ ಬಿದ್ದುಕೊಂಡಿರಬೇಕು. ಮುಂದೆ ನಾನು ಸೂಚನೆ ಮಾಡಿದ ಮೇರೆಗೆ ಕಾರ್ಯ ಮಾಡಬೇಕು."

ಕೊಂಕಣದ ನಾವಿಕನು ಕುಣಕ್ಯಾ-ಥಾಕಲ್ಯಾರ ಹಗ್ಗದ ಕಟ್ಟುಗಳನ್ನು ಸಡಿಲಿಸಿ ಮೇಲೆ ಹೋದನು. ಮುಂದೆ ಸ್ವಲ್ಪ ಹೊತ್ತಿನಲ್ಲಿಯೇ ಮೇಲ್ಭಾಗದಲ್ಲಿ ವಾದವಿವಾದವು ನಡೆಯಿತು. ಆಗ ಕುಣಕ್ಯಾನು ಥಾಕಲ್ಯಾನಿಂದ ಕತ್ತಿಯನ್ನು ತೆಗೆದುಕೊಂಡು ಕೊಂಕಣದ ನಾವಿಕನ ಸೂಚನೆಯ ಹಾದಿ ನೋಡುತ್ತ ಬಿದ್ದುಕೊಂಡನು. ಸ್ವಲ್ಪ ವೇಳೆಯ ಮೇಲೆ ಕೊಂಕಣದ ನಾವಿಕನ ಆರ್ತ ಧ್ವನಿಯು ಕೇಳಿತು. ಕೂಡಲೆ ಕುಣಕ್ಯಾ-ಥಾಕಲ್ಯಾರಿಬ್ಬರೂ ಎದ್ದರು. ಕುಣಕ್ಯಾನು ಕತ್ತಿಯನ್ನು ಕೈಯಲ್ಲಿ ತೆಗೆದುಕೊಂಡನು, ಥಾಕಲ್ಯಾನು ತಳಮನೆಯಲ್ಲಿ ಬಿದ್ದಿದ್ದ ಕಬ್ಬಿಣದ ತುಂಡನ್ನು ತೆಗೆದುಕೊಂಡನು. ಇಬ್ಬರೂ ಮೇಲೆ ಬಂದು ನೋಡುತ್ತಾರೆ, ಅರ್ಧ ಗೌರನಿಗೂ ದೇಶೀಯ ನಾವಿಕನಿಗೂ ದ್ವಂದ್ವವು ನಡೆದಿದೆ! ಕೂಡಲೆ ಕುಣಕ್ಯಾನು ಆ ಫಿರಂಗಿಯ ಹಿಂದೆ ಹೋಗಿ ಅವನನ್ನು ಹಿಡಿದನು. ಕೊಂಕಣದ ನಾವಿಕನು ಹಿಂದೆ ಸರಿದು ಆ ಫಿರಂಗಿಯ ಎದೆಗೆ ಶಕ್ತಿಯಿಂದ ಗುದ್ದಿದನು. ಕೂಡಲೆ ಫಿರಂಗಿಯು ನಿಶ್ಚೇಷ್ಟಿತನಾಗಿ ಭೂಮಿಗೆ ಬಿದ್ದನು. ತರುವಾಯ ಕುಣಕ್ಯಾನು--"ನಿನ್ನ ಮುಖ್ಯ ಅಧಿಕಾರಿಯಾದ ಆ ಫಿರಂಗಿಯು ಎಲ್ಲಿರುವನು? ಎಂದು ಕೊಂಕಣೀ ನಾವಿಕನನ್ನು ಕೇಳಿದನು.

"ಇದೇ ಕೋಣೆಯಲ್ಲಿ ಅವನನ್ನು ಬಂಧಿಸಿಟ್ಟಿದ್ದೇನೆ" ಎಂದು ಆ ನಾವಿಕನು ಹೇಳುತ್ತಿರುವಾಗ ಕೋಣೆಯಲ್ಲಿ ಗದ್ದಲವೂ ಬಾಗಿಲ ಸಪ್ಪಳವೂ ಕೇಳತೊಡಗಿತು.

"ಫಿರಂಗಿಯ ಅವಸ್ಥೆ ಚನ್ನಾಗಿ ಆಯಿತು. ನಾನು ಅವನ ಸಮಾಚಾರ ತೆಗೆದುಕೊಳ್ಳುವೆನು. ಥಾಕಲ್ಯಾ, ನೀನು ಈ ಫಿರಂಗಿಯ ಗತಿಯೇನಾಗಿದೆಯೋ ನೋಡು"

ಅರ್ಥಗೌರನ ಅವಸ್ಥೆಯು ಮುಗಿದು ಹೋಗಿತ್ತು. ಅವನು ಗತಪ್ರಾಣನಾಗಿಯೇ ಬಿದ್ದಿದ್ದನು. ಆಗ ಕುಣಕ್ಯಾನು:—"ಒಬ್ಬನ ಪಾರುಪತ್ಯವಾಯಿತು. ಇನ್ನು ಕೆಲಸ ಕಠಿಣವಿಲ್ಲ. ನಾವು ಮೂವರಿದ್ದೇವೆ. ಇವನೊಬ್ಬನನ್ನು ಅವನ ಹಾಗೆ ಹಚ್ಚುವದೇನೂ ದೊಡ್ಡ ಮಾತಲ್ಲ" ಎಂದು ಕುಣಕ್ಯಾನು ಹೇಳಿ, ಥಾಕಲ್ಯಾನಿಗೆ:-"ನೀನು ಮೃತನಾದ ಫಿರಂಗಿಯ ಕಲೇವರವನ್ನು ಸಮುದ್ರದಲ್ಲಿ ಚೆಲ್ಲಿಬಿಡು. ನಾನು ಈ ಫಿರಂಗಿಯ ಕಾವಲಿನ ಕೆಲಸ ಮಾಡುವೆನು."

ಥಾಕಲ್ಯಾನೂ ನಾವಿಕನೂ ಮೃತನ ಕಲೇವರವನ್ನು ಸಮುದ್ರದಲ್ಲಿ ಚೆಲ್ಲಿದರು, ಅನಂತರ ಅವರು ಕುಣಕ್ಯಾನ ಬಳಿಗೆ ಬಂದರು. ಆಗ ನಾವಿಕನು:—'ನಿಮ್ಮ ಸಹಾಯದಿಂದ ನನ್ನ ಮೇಲಿನ ಗಂಡಾಂತರವು ದೂರಾಯಿತು. ನಿಮ್ಮ ಉಪಕಾರವನ್ನು ಎಂದೂ ಮರೆಯಲಾರೆನು. ನೀವಿಬ್ಬರೂ ಹುಡುಗರಾದರೂ ಬಹಳೇ ಧೈರ್ಯಶಾಲಿಗಳೂ ಶೂರರೂ ಇರುವಿರಿ. ನಿಮ್ಮಂತಹನು ಭಾರತಮಾತೆಯ ಪುತ್ರರೆನಿಸಿಕೊಳ್ಳಲು ಯೋಗ್ಯರಾಗಿರುವಿರಿ."

ನಾವಿಕನು ಕುಣಕ್ಯಾನನ್ನೂ ಥಾಕಲ್ಯಾನನ್ನೂ ಹೀಗೆ ಕೊಂಡಾಡುತ್ತಿರಲು, ಕೋಣೆಯಲ್ಲಿಯ ಸಪ್ಪಳವು ಹೆಚ್ಚಾಯಿತು. ಹಲಗೆಗಳು ಮುರಿದು ಹೋಗುವಂತೆ ಒಳಗಿನ ಫಿರಂಗಿಯು ಅವುಗಳಿಗೆ ಪೆಟ್ಟುಕೊಡತೊಡಗಿದನು. ಆಗ ಕೊಂಕಣೀ ನಾವಿಕನು:—"ಇಷ್ಟು ದಿನಗಳ ವರೆಗೆ ನೀನು ಅನೇಕ ಬಗೆಯಾಗಿ ನನ್ನನ್ನು ಕಾಡಿದೆ ನಿನ್ನ ಪಾಪವೇ ನಿನ್ನನ್ನು ತಿನ್ನುತ್ತದೆ. ನಿನ್ನ ಸಂಗಡಿಗನೊಬ್ಬನು ಮಕರ-ಮೀನಗಳಿಗೆ ಆಹುತಿಯಾಗಲು ಸಮುದ್ರ ಸೇರಿದನು. ನೀನು ಒಳ್ಳೆಯ ಮಾತಿನಿಂದ ನಮ್ಮ ವಶವಾಗದಿದ್ದರೆ ನಿನ್ನ ಅವಸ್ಥೆಯೂ ಹಾಗೆಯೆ ಆಗುವದು."

ಈ ಮಾತು ಕೇಳಿ ಒಳಗಿನ ಫಿರಂಗಿಯು ತೆಪ್ಪಗಾದನು. ಅವನು ದುಃಖದಿಂದಲೂ, ನಾಚಿಕೆಯಿಂದಲೂ, ಭಯದಿಂದಲೂ—'ಏಸುವಿನ ಇಚ್ಛೆ" ಎಂದು ನುಡಿದು ನಿಟ್ಟುಸಿರು ಬಿಟ್ಟನು.

'ನಿನ್ನ ಏಸುವಿನ ಇಚ್ಛೆ ಹೇಗಾದರೂ ಇರಲಿ, ನಿನ್ನ ಇಚ್ಛೆ ಹೇಗಿದೆ ಹೇಳು" ಎಂದು ನಾವಿಕನು ಗರ್ಜಿಸಿದನು.

"ಒಳ್ಳೇದು. ನಾನು ನಿನ್ನ ವಶನಾಗುವೆನು."

"ಏನಾದರೂ ಗದ್ದಲ ಮಾಡಿದರೆ ಜೀವಕ್ಕೆ ಎರವಾಗುವೆ. ನಿನ್ನ ಶಸ್ತ್ರಾಸ್ತ್ರಗಳು ಸಮುದ್ರ ಪಾಲಾಗಿವೆ. ನಿನಗೆ ಅವುಗಳ ಬಲವೂ ಇಲ್ಲದ್ದರಿಂದ ವ್ಯರ್ಥನಾಗಿ ಚಲನವಲನ ಮಾಡಬೇಡ."

'ಇಲ್ಲ; ಏನೂ ಚಲನವಲನ ಮಾಡುವದಿಲ್ಲ.

ನಾವಿಕನು ಬಾಗಿಲ ತೆಗೆದನು. ಪಿರಂಗಿಯು ಒಳಗಿಂದ ಕೇಕುತ್ತ ಹೊರಗೆ ಬಂದನು. ಕೂಡಲೆ ಮೂವರು ಏರಿ ಹೋಗಿ ಅವನನ್ನು ಹಿಡಿದು ಹಗ್ಗದಿಂದ ಹೆಡಮುರಿಗೆ ಬಿಗಿದು ಚಲ್ಲಿದರು. ಆಗ ನಾವಿಕನು:—"ಈ ಪಿರಂಗಿಯನ್ನು ತಳ ಮನೆಯಲ್ಲಿಯೇ ಹಾಕಿಬಿಡೋಣ. ಅಂದರೆ ಮುಯ್ಯಕ್ಕೆ ಮುಯ್ಯ ಮುಟ್ಟುವದು."

"ಹಾಗೆಯೆ ಆಗಲಿ" ಎಂದು ಥಾಕಲ್ಯಾ-ಕುಣಕ್ಯಾರು ನುಡಿದು, ಅವನನ್ನು ಎತ್ತಿ ತಳಮನೆಯಲ್ಲಿ ಹಾಕಿದರು.

ತರುವಾಯ ದೇಶೀಯ ನಾವಿಕನು:—"ಮಿತ್ರರೇ, ದೇವರು ನಿಮ್ಮ ಕಲ್ಯಾಣ ಮಾಡಲಿ. ದೇವರ ಅನುಗ್ರಹದಿಂದ ನಮ್ಮ ನಿಮ್ಮ ಭೆಟ್ಟಿಯಾಯಿತು. ನಾನು ಪಿರಂಗಿಯ ದಾಸ್ಯದಲ್ಲಿ ಬೇಸತ್ತು ಹೋಗಿದ್ದೆನು. ಇಂದು ನಿಮ್ಮ ನೆರವಿನಿಂದ ದಾಸ್ಯ ವಿಮೋಚನೆಯಾಯಿತು. ಈ ಪಿರಂಗಿಗಳ ಕಾಟಕ್ಕಾಗಿ ಸಮುದ್ರ ಹಾರಿಕೊಳ್ಳಬೇಕೆನಿಸುತ್ತಿತ್ತು; ಒಮ್ಮೊಮ್ಮೆ ಅವರನ್ನೇ ಕೊಂದು ಪಾರಾಗಿ ಹೋಗಬೇಕೆನಿಸುತ್ತಿತ್ತು. ಹೇಡಿಯಾದ ನನ್ನಿಂದ ಜೀವ ಕೊಡಲೂ ಆಗಲಿಲ್ಲ; ಜೀವ ಕಳೆಯಲೂ ಆಗಲಿಲ್ಲ. ಹೀಗೆಯೇ ಒಂದೇಸವನೆ ಗೋಳಾಡುತ್ತಿದ್ದೆನು. ನೀವು ದೇವರಾಗಿ ಬಂದಿರಿ" ಎಂದು ಇಬ್ಬರಿಗೂ ಹೇಳಿ, ಕುಣಕ್ಯಾನನ್ನು ಕುರಿತು:—"ನೀನು ಈ ಹುಡುಗನಿಗಿಂತ ಶೂರನಿರುವೆ, ಯುಕ್ತಿವಂತನಿರುವೆ, ಸಾಹಸಿಯಿರುವೆ. ನನ್ನ ಬಿಡುಗಡೆಯ ಶ್ರೇಯವು ಪೂರ್ಣವಾಗಿ ನಿನ್ನದೇ ಎಂದು ನಾನು ಮನಃಪೂರ್ವಕವಾಗಿ ಒಪ್ಪುತ್ತೇನೆ. ನಾನು ನನ್ನ ಶೇಷಾಯುಷ್ಯವನ್ನು ಸರಖೇಲರ ಸೇವೆಯಲ್ಲಿ ಕಳೆಯುವೆನು."

ಥಾಕಲ್ಯಾನು ಮನೋರಾಜ್ಯವನ್ನು ನಿರ್ಮಿಸಿದ್ದನು. ಇಂದಿನ ಎಲ್ಲ ಘಟನೆಗಳನ್ನು ಹೇಳಿ, ಮುಖ್ಯವಾಗಿ ರತನೆಯ ಎದುರಿನಲ್ಲಿ ವರ್ಣಿಸಿ ಎಲ್ಲ ಪರಾಕ್ರಮವು ತನ್ನಿಂದ ಘಟಿಸಿತೆಂದು ಹೇಳಬೇಕೆಂದು ಮನಸ್ಸಿನಲ್ಲಿ ಗೊತ್ತುಮಾಡಿಕೊಂಡಿದ್ದನು; ಆದರೆ ಈ ಇನ್ನೊಬ್ಬ ನಾವಿಕನು ನಿಜಸ್ಥಿತಿಯನ್ನು ಹೇಳಿದರೆ ತನ್ನ ಮಾತು ಸಟಿಯಾಗಿ ಅವಳು ತನ್ನಲ್ಲಿ ಮತ್ತಿಷ್ಟು ಅವಿಶ್ವಾಸವುಳ್ಳವಳಾಗುವಳಲ್ಲಿಯೋ ಎಂಬ ಭಯವೂ ಅವನನ್ನು ಬಾಧಿಸುತ್ತಿತ್ತು. ಮೊದಲೇ ಕುಣಕ್ಯಾನಲ್ಲಿ ಪ್ರೇಮವುಳ್ಳವಳಾಗಿದ್ದ ರತನೆಯು ಇಂದಿನ ಅವನ ಪರಾಕ್ರಮದ ಸುದ್ದಿಯಿಂದ ಮತ್ತಿಷ್ಟು ಪ್ರೇಮವುಳ್ಳವಳಾಗಿ ತನ್ನನ್ನು ತಿರಸ್ಕರಿಸುವದು ನಿಜವೆಂದು ಅವನು ದುಃಖಿಸತೊಡಗಿದನು. ಆಗ ಅವನು ತನ್ನ ಮನಸ್ಸಿನ ಸಮಾಧಾನಕ್ಕಾಗಿ ಕೊಂಕಣೀ ನಾವಿಕನನ್ನು ಕುರಿತು:—"ಇಂದು ಕುಣಕ್ಯಾನು ಪರಾಕ್ರಮ ತೋರಿಸಿದ್ದು ನಿಜ, ಆದರೆ ನಾನೂ ಕಬ್ಬಿಣದ ತುಂಡು ಎತ್ತಿಕೊಂಡು ಬಂದೆ; ಪಿರಂಗಿಗೆ ತೆಕ್ಕೆಬಿದ್ದೆ; ಅರ್ಧಗೌರನ ಶವವನ್ನು ಸಮುದ್ರದಲ್ಲಿ ಬಿಸುಟಿದೆ. ಇವೆಲ್ಲ ಪರಾಕ್ರಮದ ಕೆಲಸಗಳಲ್ಲವೆ?"

"ನೀನು ಮಾಡಿದಂತಹ ಕೆಲಸವನ್ನು ಒಬ್ಬ ಕೈಲಾಗದವನೂ ಮಾಡು ವನು.ಶವದ ಕೂಡ ಬಡಿದಾಡಿನೆನು; ಕಬ್ಬಿಣ ತುಂಡು ಎತ್ತಿಕೊಂಡು ಬಂದೆನು, ಹೆಡಮುರಿಗೆ ಬಿಗಿದವನನ್ನು ಎತ್ತಿ ತಳಮನೆಯಲ್ಲಿ ಹಾಕಿದೆನು ಮೊದಲಾದ ಸಂಗತಿ ಗಳಿಂದ ಪರಾಕ್ರಮವು ಪ್ರಕಟವಾಗುವದಿಲ್ಲ. ಈ ನಿನ್ನ ಮಿತ್ರನ ನೆರವಿಲ್ಲದಿದ್ದರೆ ನಾನೂ ನೀನೂ ಪಾರಾಗುತ್ತಿರಲಿಲ್ಲ. ಇವನು ಅಖಂಡ ಧೈರ್ಯಶಾಲಿಯು, ಅಪ್ರತೀಮ ಸಾಹಸಿಯು. ನೀನು ಭಯಗೊಂಡು ಗತಪ್ರಾಣನಂತೆ ಬಿದ್ದುಬಿಟ್ಟಿದ್ದೆ. ಇಂದಿನ ಪರಾ ಕ್ರಮದಲ್ಲಿ ನಿನಗೆ ಎಷ್ಟೂ ಶ್ರೇಯವಿಲ್ಲ. ರೋದನದಲ್ಲಿ ಮಾತ್ರ ನಿನ್ನ ಕಲೆಯು ವರ್ಣನೀಯವಿರುವದೆಂಬ ಸಂಗತಿಯನ್ನಷ್ಟೇ ನಾನು ಒಪ್ಪುವೆನು. ಈ ಮಾತನ್ನು ಮಾತ್ರ ಪ್ರಸಂಗವೊದಗಿದರೆ ಪರಖೇಲರ ಕಿವಿಗಳವರೆಗೂ ಮುಟ್ಟಿಸುವನು."

"ಯಾರ ಮುಂದೆ ಹೇಳಿದರೂ ರತನೆಯ ಮುಂದೆ ಇದನ್ನು ಹೇಳಬೇಡ ನಾವಿಕಣ್ಣಾ!"

"ರತನೆಯೆಂದರೆ ಯಾರು? ನಿನ್ನ ಪ್ರಣಯಿನಿಯೋ, ಹೆಂಡತಿಯೋ?"

'ಹೌದು, ಅಲ್ಲಲ್ಲ, ಅವಳು ನನ್ನಲ್ಲಿ ಪ್ರಣಯವುಳ್ಳವಳಿದ್ದಂತೆ ತೋರುವದಿಲ್ಲ. ಹೆಂಡತಿಯಾಗುವ ಭರವಸೆಯೂ ಇಲ್ಲ. ಪ್ರಯತ್ನಿಸಿ ನೋಡಬೇಕಾಗಿದೆ. ಅವಳು ನನ್ನ ಚಿಕ್ಕಂದಿನ ಗೆಳತಿ."

"ನಾನು ಹೇಳದಿದ್ದರೂ ಕರ್ಣೋಪಕರ್ಣವಾಗಿ ಅವಳಿಗೆ ನಿಜ ಸಂಗತಿ ತಿಳಿದೇ ತಿಳಿಯುವದು" ಎಂದು ನಾವಿಕನು ಹೇಳಿದನು.

ಫಿರಂಗಿಯಿಂದ ಬಿಡುಗಡೆಯಾದ ಆನಂದವು ಎಲ್ಲರಿಗೂ ಆಗಿತ್ತು. ಕುಣಕ್ಯಾನ ಪರಾಕ್ರಮದಿಂದ ತನ್ನ ತೇಜೋಭಂಗವಾಗುವದೆಂದೂ ಕುಣಕ್ಯಾ-ರತನೆಯರಲ್ಲಿಯ ಪ್ರಣಯವು ದೃಢವಾಗಿ, ಅವಳು ತನ್ನ ಪಾಲಿಗೆ ಎರವಾಗುವಳೆಂದೂ ಧಾಕಲ್ಯಾನ ದುಃಖಿಸತೊಡಗಿದನು. ಅಂದಿನ ಆನಂದವು ಧಾಕಲ್ಯಾನಿಗೆ ದುಃಖಮಿಶ್ರವಾಗಿತ್ತು ಮಾತ್ಸರ್ಯಮಿಲಿತವಾಗಿತ್ತು. ಬಿಡುಗಡೆಯಾಗದಿದ್ದರೇ ನೆಟ್ಟಗಿತ್ತೇನೋ ಎಂಬ ಯೋಚನೆಯು ಕೂಡ ಅವನಲ್ಲಿ ಕೆಲವು ವೇಳೆ ಬಂದು ಹೋಯಿತು. ಧಾಕಲ್ಯಾನ ಮನಸ್ಸಿನಲ್ಲಿ ಕುದಿಯುತ್ತ ಕುಳಿತಿರುವಾಗ ವೇಳೆಯ ನಾವಿಕನು ಹಡಗವನ್ನು ಸಾಗಿಸಿ ದನು. ಕುಣಕ್ಯಾನೂ ನಾವಿಕನೂ ಸಂಭ್ರಮದಿಂದ ಮಾತಾಡುತ್ತ ಕುಳಿತಿದ್ದರು ಧಾಕಲ್ಯಾನು ಮಾತ್ರ ಮೋರೆ ಸಪ್ಪಗೆ ಮಾಡಿಕೊಂಡು ಸುಮ್ಮನೆ ಕುಳಿತಿದ್ದನು ಕುಣಕ್ಯಾ ಹಾಗು ನಾವಿಕರ ಭಾಷಣಗಳೂ ಹಾಸ್ಯವೂ ಅವನಿಗೆ ತುಂಬಾ ಕಷ್ಟಕರವಾಗಿ ಪರಿಣಮಿಸುತ್ತಿದ್ದವು. ಮತ್ಸರಗ್ರಸ್ತರ ಅವಸ್ಥೆ ಹೀಗೆಯೇ ಸರಿ.

# ಸರಖೇಲನ ಹಸ್ತಕ.

## ( ೧ )

ಮುಂಚಿನ ರಾತ್ರಿಯಲ್ಲಿ ನಿದ್ರೆ ಹೋದ ಸೂರ್ಯನೂ ಮಾರುತನೂ ಎಚ್ಚತ್ತು ಸಮುದ್ರ ಕ್ರೀಡಾಂಗಣದ ಮೇಲೆ ಆಟವಾಡತೊಡಗಿದ್ದರು. ಸೂರ್ಯನು ತನ್ನ ಸುಖಮಯವಾದ ಸೂಕ್ಷ್ಮ ಕಿರಣಗಳನ್ನು ಪಶ್ಚಿಮಕ್ಕೆ ಕಳುಹಿಸತೊಡಗಿದ್ದನು; ಪೂರ್ವ ದಿಶೆಗೆ ಬೀಸತೊಡಗಿದ್ದ ಶೀತಲ ಮಾರುತನಿಂದ ಆ ಕಿರಣಗಳು ಆಂದೋಲನ ಹೊಂದತೊಡಗಿದ್ದವು. ಮುಂಜಾನೆ ಮತ್ಸ್ಯ ಕಾಳಗಕ್ಕೆ ಹೋದ ನೌಕೆಗಳು ತಿರುಗಿ ದಂಡೆಗೆ ಬರತೊಡಗಿದ್ದವು. ಮತ್ಸ್ಯಯುದ್ಧದಲ್ಲಿ ದಣಿದ ಕೋಳಿ ನಾವಿಕರಿಗೆ ಮೀನಗಳ ಭಾರದಿಂದ ಜಡವಾದ ನೌಕೆಗಳನ್ನು ಸಾಗಿಸಲು ಶ್ರಮವಾಗಬಾರದೆಂದು ಮಾರುತನು ಶೀಡೆಗಳನ್ನು ತುಂಬಿ ವೇಗವಾಗಿ ನೌಕೆಗಳನ್ನು ನಡೆಯಿಸತೊಡಗಿದ್ದನು. ನಾವಿಕರು ಪರೋಪಕಾರ ಬುದ್ಧಿಯ ಮಾರುತನನ್ನು ಮನಸ್ವೀಯಾಗಿ ಹೊಗಳತೊಡಗಿದ್ದರು.

ಸಮುದ್ರದ ದಂಡೆಯಲ್ಲಿ ಕೋಳಿ ನಾವಿಕರ ಹುಡುಗರ ಆಟ ಸಾಗಿತ್ತು. ಅವರು ಕೇವಲ ಲಂಗೋಟಿಯನ್ನು ಹಾಕಿಕೊಂಡು ಬರಿಮೈಯಿಂದ ಆಟವಾಡತೊಡಗಿದ್ದರು. ಕೆಲವು ಹುಡುಗರು ತಮ್ಮತಮ್ಮೊಳಗೆ ಬೈದಾಡುತ್ತಿದ್ದರು; ಕೆಲವು ಹುಡುಗರು ಗಿಡಗಳ ಮೇಲೆ ಕುಳಿತು ಹಾಡುವ ಪಕ್ಷಿಗಳನ್ನು ಅಣಕಿಸುತ್ತಿದ್ದರು. ಕೆಲವು ಹುಡುಗರು ಬಲೆಗಳ ಜಂತೆಕೋಲುಗಳನ್ನೇರುತ್ತ ಇಳಿಯುತ್ತಲೂ ಕೆಲವು ಹುಡುಗರು ಬಂದರೊಳಗಿನ ಮಂಗಗಳಂತೆ ಚೇಷ್ಟಿಸುತ್ತಲೂ ವೇಳೆಗಳೆಯುತೊಡಗಿದ್ದರು. ಕೆಲವು ಹುಡುಗರು ಉಸುಕಿನಲ್ಲಿ ದುಂಡಗೆ ಕುಳಿತು ಹರಟೆ ಕೊಚ್ಚುತ್ತಿದ್ದರು.

"ಕೋಟೆಯೊಳಗಿನ ಫಿರಂಗಿ ಸೆರೆಯಾಳು ನಿನ್ನೆ ರಾತ್ರಿಯೆಲ್ಲೆಲ್ಲ ಎಷ್ಟು ಗಲಭೆ ಎಬ್ಬಿಸಿದ್ದನೆಂಬುದು ನಿಮಗೆ ಗೊತ್ತಿದೆಯೇ? ಅವನ ಕೂಗು ಚೀರುವಿಕೆ ಕೇಳಿ ಹೆದರಿ ನನ್ನವ್ವನ ಮಗ್ಗಲಿಗೆ ಹೋಗಿ ಮಲಗಿದವನು ಬಳ್ಳಗೆ ಬೆಳಗಾದ ಮೇಲೆಯೇ ಹಾಸಿಗೆಯನ್ನು ಬಿಟ್ಟೆನು.'

"ಫಿರಂಗಿಗಳೆಂದರೆ ನನಗೆ ಅಂಜಿಕೆ ಬರುವದೇನೋ? ಸೆರೆಯಾಳಾದ ಫಿರಂಗಿಯು ಬಂಧಿಸಲ್ಪಟ್ಟಿದ್ದನು. ಅವನಿಗಾಗಿ ಅಷ್ಟೇಕೆ ಅಂಜಿದೆ? ನಾನಾಗಿದ್ದರೆ ಎಷ್ಟು ಹೆದರುತ್ತಿದ್ದಿಲ್ಲ ನೋಡು. ನೀನು ಬಲು ಪುಕ್ಕ."

"ನಿನ್ನ ಗಟ್ಟಿಗತನ ನನಗೆ ಬರುವದಿಲ್ಲ. ಅವನು ಅಷ್ಟೇಕೆ ಚೀರುತ್ತಿರಬಹುದು?"

"ಅವನನ್ನು ಯಾರಾದರೂ ಹೊಡೆಯುತ್ತಿರಬಹುದೋ?"

"ಛೆ! ಫಿರಂಗಿಗಳನ್ನು ಯಾರು ಹೊಡೆಯುವರು? ಸೆರೆಯಾಳುಗಳು ಯಾರೇ ಇರಲಿ. ಅವರನ್ನು ಶಾಸನ ವಿರುದ್ಧವಾಗಿ ಹಿಂಸೆಪಡಿಸಬಾರದೆಂದು ಸರಖೇಲರ ಆಜ್ಞೆ

ಯಿದೆ. ಮೊದಮೊದಲು ಈ ಬಗೆಯ ಕಟ್ಟಳೆಯಿದ್ದಿಲ್ಲವಂತೆ. ಸೆರೆಯಾಳುಗಳನ್ನು ಹೇಗೆ ಬೇಕೋ ಹಾಗೆ ನಡೆಯಿಸಿಕೊಳ್ಳುತ್ತಿದ್ದರಂತೆ. ಮನಬಂದಂತೆ ಹಿಂಸಿಸುತ್ತಿದ್ದರಂತೆ; ಆದರೆ ನಮ್ಮ ನಾಡು ಪುಣ್ಯವಂತನಾದ ಶಿವಛತ್ರಪತಿಯ ಸ್ವರಾಜ್ಯದಲ್ಲಿ ಸೇರ್ಪಡೆಯಾಗಿರುವದಂತೆ. ಆ ಧರ್ಮರಾಜನ ಆಜ್ಞೆಯಿಂದಲೇ ನಮ್ಮ ಸರಖೇಲರು ಹೀಗೆ ಆಜ್ಞೆ ವಿಧಿಸಿದ್ದಾರೆ. ಪಿರಂಗಿಗಳು ಮಾತ್ರ ನಮ್ಮ ಸೆರೆಯಾಳುಗಳನ್ನು ಹಿಂಸಿಸುವರಂತೆ; ತೆಗೆದುಕೊಂಡು ಹೋಗಿ ದನಗಳಂತೆ ಮಾರುವರಂತೆ. ಅವರು ಹಾಗೆ ಮಾಡಿದ ಮೇಲೆ ಅವರಿಗೆ ನಾವೂ ಏಕೆ ಕೈ ತೋರಿಸಬಾರದೋ ಏನೋ?"

"ನಿನಗೆ ಇಷ್ಟೆಲ್ಲ ಸಂಗತಿಗಳು ಹೇಗೆ ತಿಳಿದವು?"

"ಅಪ್ಪನು ದಿನಾಲು ಪಿರಂಗಿಯ ಕಾವಲಿನ ಕೆಲಸಕ್ಕೆ ಹೋಗುವನು. ಅವನು ಮನೆಗೆ ಬಂದಾಗ ರಾಜ್ಯಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಅವ್ವನ ಮುಂದೆ ಹೇಳುವನು. ಅವು ಬಹಳೇ ಚೆಂದವಿರುವದರಿಂದ ನಾನು ಅವುಗಳನ್ನು ನೆನಪಿನಲ್ಲಿಟ್ಟುಕೊಳ್ಳುವೆನು. ಯಾವುದೊಂದು ಸಂಗತಿ ಮರೆತಿದ್ದರೆ ಅವ್ವನನ್ನಾಗಲಿ, ಅಪ್ಪನನ್ನಾಗಲಿ ಕೇಳಿ ತಿಳಿದುಕೊಳ್ಳುವೆನು. ನಿನ್ನೆ ಪಿರಂಗಿಯ ಗೊಂದಲದ ವಿಷಯವನ್ನು ಅವನು ಹೇಳಿದನು. ಯಾರೂ ಹೊಡೆಯದೆ ಸುಮ್ಮಸುಮ್ಮನೆ ಕೂಗಿ ಗೊಂದಲವೆಬ್ಬಿಸುತ್ತಿದ್ದನಂತೆ ಆ ಪಿರಂಗಿ!"

'ಕುಡಿದು ಗುಂಗಿನಲ್ಲಿರಬಹುದು. ಅವನ ಜೊತೆಗೆ ಮೊನ್ನೆ ಸೆರೆಹಿಡಿಯಲ್ಪಟ್ಟ ಪಿರಂಗಿಯನ್ನೇಕೆ ಇಟ್ಟಿಲ್ಲ? ಇಬ್ಬರೂ ಬಡೆದಾಡಿ ಬಡೆದಾಡಿ ತಾವೇ ಮೆತ್ತಗಾಗುತ್ತಿದ್ದರು.'

"ಹಾಗೆ ಇಡಲಿಕ್ಕೆ ಬರುವದಿಲ್ಲನಂತೆ. ಅವರಲ್ಲಿ ಒಬ್ಬನು ಅಧಿಕಾರಿಯು, ಮತ್ತೊಬ್ಬನು ಕೆಳಗಿನ ತರಗತಿಯ ಕೆಲಸಗಾರನು. ಅವರವರ ಯೋಗ್ಯತೆಯ ಮೇರೆಗೆ ಸೆರೆಯಾಳುಗಳಲ್ಲಿ ತರಗತಿ ಮಾಡುವರಂತೆ."

"ಗೆಳೆಯಾ, ಪಿರಂಗಿಗಳೆಂದರೆ ನನಗೆ ಎಲ್ಲರೂ ಒಂದೇ ತರಹ ಕಾಣುವರು. ಎಲ್ಲರದೂ ಕೆಂಪು ಮೋರೆ, ಎಲ್ಲರೂ ಟೊಪ್ಪಿಗೆ-ಚಣ್ಣದವರೇ. ಅವರನ್ನು ಗುರುತಿಸುವದೇ ಕಠಿಣ."

"ಹಾಗೆ ಕಂಡರೂ ಬಣ್ಣ ಲಕ್ಷಣಗಳಲ್ಲಿ ವೈಷಮ್ಯವಿರುವದು. ಪಿರಂಗಿಗಳಲ್ಲಿ ಅನೇಕ ಜಾತಿಗಳುಂಟು. ಅನೇಕ ದೇಶದ ಜನರು ಆ ಪಿರಂಗಿಗಳಲ್ಲಿರುವರು. ಗೋವೆಯ ಪಿರಂಗಿಗಳು, ಮುಂಬಯಿ ಪಿರಂಗಿಗಳು, ಸುವೀಸ, ಉರೀಸ ತಲಿಯಾನ, ಲತಿಯಾನ, ರುಮಿಯಾನ, ಫರಾಸೀಸ, ಫ್ಲೀಸೀಸ ಮೊದಲಾದ ಅನೇಕ ತರದ ಜನರು ಆ ಪಿರಂಗಿಗಳಲ್ಲಿರುವರು."

"ನೀನು ಜಾಣನಪ್ಪಾ! ಈ ಎಲ್ಲ ಹೆಸರುಗಳನ್ನು ಹೇಗೆ ನೆನಪಿಟ್ಟುಕೊಂಡೆ?"

"ಅಪ್ಪನಿಂದ ಹೇಳಿಸಿಕೊಂಡು ಪಾಠ ಮಾಡಿದೆನು. ಅವರ ಲಕ್ಷಣಗಳ ವ್ಯತ್ಯಾಸವನ್ನೂ ಅವನು ಹೇಳಿದ್ದಾನೆ. ಈ ಪಿರಂಗಿಯು ಕೆಂಪು ಮುಸುಡಿಯವನು ಕಾಣುವನು, ಆದರೆ ಅವನ ಕೆಂಪು ಬಣ್ಣವು ಕುಂಕುಮದ ಹಾಗೆ ಇಲ್ಲ; ಸ್ವಲ್ಪ ಹಳದೀ ಬಣ್ಣದ್ದಾಗಿ ಇದೆ. ಅವನು ಸ್ವಲ್ಪಮಟ್ಟಿಗಾದರೂ ಮನುಷ್ಯತ್ವವುಳ್ಳವನಾಗಿದ್ದಾನೆ; ಆದರೆ ಅವನ ಪಾದ್ರಿಯು ಮಾತ್ರ ನಮ್ಮ ಜನರ ಮೇಲೆ ಅತ್ಯಾಚಾರ ಮಾಡುವನು. ಫರಾಸೀಸನು ಅಷ್ಟು ಗೌರನಲ್ಲ. ಅವನು ವಿನೋದಿಯೂ ಆಟಗುಳಿಯೂ ಇರುವನು. ಯಾವಾಗಲೂ ನಗುತ್ತಲೆ ಇದ್ದು ಯಾರ ದಾರಿಗೂ ಹೋಗನು. ಇವನು ಯಾವಾಗಲೂ ಮದ್ಯಪಾನ ಮಾಡುತ್ತಿರುವನು; ಬಲಂದೇಜ ಜಾತಿಯವನು ಮಹಾ ಕ್ರಿಸಷ್ಟಿ; ಸಂತಾಪಿ. ಪ್ರಸಂಗವೊದಗಿದರೆ ತನ್ನ ಪ್ರಾಣ ಕೊಡುವನು; ಇಲ್ಲವೆ ಬೇರೆಯವರ ಪ್ರಾಣ ತಕ್ಕೊಳ್ಳುವನು. ಅವನ ಮೋರೆ ನೋಡಿದರೆ ಭಯವೆನಿಸುವದು."

"ಆ ಜಾತಿ ಈ ಜಾತಿಯೇ ಆಯಿತು. ಇಂಗ್ರೇಜರೋ ಫಂಗ್ರೇಜರೋ ಅವರು ಹೇಗೆ?"

"ಈ ಇಂಗ್ರೇಜಿ ಟೊಪ್ಪಿಗೆಯವರು ಎಲ್ಲ ಟೊಪ್ಪಿಗೆಯವರಿಗಿಂತ ಠಕ್ಕರು. ಅವರು ಎಲ್ಲ ಟೊಪ್ಪಿಗೆಯವರಿಗೂ ಟೊಪ್ಪಿಗೆ ಹಾಕುವಂತಹರಿರುವರು. ಈ ಮುಮಯಿಯವರು ಒಳಗಂಟಿನವರು. ಅವರು ಸೆರೆಕುಡಿಯುತ್ತಿದ್ದರೂ ಸಾವಧರಾಗಿರುವರು. ಬೇರೆಯವರದನ್ನು ಎತ್ತಿ ಹಾಕಿದರೂ ಹಾಗೆ ತೋರಗೊಡುವದಿಲ್ಲ. ಹೀಗೇಕಾಗಿರಬಹುದೆಂದು ತಾವೇ ಅವರನ್ನು ವಿಚಾರಿಸುವರು. ಅವರ ಮಾತುಗಳು ಹೊನದ ಹೊಟ್ಟೆಗಿಂತ ಬಹು ಮಿದುವು. ಅವು ಒಮ್ಮೆ ಹೊಟ್ಟೆಯೊಳಗೆ ಹೊಕ್ಕವೆಂದರೆ ಆ ತೀಕ್ಷ್ಣವಾದ ಶಬ್ದಗಳು ಹೊಟ್ಟೆಯನ್ನು ಕೊಯ್ದು ಪ್ರಾಣತೆಗೆದುಕೊಂಡೇ ಹೊರಗೆ ಬರುವವು. ಈ ಇಂಗ್ರೇಜೀ ಪಿರಂಗಿಗಳು ಮೆಲ್ಲಮೆಲ್ಲನೆ ಕೈಕಾಲು ಚಾಚುತ್ತ ಬಲಿಷ್ಠರಾಗಿ ಉಳಿದ ಟೊಪ್ಪಿಗೆಯವರಿಗೆ ಟೊಪ್ಪಿಗೆ ಹಾಕುತ್ತಿರುವಂತೆ ತೋರುವದು."

"ಗೆಳೆಯಾ, ನಮ್ಮ ದೇಶದಲ್ಲಿ ಯಾವ ಯಾವ ಪಿರಂಗಿಗಳು ಎಷ್ಟು ಜನರಿರುವರೆಂಬದನ್ನು ನಿನಗೆ ನಿಮ್ಮಪ್ಪನು ಹೇಳಿದನೇನು?"

"ಅಂಕಿ-ಸಂಖ್ಯೆ ಗೊತ್ತಿಲ್ಲ. ಉಸುಕಿನ ರಾಶಿ ಹಾಕುತ್ತೇನೆ ನೋಡು. ದೊಡ್ಡ ಸಣ್ಣ ಪ್ರಮಾಣದಿಂದ ಅಳತೆಯನ್ನು ಕಲ್ಪಿಸು. ಇಷ್ಟು ಜನ ಇಂಗ್ರೇಜರು, ಇಷ್ಟು ಜನ ಬಲಂದೇಜರು, ಇಷ್ಟು ಜನ ಗೋವೆಯ ಪಿರಂಗಿಗಳು, ಇಷ್ಟು ಜನ ಫರಾಸೀಸರು" ಎಂದು ಹೇಳಿ, ಆ ಹುಡುಗನು ಗೋವೆಯ ಹಾಗು ಮುಮಯಿಯ ಪಿರಂಗಿಗಳ ಹೆಸರಿನಿಂದ ಹಾಕಿದ ಉಸುಕಿನ ರಾಶಿಗಳನ್ನು ಬಿಟ್ಟು, ಉಳಿದ ಎಲ್ಲ ರಾಶಿಗಳನ್ನು ತೂರಿಬಿಟ್ಟನು. ಅನಂತರ ಅವನು:—"ಗೆಳೆಯಾ, ಇಂಗ್ರೇಜರಿಗೂ ನಮ್ಮ ಸರಖೇಲ

ರಿಗೂ ಬೇಗನೆ ಯುದ್ಧವು ಪ್ರಾರಂಭವಾಗುವದಿರುವದಂತೆ. ಇಂಗ್ರೇಜರು ನಮ್ಮ ಶತ್ರುಗಳು. ನಮ್ಮ ಸರಖೇಲರಿಗೆ ಇವರು ತೊಂದರೆ ಕೊಡಹತ್ತಿದ್ದಾರೆ. ಇವರು ವಿಲಾಯತಿಯವರಂತೆ. ವಿಲಾಯತಿಯಿಂದ ನಮ್ಮ ದೇಶಕ್ಕೆ ಬಂದು ಇಲ್ಲದ ಜಂಭ ಬಡೆಯುತ್ತಿದ್ದಾರೆ. ನಮ್ಮ ಸರಖೇಲರೊಡನೆ ಬಡಿದಾಡುವ ಪ್ರಸಂಗಪ್ರಾಪ್ತವಾದರೆ ಈ ಕೆಂಪು ಮೋತಿಯವರೆಲ್ಲರೂ ಒಂದಾಗುವರು. ಇತರ ವೇಳೆಯಲ್ಲಿ ಇವರು ಒಬ್ಬರ ಮೋರೆಯನ್ನೊಬ್ಬರು ನೋಡುವದಿಲ್ಲ. ಇಂಗ್ರೇಜರು ಎಷ್ಟು ಕೆಂಪೋ ಶಿದ್ದಿಗಳು ಅಷ್ಟೇ ಕಪ್ಪು. ಒಂದು ಉರಿಯುವ ಕೊಳ್ಳಿ, ಮತ್ತೊಂದು ತೊಳೆದ ಕೆಂಡ. ಹೀಗಿದ್ದರೂ ಫಿರಂಗಿಗಳು ಶಿದ್ದಿಗಳಿಗೆ 'ಜೀ, ಜೀ' ಅನ್ನುತ್ತಾರೆ. ಅದರಿಂದ ತಮಗೆ ಬೇಕಾದ ಸಹಾಯ ಹೊಂದುತ್ತಾರೆ. ಅವರ ನೌಕೆಗಳನ್ನೂ ನಾವಿಕರನ್ನೂ ನೆರವಿಗೆ ತೆಗೆದುಕೊಳ್ಳುತ್ತಾರೆ. ಶಿದ್ದಿಗಳು ಇವರಿಗೆ ಸಹಾಯ ಬೇಡಿದರೆ ನೂರಾರು ಕಾರಣ ಹೇಳಿ ತಪ್ಪಿಸಿಕೊಳ್ಳುತ್ತಾರೆ. ಬಹಳವಾದರೆ ಒಂದಕ್ಕೆ ಎರಡು ಬೆಲೆ ತೆಗೆದುಕೊಂಡು ಮದ್ದುಗುಂಡು ಕೊಡುತ್ತಾರೆ. ಇತರರ ಜೀವದ ಮೇಲೆ ಯುದ್ಧದಲ್ಲಿ ಜಯಶಾಲಿಗಳಾಗುವ ಇವರು ಪ್ರಸಂಗದಲ್ಲಿ ಇತರರಿಗೆ ಏನೂ ಸಹಾಯ ಮಾಡುವದಿಲ್ಲ. ಇಂಗ್ರೇಜರು ಧೂರ್ತರೂ ವಿಶ್ವಾಸಘಾತಕರೂ ಇರುವರು; ಆದರೆ ನಮ್ಮ ಸರಖೇಲರು ಅವರಿಗೆ ಸೊಪ್ಪು ಹಾಕುವದಿಲ್ಲ. ಇಂಗ್ರೇಜರಿಗೆ ಯುಕ್ತಿ ಇದ್ದಷ್ಟು ಸಾಮರ್ಥ್ಯವು ಅವರಲ್ಲಿದೆ. ಅಂತೆಯೇ ಇಂಗ್ರೇಜರು ನಮ್ಮ ಸರಖೇಲರೊಡನೆ ಎದುರಿಗೆ ನಿಂತು ಯುದ್ಧ ಮಾಡಲು ಸಿದ್ಧರಾಗಲೊಲ್ಲರು. ಅವರು ನಮ್ಮ ಜನರನ್ನು ಗುಲಾಮರನ್ನಾಗಿ ಮಾಡಿಕೊಂಡು ಒಯ್ಯುತ್ತಿರುವರು. ಇವರ ಮುಯ್ಯ ತೀರಿಸಿಕೊಳ್ಳಬೇಕೆಂದೋ ಏನೋ ನಮ್ಮ ಸರಖೇಲರು ಎಷ್ಟೋ ಇಂಗ್ರೇಜರನ್ನು ಸೆರೆಹಿಡಿದು ಕೋಟೆಯಲ್ಲಿಟ್ಟಿರುವರು. ಮುಯ್ಯಕ್ಕೆ ಮುಯ್ಯ ತೀರಿಸದಿದ್ದರೆ ಹೇಗೆ?"

"ನೀನು ರಾಜಕಾರಣದಲ್ಲಿ ಚೆನ್ನಾಗಿ ಜ್ಞಾನ ಸಂಪಾದಿಸಿರುವೆ. ನನಗೆ ಈ ಸಂಗತಿ ಇಷ್ಟು ದಿನ ಗೊತ್ತೇ ಇದ್ದಿಲ್ಲ. ನಿನ್ನ ತಂದೆಯು ಸರಖೇಲರಲ್ಲಿ ಕೆಲಸಗಾರನಿರುವದರಿಂದ ಅವನು ಎಲ್ಲ ಸಂಗತಿಗಳನ್ನು ದಿನಾಲು ನಿನಗೆ ತಿಳಿಸುವನು. ನಿನ್ನ ಬುದ್ಧಿಯೂ ಚುರುಕಾಗಿರುವ ಮೂಲಕ ಎಲ್ಲವನ್ನೂ ನೆನಪಿಟ್ಟುಕೊಂಡಿರುವೆ."

ಕೋಳಿ ಹುಡುಗರು ಹೀಗೆ ಹರಟೆ ಹೊಡೆಯುತ್ತ ಕುಳಿತಾಗ ಬಂದರದ ಸಮೀಪಕ್ಕೆ ಒಂದು ಹಡಗವು ಬರುತ್ತಿರುವದು ಅವರಿಗೆ ಕಂಡಿತು. ಅದನ್ನು ನೋಡಿ ಒಬ್ಬನು:—"ಗೆಳೆಯಾ, ಅದು ದೊಡ್ಡ ಹಡಗವಿದೆ. ಬಹಳ ಮಾಡಿ ಫಿರಂಗಿಗಳ ಹಡಗವಿರುವದಾಗಿ ತೋರುವದು. ಆ ಹಡಗದಲ್ಲಿ ನಮ್ಮ ಜನರೇ ಇದ್ದಾರೆ. ಅವರು ಫಿರಂಗಿಗಳೊಡನೆ ಕಾದಿ ಅದನ್ನು ಗೆದ್ದುಕೊಂಡು ಬಂದಂತೆ ತೋರುವದು. ನಮ್ಮ

ಸರಖೇಲರು ಇತ್ತೀಚಿಗೆ ನೌಕಾಪಡೆಯನ್ನು ಬಹಳವಾಗಿ ಬೆಳೆಯಿಸಿರುವರು. ಅನೇಕ ಕೋಳಿಗಳಿಗೆ ನೌಕಾ ಶಿಕ್ಷಣವನ್ನು ಕೊಡಿಸುವರು. ಅವರ ಪ್ರಯತ್ನದ ಫಲವಾಗಿ ಇಂತಹ ಜಯಗಳು ದೊರೆಯತೊಡಗಿವೆ. ನಮ್ಮ ಹಡಗುಪಡೆಯ ಶಕ್ತಿಯನ್ನು ನೋಡಿಯೇ ಪಿರಂಗಿಗಳು ಅಂಜುತ್ತಿರುತ್ತಾರೆ. ಮೇಲಿಂದ ಮೇಲೆ ಓಲಗಕ್ಕೆ ಬಂದು ಸರಖೇಲರ ಕೃಪಾಸಂಪಾದನೆಯ ಪ್ರಯತ್ನ ಮಾಡುತ್ತಿರುತ್ತಾರೆ. ನಡೆಯಿರಿ, ಹಡಗದಲ್ಲಿ ಏನಿರುವದೋ ನೋಡೋಣ" ಹೀಗೆಂದು ಆ ಹುಡುಗನು ನುಡಿಯಲು, ಎಲ್ಲರೂ ಆನಂದದಿಂದ ಕೂಗುತ್ತ ದಂಡೆಯ ಕಡೆಗೆ ನಡೆದರು.

೨

ಹಡಗದಲ್ಲಿ ಕುಣಕ್ಯಾನೂ ಫಾಕಲ್ಯಾನೂ ಇರುವದನ್ನು ನೋಡಿ ಕೋಳಿ ಹುಡುಗರಿಗೆ ಬಹಳ ಸಂಭ್ರಮವಾಯಿತು. 'ಕುಣಕ್ಯಾನ ಗೆಲವು, ಕುಣಕ್ಯಾನ ಗೆಲವು' ಎಂದು ಎಲ್ಲ ಹುಡುಗರೂ ಕೂಗತೊಡಗಿದರು. ಕುಣಕ್ಯಾನು ಹಡಗದಿಂದಿಳಿದನು. ಫಾಕಲ್ಯಾನು ಮೀನದ ಜಾಳಿಗೆಯಲ್ಲಿ ಬಂಧಿಸಿದ ಪಿರಂಗಿಯನ್ನು ದಂಡೆಗೆ ತಂದನು. ಎಲ್ಲ ಹುಡುಗರೂ ಆನಂದದಿಂದ ಸುತ್ತಿಮುತ್ತಿ ಕೂಗುತ್ತ—"ಕುಣಕ್ಯಾನ ಬೇಟೆ! ಇದು ಪಿರಂಗೀ ಕೆಂಪು ಮೀನ!" ಎಂದು ಚೀರಾಡಿದರು. ಆಗ ಕುಣಕ್ಯಾನು: "ಇದು ನೀವು ತಿನ್ನುವ ಮೀನವಲ್ಲ. ಬೇರೆ ನೌಕೆಗಳಲ್ಲಿ ನಿಜವಾದ ಮೀನಗಳಿವೆ. ಅಲ್ಲಿಗೆ ಹೋಗಿರಿ" ಎಂದು ಹೇಳಿ, ಪಿರಂಗಿಯನ್ನು ಜಾಳಿಗೆಯಿಂದ ಬಿಡುಗಡೆ ಮಾಡಿ ಅವನ ಕೈಗೆ ಹಗ್ಗ ಕಟ್ಟಿದನು. ಆಗ ಕುಣಕ್ಯಾ—'ನೀನು ಗೊಂದಲವೆಬ್ಬಿಸಿದರೆ ನಮ್ಮ ಕೋಳಿ ಮಿತ್ರರು ಕೇಳಲಿಕ್ಕಿಲ್ಲ. ಸುಮ್ಮನೆ ಪೆಟ್ಟು ತಿನ್ನಬೇಡ. ತಿಳಿಯಿತೇ? ನಾನು ಯುದ್ಧಲ್ಲಿಗೆ ಸುಸೂತ್ರವಾಗಿ ಒಯ್ಯತಕ್ಕವನು" ಎಂದು ಆ ಪಿರಂಗಿ ಸೆರೆಯಾಳಿಗೆ ಹೇಳಿದನು.

ಪಿರಂಗಿಯ ಮದ್ಯದ ಗುಂಗು ಪೂರಾ ಇಳಿದಿತ್ತು. ಏನಾದರೂ ಗೊಂದಲ ಮಾಡಿದರೆ ಏಟು ತಿನ್ನಬೇಕಾಗುವದೆಂಬದೂ ಅವನಿಗೆ ತಿಳಿದಿತ್ತು. ಒಂದು ವೇಳೆ ಗೊಂದಲ ಮಾಡ ಹೋದರೆ ಬೆಂಬಲವಿಲ್ಲದ್ದಕ್ಕಾಗಿ ತನ್ನ ಆಟವೇನೂ ನಡೆಯುವದಿಲ್ಲವೆಂದು ಅವನಿಗೆ ಗೊತ್ತಾಗಿತ್ತು. ಕಾನ್ಹೋಜಿ ಆಂಗ್ರೆಯ ಬಳಿಯಲ್ಲಿ ಅನೇಕ ಪಿರಂಗಿ ಸೆರೆಯಾಳುಗಳಿದ್ದರು. ಅವರನ್ನು ಆಂಗ್ರೆಯು ಒಳ್ಳೆಯ ರೀತಿಯಿಂದ ನಡೆಯಿಸಿಕೊಳ್ಳುವನೆಂದೂ, ತಮ್ಮ ಹಾಗೆ ತೊಂದರೆ ಕೊಡುವದಿಲ್ಲೆಂದೂ ಆ ಪಿರಂಗಿಗೆ ಮೊದಲೇ ಗೊತ್ತಿದ್ದುದರಿಂದ ಅವನಿಗೆ ಇತರ ಭಯವೇನೂ ಇರಲಿಲ್ಲ; ಆದರೆ ಸೆರೆಯಲ್ಲಿ ಎಷ್ಟು ದಿನ ಕೊಳೆಯಬೇಕಾಗುವದೋ ಏನೋ ಎಂಬ ಚಿಂತೆಯು ಮಾತ್ರ ಅವನನ್ನು ಬಾಧಿಸುತ್ತಿತ್ತು.

ಕುಣಕ್ಯಾನ ಹೇಳಿಕೆಯ ಮೇರೆಗೆ ಕೆಲವು ಹುಡುಗರು ಮೀನದ ನೌಕೆಗಳ ಕಡೆಗೆ ಹೋದರು; ಕೆಲವರು ಮಾತ್ರ ಪಿರಂಗಿಯನ್ನು ಕುತೂಹಲದಿಂದ ನೋಡುತ್ತ ನಿಂತರು. ಕೈಯಲ್ಲಿ ಕೋಲು ಹಿಡಿದು ಕೆಲವರು ಆ ಪಿರಂಗಿಯನ್ನು ಚುಚ್ಚುವದಕ್ಕೆ ಧಾವಿಸಿದರು. ಅವರನ್ನು ನೋಡಿ ಕುಣಕ್ಯಾನು—"ಹಾ! ಜೋಕೆ! ಸರಖೇಲರ ರಾಜಶಾಸನವು ನಿಮಗೆ ಗೊತ್ತಿಲ್ಲವೇನು? ನಾವು ಕೊಂಕಣಿಗಳು ಪಿರಂಗಿಗಳ ಜಾತಿಯಂತೆ ಪಶುಜಾತಿಯವರಲ್ಲ. ಮಾನವತೆ ನಮ್ಮಲ್ಲಿದೆ. ಸೆರೆಯಾಳುಗಳಿಗೆ ತೊಂದರೆ ಕೊಡುವದೂ, ಅವರನ್ನು ಸಮುದ್ರದಾಚೆಗೆ ಒಯ್ದು ದನಗಳಂತೆ ವಿಕ್ರಯಿಸುವದೂ ದನಗಳಂತಹ ಜಾತಿಯ ಪಿರಂಗಿಗಳ ಕೆಲಸವಲ್ಲದೆ, ಅಂತಹ ಕೃತ್ಯಗಳು ಸರಖೇಲರ ರಾಜ್ಯದಲ್ಲಿ ನಡೆಯುವದಿಲ್ಲ. ನಮ್ಮ ರಾಜ್ಯವೆಂದರೆ, ಪುಣ್ಯಶ್ಲೋಕ ಮಹಾರಾಜರಾದ ಶಿವಛತ್ರಪತಿಗಳ ರಾಜ್ಯವು. ಹಿಂದುಪದಪಾತಶಾಹಿಯಲ್ಲಿ ಅನ್ಯಾಯದ ಕೃತ್ಯಗಳು ನಡೆಯಬಾರದೆಂದು ಛತ್ರಪತಿಗಳು ಬಹಳೇ ದಕ್ಷತೆವಹಿಸುತ್ತಿರುವರು. ಅಂತೆಯೇ ಅವರ ಕೀರ್ತಿಪ್ರಭೆಯು ನಿಷ್ಕಲಂಕವಾಗಿ ಬೆಳಗುತ್ತಿದೆ. ಸ್ವರಾಜ್ಯದ ರಾಜ್ಯಶಾಸನಗಳು ಧರ್ಮಪೂರ್ಣವಿರುವವು. ಆದಕ್ಕಾಗಿ ನೀವು ಈ ಪಿರಂಗಿಗೆ ಏನೂ ತೊಂದರೆ ಕೊಡಲಾಗದು. ಯಾರಾದರೂ ತೊಂದರೆ ಕೊಟ್ಟರೆ ಸರಖೇಲರ ನ್ಯಾಯಾಸನದ ಮುಂದೆ ಅಪರಾಧಿಗಳಾಗಿ ನಿಲ್ಲಬೇಕಾಗುವದು. ನಾನು ಹೇಳಿದ ಹಾಗೆ ನೀವೆಲ್ಲರೂ ಮೀನಗಳ ನೌಕೆಯ ಕಡೆಗೆ ತೆರಳಿರಿ. ಬಹಳವಾದರೆ ನಾಲ್ಕು ಜನರು ನನ್ನ ಜೊತೆಗೆ ಕೋಟೆಯ ವರೆಗೆ ಬರ್‍ರಿ. ಪಿರಂಗಿಯು ಏನಾದರೂ ಗುದುಮುರಿಗೆ ಹಾಕಿದರೆ ಅವನಿಗೆ ಬಿಗಿ ಮಾಡಲಿಕ್ಕೆ ನಾಲ್ಕು ಜನರ ಅನುಕೂಲತೆ ಬೇಕು."

ಕುಣಕ್ಯಾನು ಹೀಗೆ ನುಡಿದ ಕೂಡಲೆ ನಾಲ್ಕು ಕೋಲಿ ಹುಡುಗರ ಹೊರತು ಮಿಕ್ಕವರು ಮೀನ ಹಿಡಿಯುವ ನೌಕೆಗಳ ಕಡೆಗೆ ತೆರಳಿದರು. ಧಾಕಲ್ಯಾನೂ ಕೊಂಕಣೀ ನಾವಿಕನೂ ಸೆರೆಯಾಳಾದ ಪಿರಂಗಿಯನ್ನು ತೆಗೆದುಕೊಂಡು ಕೋಟೆಯ ಕಡೆಗೆ ತೆರಳಿದರು. ಹುಡುಗರು ಸೆರೆಯಾಳಿನ ಸುತ್ತುಮುತ್ತು ನಡೆದಿದ್ದರು.

ವಿಜಯದುರ್ಗದ ಕೋಟೆಯೆಂದರೆ ಅದೇನೂ ಪುರಾತನ ಕೋಟೆಯಲ್ಲ. ಕಾನ್ಹೋಜಿರಾಯ ಆಂಗ್ರೆಯು ಹೊಸದಾಗಿ ಕಟ್ಟಿಸಿದ ಕೋಟೆಯದು. ಅದು ಇನ್ನೂ ಪೂರ್ಣವಾಗಿ ಕಟ್ಟಲ್ಪಟ್ಟಿರಲಿಲ್ಲ. ಬುರುಜುಗಳೂ ಕೋಟೆಯ ಗೋಡೆಗಳೂ ಕಟ್ಟಲ್ಪಟ್ಟು, ಬುರುಜಿನ ಮೇಲೆ ತೋಫುಗಳು ಇಡಲ್ಪಟ್ಟಿದ್ದವು. ಕೋಟೆಯ ಒಳಗೆ ಮದ್ದಿನ ಮನೆಗಳೂ ಸಿದ್ಧವಾಗಿದ್ದವು; ಹಾಗು ಧಾನ್ಯಾಗಾರ ಕಟ್ಟುವ ಕೆಲಸ ನಡೆದಿದ್ದು, ಕಾನ್ಹೋಜಿರಾಯನ ಅರಮನೆಯೂ ಸಭಾಗೃಹವೂ ಕಟ್ಟಲ್ಪಟ್ಟಿದ್ದವು. ಇನ್ನಿತರ ಅಧಿಕಾರಿಗಳ ಹಾಗು ಸೈನಿಕರ ನಿವಾಸಗಳೆಲ್ಲವೂ ಪೂರ್ಣವಾಗಿ ಕಟ್ಟಿ ಸಿದ್ಧ

ನಾವವಿರಲಿಲ್ಲ. ಕಾರಾಗಾರಾಲಯುಗಳ ಕಟ್ಟಡದ ಕೆಲಸವೂ ಪೂರ್ಣವಾಗಿ ಮುಗಿದಿದ್ದಿಲ್ಲ. ಬಹುಮುಟ್ಟಿಗೆ ಎಲ್ಲ ಕಟ್ಟಡಗಳು ಇನ್ನೂ ಅಪೂರ್ಣ ಸ್ಥಿತಿಯಲ್ಲಿಯೇ ಇದ್ದವು. ಸೆರೆಯಾಳುಗಳನ್ನಿರಿಸುವ ಕಟ್ಟಡಗಳು ಮಾತ್ರ ಪೂರ್ಣವಾಗಿ ಮುಗಿದಿದ್ದವು. ಕಾನ್ಹೋಜಿಯ ರಾಜ್ಯದೊಳಗೆ ಬಹುತರವಾಗಿ ದುಂಡದ ಶಾಸನವೇ ಬಳಿಕೆಯಲ್ಲಿತ್ತು. ಪುಂಡುಗಾರಿಕೆಯ ಅಪರಾಧಿಗಳು ಅಲ್ಲಲ್ಲಿಯ ಅಧಿಕಾರಿಗಳ ವಶದಲ್ಲಿಯೇ ಇರುತ್ತಿದ್ದರು. ಸಮುದ್ರದಲ್ಲಿ ಸುಲಿಗೆ ಮಾಡುವ ಫಿರಂಗಿಗಳ ಸಲುವಾಗಿ ಈ ಸೆರೆಮನೆಯ ಕಟ್ಟಡಗಳು ಕಟ್ಟಲ್ಪಟ್ಟಿದ್ದವು.

ಸರಖೇಲ ಕಾನ್ಹೋಜಿರಾಯನು ತರಗತಿಯ ಮೇರೆಗೆ ಸೆರೆಯಾಳುಗಳ ವ್ಯವಸ್ಥೆಯನ್ನಿರಿಸಿದ್ದನು. ಅಧಿಕಾರಿಯನ್ನೂ ಆಳನ್ನೂ ಒಂದೇ ಸ್ಥಿತಿಯಲ್ಲಿ ಹಾಗು ಒಂದೇ ಕೋಣೆಯಲ್ಲಿ ಹಾಕುತ್ತಿರಲಿಲ್ಲ. ಯಾವ ಸೆರೆಯಾಳುಗಳನ್ನೂ ಯಾವ ವಿಧದಿಂದಲೂ ಪೀಡಿಸುವ ರೂಢಿಯಿರಲಿಲ್ಲ. ಸೆರೆಯಾಳುಗಳ ವ್ಯವಸ್ಥೆಯು ಹೇಗಿರುವದೆಂಬದನ್ನು ನೋಡಲು ಅಧಿಕಾರಿಗಳಿರುತ್ತಿದ್ದರು. ಸ್ವಂತ ಸರಖೇಲನು ಸಹ ಆಗಿಂದಾಗ ಬಂದು ಪ್ರತಿಯೊಬ್ಬ ಸೆರೆಯಾಳಿನ ಸ್ಥಿತಿಗತಿ ನಿರೀಕ್ಷಣೆ ಮಾಡಿ ಹೋಗುತ್ತಿದ್ದನು.

ಕಾನ್ಹೋಜಿಯ ವ್ಯವಸ್ಥೆಯು ಅನುಕರಣೀಯವಿತ್ತು. ಪ್ರತಿಯೊಂದು ವಿಷಯದಲ್ಲಿ ಅವನು ಬಹಳೇ ಜಾಗ್ರತೆಯಿಂದ ವರ್ತಿಸುತ್ತಿದ್ದನು. ಪರರಾಜರ ಪ್ರತಿನಿಧಿಗಳ ಆಗಮನವಾದರೆ ಅವರವರಿಗೆ ಸಲ್ಲುವ ಮಾನಮನ್ನಣೆಗಳನ್ನು ಕೊಡುತ್ತಿದ್ದನು. ಶತ್ರುಪ್ರತಿನಿಧಿಗಳಿಗೆ ಸಹ ಇವನು ಎಂದೂ ಅಪಮಾನ ಮಾಡುತ್ತಿರಲಿಲ್ಲ. ಪುಣ್ಯಪ್ರತಾಪಿಯಾದ ಶಿವಛತ್ರಪತಿಯ ಶಾಸನವೇ ಹಾಗಿತ್ತು. ಏನಾದರೂ ಅಕೃತ್ಯ ಘಟಿಸಿದರೆ ಅವರಿಂದ ಛತ್ರಪತಿಯ ಕೀರ್ತಿಗೆ ಕಲಂಕ ತಗಲುವದೆಂಬ ಭಯವು ಅವನಿಗಿರುತ್ತಿತ್ತು. ಈ ಶಾಸನದ ಭಯದಿಂದಲೆ ಸೆರೆಯಾಳುಗಳಿಗೆ ಪೀಡೆಯಾಗದಂತೆ ನಡೆದುಕೊಳ್ಳಲು ಎಲ್ಲರೂ ಜಾಗ್ರತೆವಹಿಸುತ್ತಿದ್ದರು. ಕುಣಕ್ಯಾನಿಗೆ ಸರಖೇಲನ ಈ ವ್ಯವಸ್ಥೆಯು ಚೆನ್ನಾಗಿ ಗೊತ್ತಿದ್ದುದರಿಂದಲೇ ಫಿರಂಗಿಗೆ ಕಾಟಕೊಡಬಾರದೆಂದು ಆ ಕೋಳಿ ಹುಡುಗರನ್ನು ಎಚ್ಚರಿಸಿದ್ದನು.

ಕುಣಕ್ಯಾನು ಕೋಟೆಯನ್ನು ಪ್ರವೇಶಿಸಿ ಸೆರೆ ಮನೆಗೆ ಹೋಗಿ ಅಲ್ಲಿಯ ಅಧಿಕಾರಿಗೆ ಮುಂಚಿನ ದಿನ ಘಟಿಸಿದ ಎಲ್ಲ ಸಂಗತಿಯನ್ನು ತಿಳಿಸಿ. ಅವನ ವಶಕ್ಕೆ ಆ ಫಿರಂಗಿ ಸೆರೆಯಾಳನ್ನು ಕೊಟ್ಟು ಸರಖೇಲನಿಗೆ ಭೆಟ್ಟಿಯಾಗುವದಕ್ಕೆ ಅರಮನೆಯ ಕಡೆಗೆ ತೆರಳಿದನು. ಕೊಂಕಣೀ ನಾವಿಕನ ಆತಿಥ್ಯದ ವ್ಯವಸ್ಥೆಯನ್ನು ಅವನು ಫಾಕಲ್ಯಾನ ಕಡೆಗೆ ಒಪ್ಪಿಸಿದ್ದನು. ಸರಖೇಲನಿಗೆ ಎಲ್ಲ ಸಂಗತಿಯನ್ನು ತಿಳಿಸಿ, ಹಿಂದಿನಿಂದ ಅವನಿಗೆ ಕೊಂಕಣೀ ನಾವಿಕನ ಭೆಟ್ಟಿ ಮಾಡಿಸಬೇಕೆಂದು ಕುಣಕ್ಯಾನ

ಯೋಜನೆಯಿತ್ತು; ಆದರೆ ಆ ವೇಳೆಯಲ್ಲಿ ಕುಣಕ್ಯಾನಿಗೆ ಸಹ ಸರಖೇಲನ ಭೆಟ್ಟಿ ಯಾಗುವ ಅನುಕೂಲತೆಯಿರಲಿಲ್ಲ. ಯಾಕಂದರೆ ಅವನು ಒಬ್ಬ ಪಿರಂಗಿ ಪ್ರತಿನಿಧಿ ಯೊಡನೆ ಮಾತುಕತೆ ನಡೆಯಿಸಿದ್ದ ಮೂಲಕ ಆಗ ಅಲ್ಲಿ ಯಾರ ಪ್ರವೇಶವೂ ಆಗು ವಂತಿರಲಿಲ್ಲ. ಆದ್ದರಿಂದ ಕುಣಕ್ಯಾನು ಅವರ ಮಾತು ಮುಗಿಯುವ ವರೆಗೆ ಕಾಯುತ್ತ ನಿಲ್ಲಬೇಕಾಯಿತು.

---

( ೩ )

ದರ್ಯಾಸಾರಂಗ ಸರಖೇಲ ಕಾನ್ಹೋಜಿರಾವ ಆಂಗ್ರೆಯು ತನ್ನ ಮಂತ್ರಣಾ ಗಾರದಲ್ಲಿ ಕುಳಿತಿದ್ದನು. ಎದುರಿಗೆ ಒಂದು ಆಸನದ ಮೇಲೆ ಪಿರಂಗಿ ಪ್ರತಿನಿಧಿಯು ಕುಳಿತುಕೊಂಡಿದ್ದನು. ನಡುವೆ ದ್ವಿಭಾಷಿಯು ಕುಳಿತುಕೊಂಡು ಪರಸ್ಪರರ ಭಾಷಣ ವನ್ನು ಪರಸ್ಪರರಿಗೆ ತಿಳಿಸತೊಡಗಿದ್ದನು. ಸ್ವಲ್ಪ ಅಂತರದ ಮೇಲೆ ನಾಲ್ಕಾರು ಜನ ಸಶಸ್ತ್ರ ಸೈನಿಕರು ನಿಂತುಕೊಂಡಿದ್ದರು. ಪಿರಂಗಿಯು ಹಡಗುವಡೆಯ ಸಣ್ಣ ಸರ ದಾರನಾಗಿದ್ದು, ಇಂದು ಶಿಷ್ಟಾಯಿಯಾಗಿ ಪ್ರತಿನಿಧಿಯೆಂದು ಬಂದವನಾಗಿದ್ದನು. ಶಿಷ್ಟಾಯಿಗಾಗಿ ಬಂದ ದೂತನ ಆದರಾತಿಥ್ಯ, ಮಾನ-ಮನ್ನಣೆಗಳು ಸರಖೇಲನಿಂದ ಚೆನ್ನಾಗಿ ಇಡಲ್ಪಟ್ಟಿದ್ದವು. ಅವರ ಸಂಭಾಷಣವು ಮೊದಮೊದಲು ಶಿಷ್ಟಾಚಾರಕ್ಕನು- ಸಾರವಾಗಿಯೇ ನಡೆದಿತ್ತು, ಕೆಲವು ವೇಳೆ ಶಿಷ್ಟಾಚಾರದ ಮಾತು ನಡೆದ ಮೇಲೆ ಕಾನ್ಹೋಜಿರಾಯನು ದೂತಾಗಮನದ ಕಾರಣ ತಿಳಿದುಕೊಳ್ಳುವದಕ್ಕಾಗಿ —"ಪ್ರತಿ ನಿಧಿಗಳೇ, ಇಂದು ನಿಮ್ಮ ಆಗಮನದ ಕಾರಣವೇನು? ನನ್ನ ಮೇಲೆ ಯಾವ ವಿಧ ದ್ದಾದರೂ ವಾದವಿರುವದೇ ಹೇಗೆ?"

ಪಿರಂಗಿ ಪ್ರತಿನಿಧಿಯು ಗಾಂಭೀರ್ಯದಿಂದ: —"ವಾದವಿರುವದೆಂದೇ ಬಂದಿರು ವೆನು. ನಿಮ್ಮ ಹಾಗು ಕಂಪನಿ ಸರಕಾರದ ನಡುವೆ ಒಂದು ಸ್ಥಿರವಾದ ಒಪ್ಪಂದ ವಾಗುವವರೆಗೆ ವಾದವು ಇರತಕ್ಕದ್ದೇ. ಮೇಲಿಂದ ಮೇಲೆ ವಾದಗಳು ಉಪಸ್ಥಿತ ವಾಗುತ್ತ ಹೋದರೆ ದುಷ್ಪರಿಣಾಮವಾಗುವದೆಂಬ ಭೀತಿ ನನ್ನನ್ನು ಬಾಧಿಸುತ್ತಿದೆ."

"ವಾದಗಳಿರಕೂಡದೆಂಬ ಮಾತಿಗೆ ನಾನು ಒಪ್ಪುತ್ತೇನೆ. ವಾದಗಳಿಂದ ದುಷ್ಪರಿಣಾಮವಾಗುವದೆಂಬ ಮಾತಾದರೂ ಯೋಗ್ಯವಾದದ್ದೇ ಅದೆ. ವಾದದ ಸ್ವರೂಪವೇನು, ಆ ವಾದವು ಯಾಕೆ ಉಪಸ್ಥಿತವಾಗುವದು, ವಾದದ ಸ್ವರೂಪವು ನ್ಯಾಯವಾದುದೇ ಅನ್ಯಾಯದ್ದೇ, ಮೊದಲಾದ ಯೋಚನೆಯನ್ನು ನಾವೂ ನೀವೂ ಮಾಡಲಿಕ್ಕೆ ಬೇಕು. ಸ್ವಾರ್ಥಸಾಧನೆಗೆ ಯಾವುದೊಂದು ನ್ಯಾಯನೀತಿಸಮ್ಮತವಾದ ಕಟ್ಟಳೆಗೆ ವಾದದ ಸ್ವರೂಪ ಕೊಡಲು ಪ್ರಯತ್ನಿಸಿದರೆ ಅದಕ್ಕೆ ಯತ್ನವಿರುವದಿಲ್ಲ.

ಇಂತಹ ನೆವಗಳನ್ನು ಮುಂದೆ ಮಾಡಿ ಭಯ ತೋರಿಸುವದೂ ಅನುಚಿತ. ನಿಮ್ಮ ವಾದದ ಸ್ವರೂಪವನ್ನು ನಾನು ಬಲ್ಲೆನು. ನಿಮ್ಮ ವಾದದಲ್ಲಿ ಏನೂ ಹುರುಳಿಲ್ಲವೆಂದು ನಾನು ಖಂಡಿತವಾಗಿ ಹೇಳುವೆನು. "ಅದು ಹೇಗೆ?"

"ನಾವು ನಮ್ಮ ಮನೆಯಲ್ಲಿ ವಾಸಿಸುವೆವು; ನಮ್ಮ ಮನೆಯಲ್ಲಿ ಮೆರೆದಾಡುವೆವು ದೇವನಿರ್ಮಿತವಾದ ಸಮುದ್ರದಲ್ಲಿ ಉಪಜೀವಿಕೆ ಸಾಗಿಸುವೆವು. ನಮ್ಮ ತಿರುಗಾಟವಾದರೂ ಸಮುದ್ರದ ದಂಡೆಗುಂಟ. ನಾವು ವ್ಯಾಪಾರೋದ್ಯಮ ಮಾಡುವದಾದರೂ ಅಷ್ಟಕ್ಕಷ್ಟೇ. ಧಾನ್ಯ, ಕಟ್ಟಿಗೆ, ಕಲ್ಲುಗಳನ್ನು ಸಮುದ್ರದ ದಂಡೆಗುಂಟ ಇರುವ ಒಂದು ಬಂದರದಿಂದ ಮತ್ತೊಂದು ಬಂದರಕ್ಕೆ ಒಯ್ಯುವ ಕೆಲಸವನ್ನು ಮಾತ್ರ ನಮ್ಮ ನೌಕೆಗಳು ಮಾಡುತ್ತಿರುವವು. ನಾವೇನು ನಿಮ್ಮಂತೆ ಸಾವಿರಾರು ಮೈಲು ಸಂಚಾರ ಮಾಡಿ ಬಾಧ್ಯತೆಯಿದ್ದಲ್ಲಿಯೂ ಇರದಲ್ಲಿಯೂ ಗೊಂದಲವೆಬ್ಬಿಸುವವರಲ್ಲ. ಸಮುದ್ರ ತೀರದ ಬಂದರಗಳಿಗೆ ಕೋಟೆ-ಕೊತ್ತಳ ಕಟ್ಟಿ ಸಮುದ್ರದ ರಕ್ಷಣೆಗಾಗಿ ಸಣ್ಣ ಸಣ್ಣ ತೋಫುಗಳಿಟ್ಟಿರುತ್ತೇವೆ. ನಮ್ಮ ಹಡಗುಗಳ ಹಾಗು ಬಂದರಗಳ ರಕ್ಷಣೆಗಾಗಿ ಈ ವ್ಯವಸ್ಥೆ ಮಾಡಲ್ಪಟ್ಟಿದೆಯಲ್ಲದೆ, ಕಾಲುಕೆದರಿ ನ್ಯಾಯ ತೆಗೆಯಲಿಕ್ಕಲ್ಲ. ನಾವು ನಮ್ಮ ಕಟ್ಟೆಗಳಲ್ಲಿ ಇರುವೆವು; ನಮ್ಮ ಗಡಿಯಲ್ಲಿಯೇ ವಾಸಿಸುವೆವು. ಹೀಗಿದ್ದರೂ ಇದಕ್ಕೆ ಉಪದ್ರವವೆಂದು ವಾದ ಮಾಡಿದರೆ ಯತ್ನವಿಲ್ಲವೆನ್ನಬೇಕಾಗುವದು. ನಮ್ಮ ಮೇಲೆ ಯಾವ ವಾದವಿದೆ? ಯಾರು ವಾದ ಮಾಡುತ್ತಿರುವರು?"

"ನಿಮ್ಮ ನೆರೆಯ ಜಂಜಿರೆಯ ಹಬಸಿಯು! ಹಾಗು ಸಮುದ್ರದಲ್ಲಿ ತಿರುಗಾಡುವ ಅವನ ಕರೀ ಸೈತಾನಿಗಳು!"

"ಕಪಟಭಾಷಣವನ್ನಾಡಬೇಡಿರಿ ಪ್ರತಿನಿಧಿಗಳೇ! ಹಬಸಿಯು ನಮಗೆ ವಿದ್ವೇಷಿ ಇರುವನೆಂಬ ಮಾತು ಗೊತ್ತಿದೆ. ನಾವು ಅವನಿಗೆ ಸೊಪ್ಪು ಹಾಕುವದಿಲ್ಲ. ನಾವು ಅವನನ್ನು ಅವನ ಬಂದರದಲ್ಲಿ ಕಟ್ಟಿ ಒಗೆದು ಅಲುಗಾಡದಂತೆ ಮಾಡಿರುವೆವು. ನಾವೇನೋ ಅವನೇನೋ. ನಮ್ಮದನ್ನು ನಾವು ನೋಡಿಕೊಳ್ಳುವೆವು. ಅವನ ಮೇಲಿನ ವಾದ ಹೇಳಲಿಕ್ಕೆ ನಾನೇನಾದರೂ ನಿಮ್ಮ ಕಡೆಗೆ ಬಂದಿದ್ದೆನೋ ಹೇಗೆ? ನೀವೇನಾದರೂ ಅವನಿಂದ ಪ್ರತಿನಿಧಿಪದವನ್ನು ಪಡೆದು ಬಂದಿದ್ದರೆ ಹೇಳಿರಿ."

"ಛೇ! ಹಾಗೇನೂ ಇಲ್ಲ; ಆದರೆ ಸರಖೇಲರೇ, ಉಪಸರ್ಗ ಉಪದ್ರವಗಳು ನಿಜವಾಗಿ ಆಗುತ್ತಿದ್ದರೆ ಜಂಜಿರೆಯ ಹಬಸಿಯಿಂದ. ನಾವೇನೂ ಹಾಗಲ್ಲ. ನಮಗೇ ಇತರರಿಂದಲೂ ನಿಮ್ಮಿಂದಲೂ ಉಪದ್ರವವಾಗುತ್ತಿರುತ್ತದೆ. ಅದನ್ನೇ ನಿಮ್ಮೆದುರಿಗೆ ಇಡಲು ಬಂದಿರುವೆನು."

"ನಮ್ಮಿಂದ ನಿಮಗೆ ಉಪದ್ರವವಾಗುತ್ತಿರುವದೇ? ಅದು ಹೇಗೆ?"

"ನಮ್ಮ ಹಡಗಗಳು ಕೊಂಕಣದಲ್ಲಿ ಬೇಕಾದ ಬಂದರಕ್ಕೆ ಬಂದರೂ ಸುಂಕ ತೆಗೆದುಕೊಳ್ಳದೆ ಪ್ರವೇಶ ಮಾಡಗೊಡುವದಿಲ್ಲ. ಸಮುದ್ರದ ದಂಡೆಯಲ್ಲಿ ಪಾಳ್ಯ ಗಳನ್ನು ನಿಲ್ಲಿಸಲಿಕ್ಕೆ ಹಾಗು ಅಂಗಡಿ ಹಾಕಲಿಕ್ಕೆ, ಗುದಾಮು ಕಟ್ಟಲಿಕ್ಕೆ ಒಪ್ಪಿಗೆ ದೊರೆಯುವದಿಲ್ಲ. ಹೀಗೇಕಾಗಬೇಕು?"

"ಹೀಗೇಕಾಗಬೇಕೆಂಬದರ ಕಲ್ಪನೆಯು ನಿಮಗೆ ಇದ್ದರೂ ಬುದ್ಧಿಪೂರ್ವಕ ವಾಗಿ ಪ್ರಶ್ನೆ ಮಾಡುತ್ತಿರುವಿರಿ. ನೀವು ಇಲ್ಲಿ ಶಿಬಿರ ಕಟ್ಟುವದು, ಅಂಗಡಿ ಸ್ಥಾಪಿಸು ವದು, ಸಂಗ್ರಹಾಲಯ ಕಟ್ಟಿಸುವದು ಮೊದಲಾದ ಕಾರ್ಯಗಳನ್ನು ಜರುಗಿಸಬೇಕೆ ನ್ನುವದು ಯಾವ ಬಾಧ್ಯತೆಯಿಂದ?"

"ವ್ಯಾಪಾರಿಗಳಿಗೆ ಜಗತ್ತಿನ ತುಂಬ ಯಾವ ಬಾಧ್ಯತೆಯುಂಟೋ ಅದರ ಮೇಲಿಂದ?"

"ಜಗತ್ತಿನ ತುಂಬ ಅಂದರೆ? ಸಮುದ್ರದ ಮೇಲೆಯೊ ನೆಲದ ಮೇಲೆಯೊ? ಸಮುದ್ರದ ಮಾತು ಬೇರೆ. ಸಮುದ್ರದ ಮೇಲೆ ನೌಕೆಯನ್ನು ತಿರುಗಾಡಿಸಬಹುದು; ಆದರೆ ಅಲ್ಲಿ ಶಿಬಿರವನ್ನಾಗಲಿ, ಗುದಾಮನ್ನಾಗಲಿ ಸ್ಥಾಪಿಸಲಿಕ್ಕೆ ಬರುವದಿಲ್ಲ. ಇವೆಲ್ಲ ಕೆಲಸ ಮಾಡಲಿಕ್ಕೆ ದಂಡೆಯಲ್ಲಿ ಕಾಲಿಡಬೇಕಾಗುವದು. ದಂಡೆಯಲ್ಲಿ ಯಾರೊ ಬ್ಬರದಾದರೂ ಒಡೆತನವು ಇದ್ದೇ ಇರುವದು. ಯಾರ ರಾಜ್ಯವಿದ್ದರೂ ಅವರು ಬಂದರದಲ್ಲಿ ಸುಂಕ ಎತ್ತತಕ್ಕವರೇ. ಸುಂಕವಿಲ್ಲದಂತಹ ಯಾವುದೊಂದು ರಾಜ್ಯದ ಉದಾಹರಣೆ ನೀವು ತೋರಿಸುವಿರೇನು?"

"ಸುಂಕ ತಕ್ಕೊಳ್ಳುತ್ತಿರುವದೇನೋ ನಿಜ; ಆದರೆ ನಾವು ಫಿರಂಗಿ ಜನರು. ಏಳು ಸಮುದ್ರ ದಾಟಿಬಂದಿರುವದನ್ನು ಲಕ್ಷ್ಯದಲ್ಲಿ ತಂದು ನಮ್ಮ ಮಟ್ಟಿಗಾದರೂ ಸುಂಕವನ್ನು ಬಿಡುವದು ಯೋಗ್ಯವೆನಿಸುವದಿಲ್ಲವೆ?"

"ಏಳು ಸಮುದ್ರ ದಾಟಿ, ಸಾವಿರಾರು ಕ್ರೋಶ ಪ್ರವಾಸ ಮಾಡಿ ಬರುವ ದೆಂದರೆ ಜೀವದ ಮೇಲಿನ ಪ್ರಸಂಗವಲ್ಲವೆ?"

"ಶಾಬಾಸ! ಸರಖೇಲರು ಒಳ್ಳೆಯ ಮಾರ್ಮಿಕವಾಗಿ ಮಾತಾಡಿದರು. ನಾವು ಜೀವದ ಮೇಲೆ ಗಂಡಾಂತರ ತಂದುಕೊಂಡು ಇಲ್ಲಿಗೆ ಬರುತ್ತಿರುವದರಿಂದಲೇ ಸುಂಕದ ಬಿಡುಗಡೆಯ ಬಾಧ್ಯತೆಯು ನಮಗೆ ಉತ್ಪನ್ನವಾಗುವದಿಲ್ಲವೆ?"

"ಸುಂಕದ ಬಿಡುಗಡೆಯ ಮಾತು ಒತ್ತಟ್ಟಿಗಿರಲಿ. ಮನುಷ್ಯನು ಜೀವದ ಮೇಲೆ ಹೀಗೆ ಉದಾರತೆಯನ್ನು ಸುಖಾಸುಖಿಯಾಗಿ ತೋರಿಸುವನೇ ಹೇಗೆಂಬದರ ಬಗ್ಗೆ ಮೊದಲು ನಿಮ್ಮನ್ನು ಕೇಳಬೇಕಾಗಿದೆ."

"ನಾನಾದರೂ ಅದನ್ನೇ ಅನ್ನುವೆನು ದಯಾರ್ಸಾರಂಗರೇ!"

"ಪ್ರತಿನಿಧಿಗಳೇ, ನಿಮಗೆ ನನ್ನ ಮಾತಿನ ಅರ್ಥವಾಗಲಿಲ್ಲ. ಹೊಟ್ಟೆಯಪಾಡಿಗಾಗಿ ಹೀಗೆ ಧೈರ್ಯ ಮಾಡುವವನು ತೀರ ಕಂಗಾಲನಿರಲಿಕ್ಕೆ ಬೇಕು. ಮನೆಯಲ್ಲಿ ಉಪವಾಸ ಬಿದ್ದು ಸಾಯುವದಕ್ಕಿಂತ ಈ ಮಾರ್ಗವು ಒಳ್ಳೆಯದೆಂದು ನೀವು ಸ್ವದೇಶತ್ಯಾಗ ಮಾಡುತ್ತಿರುವಿರಿ. ಕಂಗಾಲ ಸ್ಥಿತಿಗೆ ತಲುಪಿದ ಮನುಷ್ಯನು ಭಿಕ್ಷೆ ಬೇಡಬೇಕಲ್ಲದೆ, ಇತರ ಬಾಧ್ಯತೆಗಳನ್ನು ತೋರಿಸುವ ಅಧಿಕಾರವು ಅವನಿಗೆ ಉಂಟಾಗುವದಿಲ್ಲ. ದರಿದ್ರ ದೇಶದಲ್ಲಿ ಹುಟ್ಟಿ ದಾರಿದ್ರ್ಯವನ್ನನುಭವಿಸುತ್ತಿದ್ದ ನೀವು ಹೊಟ್ಟೆಯ ಪಾಡಿಗಾಗಿ ಇಲ್ಲಿ ಬಂದು ವ್ಯವಸಾಯ ನಡೆಯಿಸಿರುವಿರಿ. ಹೊಟ್ಟೆ ತುಂಬದಕ್ಕೆ ಒಂದು ದೇಶದವರು ಮತ್ತೊಂದು ದೇಶಕ್ಕೆ ಹೋಗಿ ಹೊಟ್ಟೆ ಹೊರಕೊಳ್ಳತೊಡಗಿದರೆ ಅದೊಂದು ಅಪರಾಧವೆಂದು ನಾನು ಅನ್ನುವದಿಲ್ಲ; ಆದರೆ ನೀವು ಬಾಧ್ಯತೆ ನಡೆಯಿಸಲು ಹೋಗುವಿರಿ; ಒಡೆತನ ತೋರಿಸಲು ಹೋಗುವಿರಿ. ಬೇಕಾದರೆ ನೀವು ಭಿಕ್ಷುಕ ಭೂಮಿಕೆ ಸ್ವೀಕರಿಸಿದರೆ ಶೋಭಿಸಬಹುದು, ಬಾಧ್ಯತೆಯ ಭಾಷೆಯನ್ನು ಮಾತ್ರ ಆಡಬೇಡಿರಿ."

ಪಾತ್ರತೆ ತೋರಿಸಿ ಬಾಧ್ಯತೆ ಸಿದ್ಧಪತಿಸ ಹೋದರೆ ಹಾಗು ಸಮುದ್ರ ಪ್ರವಾಸದ ಧೈರ್ಯ ಪ್ರದರ್ಶಿಸ ಹೋದರೆ ತನ್ನ ಕೊರಳಲ್ಲಿಯೇ ಭಿಕ್ಷುಕತನವು ಕಟ್ಟಲ್ಪಟ್ಟದ್ದನ್ನು ನೋಡಿ ಪಿರಂಗಿಯು ವ್ಯಸನಾಕ್ರಾಂತನಾದನು. ಅವನಿಗೆ ಸ್ವಲ್ಪ ಸಿಟ್ಟೂ ಬಂದಿತು. ಸರಖೇಲನ ಕೋಟಿಕ್ರಮವನ್ನು ತಿರುಗಿಸುದದಕ್ಕಾಗಿ ಆ ರಾಯಭಾರಿಯು: "ನಾನು ನಿಮ್ಮ ತರ್ಕವನ್ನು ವರ್ಣಿಸುವೆನು. ನಿಮ್ಮ ಸಿದ್ಧಾಂತವನ್ನು ಮಾತ್ರ ನಾನು ಮಾನ್ಯ ಮಾಡುವದಿಲ್ಲ. ಕಂಪನಿಯ ಪಿರಂಗಿಗಳಾದ ನಾವು ಭಿಕ್ಷುಕರಾಗಿರುತ್ತಿದ್ದರೆ ಮನೆಯಲ್ಲಿಯೇ ಇದ್ದು ನಮ್ಮ ನಿರ್ವಹಣ ಸಾಗಿಸುತ್ತಿದ್ದೆವು, ಕೇವಲ ಭಿಕ್ಷುಕರು ಸಮುದ್ರ ಸಂಚಾರದ ಮಹತ್ವಾಕಾಂಕ್ಷೆ ಹಿಡಿಯುತ್ತಿರುವದಿಲ್ಲ. ಸಮುದ್ರ ಸಂಚಾರ ಮಾಡುವಂಥ ಜಾತಿವಂತ ನಾವಿಕರು ನಾವು. ಭಿಕ್ಷುಕರು ದೊಡ್ಡ ದೊಡ್ಡ ನೌಕೆಗಳನ್ನೂ ಹಡಗುಗಳನ್ನೂ ಕಟ್ಟುತ್ತಿರುವದಿಲ್ಲ ಭಿಕ್ಷುಕರಾಗಿದ್ದರೆ ನಿಮ್ಮೆದುರಿಗೆ ಬೊಗಸೆಯೊಡ್ಡಿ ಪ್ರಾರ್ಥಿಸುತ್ತಿದ್ದೆವು. ನಾವು ಅಂಥ ಭಾರವಾದ ಹಾಗು ಬೆಲೆಯುಳ್ಳ ಹಡಗು ತೆಗೆದುಕೊಂಡು ಬರುವದು ಆಟಕ್ಕಲ್ಲ. ಆದರಲ್ಲಿ ನಮ್ಮಲ್ಲಿಯ ಉತ್ತಮ ಸರಕು ತರುವೆವು. ನಮ್ಮ ಸರಕುಗಳು ಚಿತ್ತಾಕರ್ಷಕವಿರುವದರಿಂದ ಅವುಗಳನ್ನು ಕೊಳ್ಳುತ್ತೀರಿ ನಿಮ್ಮ ವ್ಯಾಪಾರವು ಸಮುದ್ರದಲ್ಲಿ ನಡೆಯುತ್ತಿದ್ದರೆ ಅದು ಮೊನಡ್ಡು. ನಿಮ್ಮಲ್ಲಿಯ ಜನರು ಕಲಾವಿದರಿದ್ದರೆ ನಮ್ಮಂತೆ ಹಡಗು ಕಟ್ಟಿ ಪರದೇಶಗಳಿಗೆ ಸರಕು ಒಯ್ಯುತ್ತಿದ್ದರು. ನಿಮ್ಮಲ್ಲಿ ಕಲೆಯಿಲ್ಲ; ಕಲಾವಂತರನ್ನು ಕಂಡರೆ ಸಹನೆಯಿಲ್ಲ. ಇದೇ ನಿಮ್ಮ ರಾಜನೀತಿಯೇನು?"

ಫಿರಂಗಿ ಪ್ರತಿನಿಧಿಯು ಮಾತು ಕೇಳಿ ಸರಖೇಲನು ನಸುನಕ್ಕನು. ಅನಂತರ: "ಒಳ್ಳೆಯ ತಾತ್ವಿಕವಿಚಾರವಿದು! ಪ್ರತಿನಿಧಿಗಳೇ, ಒಂದು ಕ್ಷಣ ಹೀಗೆ ತಿಳಿಯಿರಿ. ನಾವು ನಿಮ್ಮಂತೆ ಕಲಾವಿದರಿರುವೆವೆಂದು ಬಗೆಯಿರಿ. ನಿಮ್ಮಂತೆ ಹಡಗು ಕಟ್ಟುವೆವೆಂದು ಕಲ್ಪಿಸಿರಿ, ನಿಮ್ಮಂತೆಯೇ ನಾವು ಅಖಂಡ ಧೈರ್ಯಶಾಲಿಗಳೂ ಇರುವೆವೆಂದು ಗ್ರಹಿಸಿರಿ. ನಾವೂ ನಿಮ್ಮಂತೆ ಮಹತ್ವಾಕಾಂಕ್ಷೆಯಿಂದ ನಿಮ್ಮ ಬಂದರಕ್ಕೆ ವ್ಯಾಪಾರ ಮಾಡಲು ಉತ್ತಮೋತ್ತಮ ಸರ್ವೋತ್ತಮ ಸರಕನ್ನು ತಂದೆವೆಂದು ತಿಳಿಯಿರಿ. ಆಗ ನೀವು ನಮ್ಮ ಸರಕಿಗೆ ಸುಂಕ ತೆಗೆದುಕೊಳ್ಳದೆ ಹಾಗೆಯೆ ಬಂದರದಲ್ಲಿ ಪ್ರವೇಶಮಾಡಗೊಡುವಿರೊ?"

"ಛೀ! ಅದು ನಮ್ಮ ರಾಜ್ಯ, ನಮ್ಮ ಬಂದರ, ನಮ್ಮ ಮಾತೃಭೂಮಿ. ಅಲ್ಲಿ ನೀವು ಬರಬಾರದು. ಬಂದರೆ ವ್ಯಾಪಾರ ಮಾಡಲಾಗದು, ವ್ಯಾಪಾರ ಮಾಡಿದರೆ ಒಂದಕ್ಕೆ ನೂರು ಸುಂಕ ತೆಗೆದುಕೊಳ್ಳುವೆವು."

"ಇದು ಯಾರ ರಾಜ್ಯ? ಯಾರ ಬಂದರ? ಯಾರ ಮಾತೃಭೂಮಿ? ಇಲ್ಲಿ ನೀವು ಸುಂಕವಿಲ್ಲದ ವ್ಯಾಪಾರ ಮಾಡಬೇಕೆಂದು ಆಶೆ ತಳೆಯುವದು ಉಪಹಾಸಾತ್ಮಕವಲ್ಲವೆ? ಈ ಮಾತು ಎಂದಿಗಾದರೂ ಈಡೇರಬಹುದೆ? ನಿಮ್ಮ ಮಾತೃಭೂಮಿಯ ಬಗ್ಗೆ ನಿಮಗೆ ಹೇಗೆ ಆದರವಿರುವದೋ, ನಿಮ್ಮ ಬಾಧ್ಯತೆಯ ಬಗ್ಗೆ ಹೇಗೆ ನಿಮಗೆ ಆಕಾಂಕ್ಷೆಯಿರುವದೋ ಹಾಗೆಯೇ ಇತರರಲ್ಲಿಯೂ ಇದ್ದರೆ ಅದಕ್ಕಾಗಿ ನೀವು ಈ ಪರಿ ಗೋಳಾಟವೆಬ್ಬಿಸುವದೇಕೆ? ಬೊಬ್ಬಾಟಮಾಡುವದೇಕೆ? ವಾದಹೂಡುವದೇಕೆ? ನೀವೇನು ಧರ್ಮಬುದ್ಧಿಯಿಂದ ನಿಮ್ಮಲ್ಲಿಯ ಸರಕುಗಳನ್ನು ಇಲ್ಲಿಯ ಜನರಿಗೆ ಧರ್ಮಾರ್ಥವಾಗಿ ಹಂಚಲು ಬರುತ್ತಿರುವದಿಲ್ಲ ಒಂದಕ್ಕೆ ಹತ್ತು ಲಾಭ ಹೊಂದುತ್ತಿರುವಾಗ, ಅದಲ್ಲಿಯ ಸ್ವಲ್ಪ ಅಂಶವನ್ನು ಸುಂಕದ ರೂಪದಿಂದ ತೆಗೆದುಕೊಂಡರೆ ನಿಮ್ಮದೇನು ಕೆಡುವದು? ನಾವು ನಮ್ಮ ಬಂದರದ ಬಳಿಯಲ್ಲಿ ಗುದಾಮು ಕಟ್ಟಲು ಒಪ್ಪಿಗೆಯಿತ್ತರೆ ನೀವು ನೆಲ್ಲನೆಲ್ಲನೆ ಕೈಕಾಲು ಚಾಚದೆ ಇರುವರೇನು? ಗುದಾಮಿನ ರಕ್ಷಣೆಗೆ ಸೈನಿಕರು, ಸೈನಿಕರಿಗಾಗಿ ಕೋಟಿ-ಕೊತ್ತಳಗಳು, ಕೋಟೆ-ಕೊತ್ತಳಗಳಲ್ಲಿ ಮದ್ದು-ಗುಂಡುಗಳು, ಮದ್ದು-ಗುಂಡುಗಳ ಹಾಗು ಇತರ ಶಸ್ತ್ರಾಸ್ತ್ರಗಳ ಸಿದ್ಧತೆಗಾಗಿ ಕಾರ್ಯಾಲಯಗಳು ಇವೆಲ್ಲವೂ ಬೇಕೇಬೇಕಲ್ಲವೆ? ಅದಕ್ಕಾಗಿಯೇ ನಾವು ಆಜ್ಞಾಪತ್ರದ ಕಟ್ಟಳೆ ಮಾಡಿದ್ದು. ಹಾವನ್ನು ಮನೆಯಲ್ಲಿ ತೆಗೆದುಕೊಂಡು ಅದರ ಸುತ್ತು ಮಂತ್ರದ ಗೆರೆಯೆಳೆಯಬೇಕೆಂದು ಹೇಳಿದರೆ ಈ ಉಪದ್ವ್ಯಾಪವನ್ನು ಜಾಣರು ಮಾಡಬಹುದೆ? ನಿಮ್ಮಂತೆ ಒಡವೆ ಸಿದ್ಧಪಡಿಸುವ ಕಲೆಯು ನಮ್ಮಲ್ಲಿಲ್ಲದಿದ್ದರೂ ನಿಮ್ಮ ಒಡವೆ ಕೊಳ್ಳಲು ದ್ರವ್ಯವಾದರೂ ನಮ್ಮಲ್ಲಿದೆ. ಇದರಲ್ಲಿ ನಿಮ್ಮ ಉಪಕಾರವೇತರದು?

ನಮ್ಮ ಮೇಲೆ ನೀವು ಉಪಕಾರ ಮಾಡುವದು ಬೇಡ, ನಿಮ್ಮ ಮೇಲೆ ನಾವು ಉಪಕಾರ ಮಾಡುವದೂ ಬೇಡ. ನೀವು ಸುಂಕದ ಬಿಡುಗಡೆಯ ಭಿಕ್ಷೆ ನಮ್ಮಲ್ಲಿ ಬೇಡುವ ಆವಶ್ಯಕತೆಯೇನು?"

ಕಾನ್ಹೋಜಿರಾಯನ ಮಾತುಗಳಿಂದ ಪಿರಂಗಿ ಪ್ರತಿನಿಧಿಯು ನಿರುತ್ತರನಾದನು ಅವನು ತನ್ನ ಭಾಷಣದ ಓಘವನ್ನು ಬೇರೆ ಮಾಡಿ:—"ಬಂದರಗಳಲ್ಲಿ ಬರುವ ಹಡಗುಗಳಿಗೆ ಸುಂಕ ತೆಗೆದುಕೊಳ್ಳುವ ಮಾತು ಇರಲಿ. ಸಮುದ್ರದ ದಂಡೆಯಲ್ಲಿ ತಿರುಗಾಡುವ ಹಡಗುಗಳಿಗೆ ಆಜ್ಞಾಪತ್ರ ಕೇಳುತ್ತಿರುವಿರಿ. ಸಮುದ್ರವು ಎಲ್ಲರಿಗೂ ಆಷ್ಟೇ. ಅಲ್ಲಿ ಸಂಚರಿಸುವವರಿಗೆ ಯಾರೂ ಪ್ರತಿಬಂಧ ಮಾಡಕೂಡದು."

"ಸಮುದ್ರವು ಎಲ್ಲರಿಗೂ ಮುಕ್ತವಾಗಿರಬೇಕೆಂಬ ಮಾತಿಗೆ ನಾನೂ ಸಮ್ಮತಿಸುವೆನು. ನಮ್ಮ ಗಡಿಯಲ್ಲಿ ಸಂಚರಿಸುವ ಹಡಗುಗಳಿಗೆ ಮಾತ್ರ ಆಜ್ಞಾ ಪತ್ರಬೇಕೆಂದು ನಾನು ಕಟ್ಟಳೆಮಾಡಿರುವೆನು. ದೂರದಲ್ಲಿ ಸಂಚರಿಸುವ ಹಡಗಗಳಿಗೆ ಆಜ್ಞಾಪತ್ರದ ಆವಶ್ಯಕತೆಯಿಲ್ಲ. ನಾಲ್ಕೈದು ಹರದಾರಿಗಳೊಳಗೆ ನಮ್ಮ ಗಡಿಯಿರುವದು. ಯಾವ ಅಡ್ಡಿಯೂ ಇಲ್ಲದಿದ್ದರೆ ನೀವು ನಮ್ಮ ಗಡಿಯಲ್ಲಿ ಬರುವಿರಿ; ಯಾವನಾದರೂ ನೌಕೆಗಳು ಕೈಗೆ ಸಿಕ್ಕರೆ ಅವರೊಳಗಿನ ಸರಕನ್ನೂ ಜನರನ್ನೂ ತೆಗೆದುಕೊಂಡು ಹೋಗುವಿರಿ. ಹೀಗೆ ಸುಲಿಗೆಗಾರಿಕೆ ಮಾಡುವವರಿಗೆ ಯೋಗ್ಯ ಬಿಗಿ ಮಾಡದೆ ಇದ್ದರೆ ಹೇಗೆ? ನಮ್ಮ ಸರಕನ್ನು ಸುಲಿಯುವ ಹಾಗು ನಮ್ಮ ಜನರನ್ನು ಸೆರೆ ಹಿಡಿದು ಗುಲಾಮರನ್ನಾಗಿ ಮಾಡುವ ಉದ್ದೇಶದಿಂದ ಬರುವ ಹಡಗುಗಳನ್ನು ನಮ್ಮ ಸಮುದ್ರದಲ್ಲಿಯಷ್ಟೇ ಏಕೆ ಏಳು ಸಮುದ್ರದಾಚೆಗೆ ಇದ್ದರೂ ಅವುಗಳನ್ನು ಹಿಡಿದು ತರುವ ಅಧಿಕಾರವು ನಮಗಿರುವದೆಂದು ಖಂಡಿತವಾಗಿ ತಿಳಿಯಿರಿ."

ಇಲ್ಲ, ಹಾಗೇನೂ ಇಲ್ಲ. ನಮ್ಮ ಹಡಗದಲ್ಲಿ ನಿಮ್ಮ ಸರಕೂ ನಿಮ್ಮ ಮನುಷ್ಯರೂ ಇಲ್ಲದಿರುವಾಗ ನೀವು ನಮ್ಮ ಹಡಗಗಳನ್ನು ಸುಲಿದಿರುವಿರಿ. ಈ ಕೃತ್ಯಕ್ಕೆ ಸಮುದ್ರಗಳ್ಳತನವೆನ್ನುವರು. ಜಗತ್ತಿನ ರಾಜಕಾರಣದಲ್ಲಿ ಇಂಥ ಕೃತ್ಯಗಳಿಗೆ ಒಪ್ಪಿಗೆಯಿಲ್ಲ; ಪರಮಾತ್ಮನಲ್ಲಿ ಸಹ ಇಂಥ ಕೃತಿಗಳಿಗೆ ಎಡೆಯಿಲ್ಲ."

"ಪ್ರತಿನಿಧಿಯ ಈ ಉದ್ಧಾಮತನದ ಮಾತು ಕೇಳಿ ಕಾನ್ಹೋಜಿರಾಯನು ಸಂತಾಪವುಳ್ಳವನಾದನು. ಕಣ್ಣು ಕೆಂಪಗಾದವು, ಕೈಯು ಖಡ್ಗದಕಡೆಗೆ ಹೋಗತೊಡಗಿತು. ಆಗ ಅವನು ತೀಕ್ಷ್ಣ ಸ್ವರದಿಂದ:—"ಪಿರಂಗಿ ರಾಯಭಾರಿಗಳೇ! ನೀವು ಏನು ಮಾತಾಡುತ್ತಿರುವಿರೆಂಬುದರ ಅರಿವು ನಿಮಗಿರುವದೆ? ನಾವು ಜಗತ್ತಿನ ಶತ್ರುಗಳೆಂದೂ ಈಶ್ವರನಲ್ಲಿ ಅಪರಾಧಿಗಳೆಂದೂ ನೀವು ಮಾತಾಡಿದಿರಿ. ಪ್ರತಿನಿಧಿಗಳೇ, ನೀವು ಕಂಪನಿ ಸರಕಾರದ ರಾಯಭಾರಿಗಳಾಗಿ ಬಂದಿರುವಿರೆಂದು ಇಂಥ ಅಪ

ಮಾನಕರ ಭಾಷಣವನ್ನು ಸಹಿಸಿರುವೆನು. ಇಲ್ಲವಿದ್ದರೆ ಇಲ್ಲಿಯೇ ನಿಮ್ಮನ್ನು ಬಂಧಿಸಿ ಸೆರೆಯಲ್ಲಿರಿಸುತ್ತಿದ್ದೆನು. ಶಿಷ್ಟಾಯಿಗೆಂದು ಬಂದ ನೀವು ನಿಮ್ಮ ಅಧಿಕಾರ ವನ್ನು ಬಿಟ್ಟು ಭಾಷಣ ಮಾಡತಕ್ಕದ್ದಿರಲಿಲ್ಲ. ನಾವು ನಮ್ಮ ಜನ್ಮಭೂಮಿಯಲ್ಲಿ, ನಮ್ಮ ಮನೆಯ ಬಂದರದಲ್ಲಿ, ನಮ್ಮ ಸಂರಕ್ಷಣೆಗಾಗಿ ಕಟ್ಟಳೆ ಮಾಡುತ್ತಿರುವೆವು. ಆಜ್ಞಾಪತ್ರ ಸುಂಕ ಬೇಡುತ್ತಿರುವೆವು. ಇದಕ್ಕೆ ನೀವು ಸುಲಿಗೆಯೆಂದು ಹೆಸರಿಟ್ಟು ಜಗತ್ತಿನ ನ್ಯಾಯಾಸನದ ಮುಂದೆಯೂ ಈಶ್ವರನಲ್ಲಿಯೂ ನಮ್ಮನ್ನು ಅಪರಾಧಿ ಗಳೆಂದು ನಿರ್ಣಯಿಸಲು ಸಿದ್ಧರಾಗಿರುವಿರಿ. ಫಿರಂಗಿಗಳಾದ ನೀವು ಏಳು ದೇಶದವರು. ಏಳು ಸಮುದ್ರ ದಾಟಿ ದೈವ ತೆರೆಯಿಸಿಕೊಳ್ಳಲಿಕ್ಕೆಂದು ಬಂದು ಇದೇನು ನಡಯಿಸಿರು ವಿರಿ? ಸಮುದ್ರ ವ್ಯಾಪಾರಿಗಳಾದ ನಿಮ್ಮ ದೌರ್ಜನ್ಯ ದುರ್ಗುಣಗಳನ್ನು ನಾವು ಅರಿಯದಿರುವೆವೆ? ನೀವು ದುರ್ಗುಣಗಳ ಪುತ್ಥಳಿಗಳಾಗಿರುವಿರಿ. ಗೋವೆ ಪ್ರಾಂತ ದಲ್ಲಿ ನಿಮ್ಮ ಜನರು ನಡೆಯಿಸಿದ ಕೋಲಾಹಲವನ್ನು ಯಾರು ಕೇಳಿಲ್ಲ? ಬಡ ಕೊಂಕಣೀಯರ ಸಮುದ್ರ ದಂಡೆಯನ್ನಂತು ನೀವು ಆಕ್ರಮಿಸಿಯೇ ಆಕ್ರಮಿಸಿರು ವಿರಿ. ಅಲ್ಲಿಯ ಜನರ ವ್ಯಾಪಾರ ಮುಳುಗಿಸಿದಿರಿ, ನಿಮ್ಮ ವ್ಯಾಪಾರ ಪ್ರಾರಂಭಿಸಿ ದಿರಿ. ನಮ್ಮ ಹೊಲ-ಮನೆಗಳನ್ನೂ ತೋಟ-ಪಟ್ಟಿಗಳನ್ನೂ ಹಾಳುಗೆಡಹಿದಿರಿ. ಇನ್ನೂ ಏನೇನೋ ಮಾಡಬೇಕೆಂದು ಸಾಹಸ ನಡೆಯಿಸಿರುವಿರಿ. ಗೋವಿನ ಮುಖ; ಹುಲಿಯ ಹೃದಯ! ನನ್ನ ಮಾತನ್ನು ನೀವು ಅಲ್ಲಗಳೆಯಲು ಸಮರ್ಥ ರಾಗಲಾರಿರಿ, ತಿಳಿಯಿತೇ?"

ಸಂತಾಪಾತಿಶಯದಿಂದ ಆಂಗ್ರೆಯು ಹೀಗೆ ನುಡಿದಕೂಡಲೆ ಫಿರಂಗಿ ಪ್ರತಿ ನಿಧಿಯು ತೆಪ್ಪಗಾದನು. ಆದರೂ ಆಶ್ಚರ್ಯದಿಂದ — 'ಸರಖೇಲರೆ, ಒಟ್ಟಿನಮೇಲೆ ನಾವು ಬಹಳೇ ಕೆಟ್ಟವರಿರುವೆವೆಂದಂತಾಯಿತು. ನಾವು ಮತ್ತೆ ಏನೇನು ದುಷ್ಕೃತ್ಯ ಮಾಡುತ್ತಿರುವೆವೆಂಬದನ್ನು ಒಮ್ಮೆ ಹೇಳಿಬಿಡಿರಿ."

"ಅಪರಾಧದ ಬಗ್ಗೆ ಆಶ್ಚರ್ಯ. ಆಶ್ಚರ್ಯಗಳನ್ನು ವ್ಯಕ್ತಮಾಡುವದರಿಂದ ಆ ಅಪ ರಾಧಗಳು ಹೋಗುವದಿಲ್ಲ. ಇನ್ನೂ ನಿಮಗೆ ನಿಮ್ಮ ದುಷ್ಕೃತ್ಯಕೇಳುವ ಹುರುಪು ಇರುವದೆಂದು ಹೇಳುವೆನು; ಕೇಳಿರಿ. ಕರಾವಳಿಯ ಸಮುದ್ರ ಪ್ರದೇಶದಲ್ಲಿ ಹಾಗು ಅದರಾಚೆಗೆ ಯಾರಾವರೂ ಬಡ ಕೋಳಿ ನಾವಿಕರು ಕೈಗೆ ಸಿಕ್ಕರೆ ಅವರ ಸರಕನ್ನು ನೀವು ಎಷ್ಟು ಸಾರೆ ಅಪಹಾರಮಾಡಿಲ್ಲ? ಎಷ್ಟು ಜನರನ್ನು ಸೆರೆ ಹಿಡಿದು ವಿದೇಶಕ್ಕೆ ಒಯ್ದು ಮಾರಿಲ್ಲ? ನೀವು ಅನೇಕ ಬಡ ನಾವಿಕರನ್ನು ಹಿಡಿದು ಹೊಡೆದು ಬಡಿದು ಅವರನ್ನು ಗುಲಾಮರನ್ನಾಗಿ ಮಾಡಿದ ಬಗ್ಗೆ ನನ್ನಲ್ಲಿ ಆಧಾರಗಳಿವೆ. ಈ ಸಂಗತಿ ಯನ್ನು ನೀವು ಒಪ್ಪುವಿರೋ ಇಲ್ಲವೋ? "

"ಇಲ್ಲ, ಎಂದೂ ಒಪ್ಪುವದಿಲ್ಲ. ಇಂಥ ದುಷ್ಕೃತ್ಯಗಳು ಪಿರಂಗಿಗಳಾದ ನಮ್ಮಿಂದ ಘಟಿಸಿಲ್ಲವೆಂದು ಮುಕ್ತಕಂಠದಿಂದ ಹೇಳುವೆನು. ನಮ್ಮ ಏಸೂಕ್ರಿಸ್ತನಿಗೆ ಗುಲಾಮಗಿರಿಯು ಮಾನ್ಯವಿಲ್ಲ."

'ಪ್ರತಿನಿಧಿಗಳೇ, ಸುಳ್ಳಾಡಿ ನೀವು ನಿಮ್ಮ ಬಾಯಿಯನ್ನು ಹೊಲಸು ಮಾಡಿಕೊಳ್ಳುವಿರಿ; ಮತ್ತು ಅದೇ ಬಾಯಿಂದ ನಿಮ್ಮ ಧರ್ಮ ಗುರುವಿನ ಹೆಸರು ತೆಗೆದುಕೊಂಡು ಅವನನ್ನೂ ಅಪವಿತ್ರಗೊಳಿಸುತ್ತೀರಿ. ಪಿರಂಗಿಗಳಾದ ನೀವು ಗುಲಾಮರ ವ್ಯಾಪಾರ ಮಾಡುವದಿಲ್ಲವೆಂದು ಹೇಳಲು ನಾಚಿಕೆಯುಂಟಾಗುವದಿಲ್ಲವೇ? ಈ ವಿಷಯದಲ್ಲಿ ನೀವು ನೂರು ದೇವರಾಣೆ ಮಾಡಿದರೂ ಅದನ್ನು ನಿಜವೆಂದು ನಂಬುವವರಾರು? ನಮ್ಮ ಜನರನ್ನು ನೀವು ಪರದೇಶದಲ್ಲಿ ಒಯ್ದು ಮಾರುತ್ತಿರುವದಕ್ಕೆ ಬಲವಾದ ಸಾಕ್ಷಿಗಳು ನನ್ನಲ್ಲಿವೆ. ಸೆರೆಸಿಕ್ಕು ಮಾರಲ್ಪಟ್ಟು, ಅನಂತರ ದೈವಯೋಗದಿಂದ ಪಾರಾಗಿ ಬಂದ ಜನರನ್ನು ನಿಮ್ಮ ಎದುರಿಗೆ ನಿಲ್ಲಿಸಬೇಕೇ? ಗುಲಾಮರ ವ್ಯಾಪಾರಕ್ಕಾಗಿ ಹೊರಟ ನಿಮ್ಮವರ ಹಡಗುಗಳಲ್ಲಿ ಸೆರೆಸಿಕ್ಕು ದಾವಣಿ ಕಟ್ಟಿದ ಅನೇಕ ಕಾರೇವಾಡಿ, ಕೊಂಕಣಿ ಗುಜರಾಥಿ ನಾವಿಕರನ್ನು ನಾನೇ ಬಿಡಿಸಿಕೊಂಡು ಬಂದಿರುವೆನು ಕಣ್ಣಾರೆ ಕಂಡ ಮಾತಿನಲ್ಲಿ ಸುಳ್ಳಾಡಿ ನಡೆಯುವದೆ? ನೀವು ಇಷ್ಟು ಹಾವಳಿ ಮಾಡುವದು ಎಲ್ಲರಿಗೆ ಗೊತ್ತಿದ್ದರೂ ನಮ್ಮ ಜನರು ನಿಮ್ಮ ಮೇಲೆ ಏನಾದರೂ ಅತ್ಯಾಚಾರ ಮಾಡಿದ್ದರೆ ಹೇಳಿರಿ ನೋಡೋಣ? ನಾವು ನಿಮ್ಮ ಮಹತಿಯನ್ನು ನೋಡಿ, ಇಲ್ಲವೆ ನಿಮ್ಮ ಶಕ್ತಿಯನ್ನು ನೋಡಿ ಬೆದರಿ ಅತ್ಯಾಚಾರ ಮಾಡುವದಿಲ್ಲವೆಂದು ಅನ್ನುತ್ತೀರೇನು? ಹಾಗೆ ಅನ್ನುತ್ತಿದ್ದರೆ ನಿಮ್ಮದು ಶುದ್ಧ ತಪ್ಪು. ನಾವು ನಿಮಗೆ ಹೆದರುತ್ತಿರುವದಿಲ್ಲ; ನಮ್ಮ ಜನರು ಅತ್ಯಾಚಾರ ಪ್ರಿಯರಲ್ಲ. ನ್ಯಾಯನೀತಿಗಳಿಗೆ ನಮ್ಮಲ್ಲಿ ಸ್ಥಾನವಿದೆ; ನಮ್ಮಲ್ಲಿ ಪಾಪಭಯವಿದೆ; ಮಾನವ್ಯತೆಯಿದೆ; ಭೂತದಯೆಯಿದೆ; ನಮ್ಮಂತೆಯೇ ಬೇರೆಯವರೆಂದು ತಿಳಿಯುವ ಸದ್ಬುದ್ಧಿಯಿದೆ. ನಮ್ಮವರು ನಿಮ್ಮಲ್ಲಿಯ ಯಾವನನ್ನಾದರೂ ಹಿಡಿದು ಮಾರಿದ್ದರೆ ಹೇಳಿರಿ; ಇಲ್ಲವೆ ಅವನ ಮೇಲೆ ಅತ್ಯಾಚಾರ ನಡೆಯಿಸಿದ್ದರೆ ತಿಳಿಸಿರಿ. ಯುದ್ಧದಲ್ಲಿ ಸೋತ ಜನರನ್ನು ನಾವು ಸೆರೆಹಿಡಿಯುವದು ನಿಜ. ಸೆರೆಮನೆಯಲ್ಲಿ ನಾವು ಅವರನ್ನು ಹೇಗೆ ನಡೆಯಿಸಿಕೊಳ್ಳುವೆವೆಂಬದನ್ನು ನೋಡಿ ಮನನ ಮಾಡಿಕೊಳ್ಳಬೇಕಾಗಿದ್ದರೆ ನನ್ನೊಡನೆ ನಡೆಯಿರಿ. ನಿಮಗೆ ನಮ್ಮ ಸೆರೆಮನೆಯೊಳಗಿನ ಪಿರಂಗಿ ಸೆರೆಯಾಳುಗಳ ವ್ಯವಸ್ಥೆಯನ್ನು ತೋರಿಸುವೆನು. ತಿರುಗಿ ಕೇಳಿದರೆ ನಿಮ್ಮ ಪಿರಂಗಿ ಸೆರೆಯಾಳುಗಳೇ ಉನ್ಮತ್ತರಾಗಿ ನಡೆಯುತ್ತಾರೆ. ನಮ್ಮ ಕಾವಲುಗಾರರು ಸಹನಶೀಲರೆಂದು ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆ. ಹಾಗಿಲ್ಲದಿದ್ದರೆ ನಿಮ್ಮ ಪಿರಂಗಿಗಳು ಕೊಲೆಗೀಡಾಗಿ ಸಮುದ್ರದ ಪಾಲಾಗುತ್ತಿದ್ದರು.

ಒಂದು ವೇಳೆ ಹಾಗೆ ಮಾಡಿದರೂ ನೀವು ಮಾಡುವದೇನು? ನಮ್ಮ ಕೃತ್ಯಗಳಾದರೂ ನಿಮಗೆ ತಿಳಿಯುವ ಬಗೆ ಹೇಗೆ? ಆದರೆ ನಮ್ಮ ಕೊಂಕಣೀಯ ನಾವಿಕರಿಂದ ಅಥವಾ ಸೈನಿಕರಿಂದ ನಿಮ್ಮೊಳಗಿನ ಒಬ್ಬನಾದರೂ ನಿರಪರಾಧಿ ಪಿರಂಗಿಯು ಕೊಲೆಯಾಗಿಲ್ಲವೆಂದು ಎದೆ ತಟ್ಟಿ ಹೇಳುವೆನು. ನಾನು ಹೇಗೆ ಹೇಳುವೆನೋ ಹಾಗೆ ನೀವು ಎದೆ ತಟ್ಟಿ, ನಮ್ಮ ನಾವಿಕರನ್ನು ಗುಲಾಮರನ್ನಾಗಿ ಮಾಡಿಲ್ಲವೆಂದು ಹೇಳುವ ಎದೆಗಾರಿಕೆಯಿರುವದೆ?"

ಪಿರಂಗಿ ಪ್ರತಿನಿಧಿಯು ಕಾನ್ಹೋಜಿರಾಯನ ಮಾತು ಕೇಳಿ ದಿಙ್ಮೂಢನಾಗಿ ಕುಳಿತನು. ಅವನಿಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದೆ ಸ್ವಸ್ಥ ಕುಳಿತನು.

"ಯಾಕೆ? ನನ್ನ ಮಾತಿಗೆ ಉತ್ತರ ದೊರೆಯಲಾರದೆ?" ಎಂದು ಕಾನ್ಹೋಜಿಯು ಕೇಳುತ್ತಿರಲು, ಆ ಮಂತ್ರಣಾಗಾರದಲ್ಲಿ ಸೆರೆಮನೆಯ ನಾಯಕನು ಪ್ರವೇಶಿಸಿ ಸರಖೇಲನಿಗೆ ವಂದನೆಗಳನ್ನರ್ಪಿಸಿದನು.

---

( ೪ )

ಮಂತ್ರಣಾಗಾರದಲ್ಲಿ ಆಕಸ್ಮಿಕವಾಗಿ ಸೆರೆಮನೆಯ ನಾಯಕನು ಬಂದದ್ದರ ಕಾರಣವನ್ನು ಕಾನ್ಹೋಜಿಯು ಕೇಳಿದನು. ನಾಯಕನು ತನ್ನ ಬರುವಿಕೆಯ ಕಾರಣವನ್ನು ಒಡೆಯನಿಗೆ ತಿಳಿಸಿದನು. ತರುವಾಯ ಅವನು ಪಿರಂಗಿ ಪ್ರತಿನಿಧಿಗೆ: "ಇದೀಗ ಒಂದು ಸಂಗತಿ ನಿಮ್ಮ ಪ್ರತ್ಯಯಕ್ಕೆ ಬರುವದು. ಸೆರೆಯಾಳಾದ ಪಿರಂಗಿಯು ಪ್ರಾಮಾಣಿಕನಿದ್ದರೆ ಹಾಗು ಏಸುವಿನಲ್ಲಿ ವಿಶ್ವಾಸವುಳ್ಳವನಿದ್ದರೆ ಸತ್ಯವನ್ನು ನುಡಿಯುವನು; ಒಂದು ವೇಳೆ ಅಸತ್ಯವಾಡಿದರೆ ಅವನ ಭಾಷೆಯನ್ನು ಅಸತ್ಯಮಾಡುವದಕ್ಕೆ ಸಾಕ್ಷಿಗಳನ್ನು ತಂದು ನಿಲ್ಲಿಸುವೆನು."

ನಾಯಕನು ಪಿರಂಗಿ ಸೆರೆಯಾಳನ್ನು ಕರೆದುಕೊಂಡು ಬಂದನು. ಆ ಪಿರಂಗಿಯು ತನ್ನ ಭಾಷೆಯಲ್ಲಿ ಪ್ರತಿನಿಧಿಗೆ ಎಲ್ಲ ಸಂಗತಿ ಹೇಳಿದನು. ಆಗ ಕಾನ್ಹೋಜಿಯು: "ಪ್ರತಿನಿಧಿಗಳೇ, ನೀವು ಅನೀತಿಯವರಲ್ಲವೆಂದು ಪ್ರತಿಪಾದಿಸುತ್ತಿದ್ದಿರಿ; ಗುಲಾಮರ ವ್ಯಾಪಾರ ಮಾಡುವದಿಲ್ಲೆಂದು ಸಾರುತ್ತಿದ್ದಿರಿ. ನಮ್ಮ ಕುಣಕ್ಯಾನು ತನ್ನ ಕರ್ತವ್ಯ ಪ್ರಭಾವವನ್ನು ತೋರಿಸದಿದ್ದರೆ ಮೂವರು ಕೊಂಕಣಿಯರೂ ಸೆರೆಯಾಳಾಗಿ ಮಾರಲ್ಪಡುತ್ತಿದ್ದರು. ಅವರ ದೈವವು ಚೆನ್ನಾಗಿತ್ತೆಂದೇ ವಿಜಯದುರ್ಗವನ್ನು ತಲುಪಿದರು" ಎಂದೆಂದು, ಸರಖೇಲನು ಕುಣಕ್ಯಾನನ್ನು ಕುರಿತು:—"ಕುಣಕ್ಯಾ, ಆ ಪಿರಂಗಿಯು ನಿನ್ನೆಯ ಘಟನೆಯನ್ನು ತೀರ ಸಂಕ್ಷೇಪವಾಗಿಯೂ ಹಾರಿಸಿ ಹಾರಿಸಿಯೂ ಹೇಳಿದನು. ನೀನು ಸವಿಸ್ತರವಾಗಿ ಎಲ್ಲ ಸಂಗತಿಯನ್ನು ಹೇಳು."

ಕುಣಕ್ಯಾನು ಎಲ್ಲ ಘಟನೆಗಳನ್ನು ಇದ್ದಕ್ಕಿದ್ದ ಹಾಗೆ ವರ್ಣಿಸಿ ಹೇಳಿದನು. ದ್ವಿಭಾಷಿಯು ಕುಣಕ್ಯಾನ ಕೊಂಕಣಿ ಬಾಷೆಯನ್ನು ಪಿರಂಗಿ ಪ್ರತಿನಿಧಿಯ ಭಾಷೆಯಲ್ಲಿ ತಿಳಿಸಿ ಹೇಳುತ್ತಿದ್ದನು. ಅವನ ಹೇಳಿಕೆ ಮುಗಿದ ಮೇಲೆ ಸರಖೇಲರು:—"ಕೇಳಿ ಸಿರಾ ಪ್ರತಿನಿಧಿಗಳೇ? ನಿಮ್ಮ ಜನರ ನೀತಿವಂತಿಕೆ ಹೇಗಿರುವದೆಂಬದರ ಅನುಭವ ವಾಯಿತೇ? ಅನುಭವವಿದ್ದೇ ಇರುವದು; ಆದರೆ ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿ ಯುವಂತೆ ನಿಮ್ಮ ವರ್ತನೆಯಿರುವದು. ದುಷ್ಕೃತಿಗಳನ್ನು ಮಾಡಿಯೂ ಮಾಡ ದವರಂತೆ ವರ್ತಿಸುವ ಗುಣವು ನಿಮ್ಮಲ್ಲಿ ಜನ್ಮತಃ ಇರುವದು. ಅಕೃತ್ಯಗಳನ್ನು ಮಾಡುತ್ತಿರದವರಂತೆ ನಟನೆ ಮಾಡುತ್ತಿರುವಿರಿ."

'ಹೋಗಲಿ ಬಿಡಿರಿ; ಸರಖೇಲರೆ!" ಪಿರಂಗಿ ಪ್ರತಿನಿಧಿಯು ವಿಷಯಾಂತರ ಮಾಡಬೇಕೆಂಬ ಉದ್ದೇಶದಿಂದ ಕಾನ್ಹೋಜಿಯನ್ನು ಕುರಿತು:—"ಸಮುದ್ರದಲ್ಲಿ ಇಂತಹ ಸಂಗತಿಗಳು ಜರುಗತಕ್ಕವುಗಳೇ. ಅವುಗಳಿಗೆ ಮಹತ್ವವನ್ನು ನಾವೂ ನೀವೂ ಕೂಡಿಯೆ ಕೊಡಬಾರದು. ಎಲ್ಲ ಪಿರಂಗಿಗಳನ್ನು ಅಧಿಕಾರದಲ್ಲಿಟ್ಟುಕೊಂಡು ಶಿಷ್ಟಾಚಾರದ ನಿಯಮಗಳಂತೆ ನಡೆಯ ಹಚ್ಚುವದು ಕಂಪನಿ ಸರಕಾರಕ್ಕೆ ಹೇಗೆ ಸಾಧಿಸುವದು? ಭಿನ್ನ ಪ್ರಕೃತಿ, ಭಿನ್ನ ವ್ಯಕ್ತಿ. ಮನುಷ್ಯನೆಂದ ಮೇಲೆ ಅವನಿಂದ ಅಪರಾಧಗಳು ಘಟಿಸತಕ್ಕವುಗಳೇ. ಯಾವನೊಬ್ಬ ಪಿರಂಗಿಯು ಸಮುದ್ರದಲ್ಲಿ ದುಷ್ಕೃತ್ಯ ಜರುಗಿಸಿದರೆ ದೂರದಲ್ಲಿರುವ ಕಂಪನಿ ಸರಕಾರಕ್ಕೆ ಅದು ತಿಳಿಯುವದು ಶಾಧ್ಯವಿದೆಯೇ?"

"ಏನು? ನಿಮ್ಮ ಪಿರಂಗಿಗಳು ಮಾಡುವ ಕೃತಿಗಳು ನಿಮ್ಮ ಕಂಪನಿ ಸರಕಾರಕ್ಕೆ ತಿಳಿಯುವಂತಿಲ್ಲವೆ? ಸಮುದ್ರದಲ್ಲಿ ವ್ಯಾಹತಿಯಿಲ್ಲದೆ ಸುಲಿಗೆಯು ನಡೆಯುತ್ತಲಿದೆ; ನಮ್ಮ ಬಡ ಜನರನ್ನು ಹಿಡಿದು ವಿದೇಶದಲ್ಲಿ ಗುಲಾಮರಂತೆ ಮಾರುವ ಕೆಲಸ ಸಾಗು ತ್ತಿದೆ. ಇವೆಲ್ಲ ನಿಮ್ಮ ಸರಕಾರಕ್ಕೆ ತಿಳಿಯದಿರುವವೆ? ನೀವು ಸುಳ್ಳು ಮಾತಾಡಿ ಮತ್ತಿಷ್ಟು ಮೋಸಿಗಳಾಗ ಬೇಡಿರಿ. ನಿಮ್ಮ ಸರಕಾರದ ಧೋರಣದಂತೆಯೇ ಇವೆಲ್ಲ ಕೃತಿಗಳು ನಡೆಯುತ್ತಿರುವ ಮೂಲಕ ಈ ದುಷ್ಕೃತ್ಯಗಳ ಹೊರೆಯು ನಿಮ್ಮ ಸರ ಕಾರದ ಮೇಲೆಯೇ ಇರುವವೆಂದು ನಾನು ಸಾರಿ ಹೇಳಬಲ್ಲೆನು."

"ಹೋಗಲಿ ಬಿಡಿರಿ ಸರಖೇಲರೇ, ಕ್ಷುಲ್ಲಕ ಮಾತಿಗಾಗಿ ಮಂಥನವೇಕೆ? ನಾನು ಇಲ್ಲಿಗೆ ಬಂದಿದ್ದರ ಉದ್ದೇಶ ಬೇರೆ ಇವೆ. ನೀವು ಕೊಂಕಣದ ರಾಜರಿರುವದರಿಂದ, ನಿಮ್ಮ ಹಾಗು ಕಂಪನಿ ಸರಕಾರದ ನಡುವೆ ಸ್ನೇಹವಿರುವದು ಒಳಿತಲ್ಲವೆ? ನಮ್ಮ ಸರಕಾರವು ನಿಮ್ಮೊಡನೆ ಸ್ನೇಹ ಬಳೆಯಿಸುವ ಇಚ್ಛೆಯುಳ್ಳದ್ದಾಗಿದೆ. ಈ ಕೆಲಸದ ಸಲುವಾಗಿ ಅದು ನನ್ನನ್ನು ಇಲ್ಲಿಗೆ ಕಳುಹಿಸಿದೆ. ಮುಖ್ಯ ವಿಷಯವನ್ನು ಬದಿಗಿರಿಸಿ

ಅಮುಖ್ಯ ವಿಷಯುಗಳ ಬಗ್ಗೆ ಚರ್ವಿತ ಚರ್ವಣ ಮಾಡುವದೂ ವಾದವಿವಾದ ಮಾಡುವದೂ ವಿಹಿತವಲ್ಲ. ಕಂಪನಿ ಸರಕಾರ ಹಾಗು ನಿಮ್ಮ ನಡುವೆ ಸ್ನೇಹದ ಒಪ್ಪಂದವಾದರೆ ಎಷ್ಟು ವಿಹಿತವಾಗುವದು ನೋಡಿರಿ!"

"ಸ್ನೇಹವು ವಿಹಿತವಾಗುವದಿಲ್ಲವೆಂದು ನಾನು ಅನ್ನುವದಿಲ್ಲ. ನಿಜವಾದ ಅಪರಾಧಿಗಳು ನೀವಿರಲು, ಆ ಅಪರಾಧವನ್ನು ನಿರಪರಾಧಿಗಳ ಮೇಲೆ ಹೊರಿಸುವ ಸಾಹಸ ಮಾಡಿದ್ದರಿಂದ ಇಷ್ಟು ವಾದಮಾಡಬೇಕಾಯಿತು. ಇನ್ನಾದರೂ ಫಿರಂಗಿಗಳು ಇಂತಹ ಅತ್ಯಾಚಾರಗಳನ್ನು ತ್ಯಜಿಸಿದರೆ ವಿಹಿತವಾಗುವದು. ಒಳ್ಳೇದು. ನಿಮ್ಮ ಕಂಪನಿ ಸರಕಾದ ಅಭಿಪ್ರಾಯವಾದರೂ ಏನಿದೆ?"

"ನಿಮ್ಮ ಹಾಗು ಕಂಪನಿ ಸರಕಾರದ ನಡುವೆ ಸ್ಥಿರವಾದ ಒಪ್ಪಂದವಿರಬೇಕೆಂದು ಅದು ಇಚ್ಛಿಸುವದು."

"ಹಾವಳಿ ಮಾಡದೆ ತಮ್ಮ ತಮ್ಮ ಕ್ಷೇತ್ರದಲ್ಲಿದ್ದು, ನೀತಿ-ಕಟ್ಟಳೆಗಳ ಮೇರೆಗೆ ನಡೆದರೆ ಒಡಂಬಕೆಯಾದಂತೆಯೇ ಇರುವದು. ಇರಲಿ. ನಿಮ್ಮ ಸರಕಾರದ ಕಟ್ಟಳೆಯೇನಿದೆ?"

"ಮೊದಲನೆಯು ಕಟ್ಟಳೆಯೆಂದರೆ, ನಾವು ನಿಮ್ಮ ಮಿತ್ರರೆಂದು ತಿಳಿದು ನಮ್ಮ ವ್ಯಾಪಾರಿ ಹಡಗುಗಳಲ್ಲಿಯ ಸರಕಿಗೆ ಸುಂಕವಿರಕೂಡದು."

"ಸ್ನೇಹ ಸಂಬಂಧಗಳ ವಿಷಯು ಬೇರೆ, ವ್ಯವಹಾರದ ವಿಷಯು ಬೇರೆ. ನಾವು ಮುಂಬೈ ಬಂದರಕ್ಕೆ ಸರಕು ಕಳಿಸಿದರೆ ನೀವು ಅದರ ಮೇಲೆ ಸುಂಕ ಹೇರುವದಿಲ್ಲವೆ? ಇಷ್ಟು ದಿನಗಳ ವರೆಗೆ ನಾವು ಎಂದಾದರೂ ನಿಮ್ಮಲ್ಲಿ ಸುಂಕ ಬಿಡಬೇಕೆಂದು ಕೇಳಿಕೊಂಡಿರುವೆವೇನು? ನೀವಾದರೂ ನಮ್ಮ ಬಂದರಗಳಲ್ಲಿ ವ್ಯಾಪಾರದ ಸರಕುಗಳಿಗೆ ಸುಂಕವನ್ನು ಬಿಡಹೇಳುವದೇಕೆ?"

"ಸುಂಕದ ಮಾತು ಹೋಗಲಿ ಬಿಡಿ. ಸಮುದ್ರ ಕರಾವಳಿಯಲ್ಲಿ ಸಂಚರಿಸುವ ನಮ್ಮ ಹಡಗುಗಳಿಗೆ ಆಜ್ಞಾಪತ್ರ ಕೇಳುವದೇಕೆ? ಇದು ನಿಮ್ಮ ಬಲುಮೆಯು ಕಟ್ಟಳೆಯಲ್ಲವೆ?"

"ಆಜ್ಞಾಪತ್ರದ ಕಟ್ಟಳೆಯು ಬಲುಮೆಯುದಲ್ಲ; ವ್ಯವಹಾರಕ್ಕೆ ಅನುಸಾರವಾದದ್ದಾಗಿದೆ. ಆಜ್ಞಾಪತ್ರವಿಲ್ಲದೆ ಹೋದರೆ ಸುಂಕ ಕೊಟ್ಟ ಸರಕನ್ನು ಗುರತಿಸುವ ಬಗೆ ಹೇಗೆ? ನಿಮ್ಮ ಒಡೆತನದ ಹಾಗು ಕದ್ದು ತಂದ ಸರಕನ್ನು ಗುರತಿಸುವ ಬಗೆ ಹೇಗೆ? ಆಜ್ಞಾಪತ್ರ ಬೇಡಿದರೆ ತೋರಿಸಬೇಕು. ಬಂದರದ ಇಳಿಯುವ ಸರಕಿಗಾಗಿ ಸುಂಕ ಕೊಡಬೇಕು. ಸಮುದ್ರದಿಂದ ಹೊರಗಿಂದ ಹೊರಗೇ ಹೋಗುವ ಹಡಗದ ಬಗ್ಗೆ ಆಜ್ಞಾಪತ್ರ ಕೇಳಿದರೆ ತೋರಿಸಬೇಕು. ಹಡಗ ನಿಲ್ಲಿಸಲು ಸೂಚಿಸಿದರೆ ನಿಲ್ಲಿಸ

ತ್ತಿರುವದರಿಂದಲೇ ಸಮುದ್ರ ಕರಾವಳಿಯ ಸಮೀಪದಲ್ಲೂ ಸಮುದ್ರದ ಮೇಲೂ ಅಧಿಕಾರ ಪ್ರಸ್ಥಾಪನೆ ಮಾಡಬೇಕಾಗಿದೆ. ಹೀಗೆ ಮಾಡದೆ ಗತ್ಯಂತರವಿಲ್ಲದಾಗಿರುವದು. ಕೆಳಗೆ ಗೋವೆಯನ್ನು ಮೇಲೆ ಮುಂಬಯಿಯನ್ನು ಬಿಟ್ಟು ನಡುವಿನ ಕೊಂಕಣ ಕರಾವಳಿಯೊಳಗಿನ ನಮ್ಮ ಶಿವಛತ್ರಪತಿಗಳ ಒಡೆತನದಲ್ಲಿ ಬಂದಿವೆ. ಛತ್ರಪತಿಗಳು ಸಮುದ್ರ ಕರಾವಳಿಯೊಳಗಿನ ಎಲ್ಲ ಮೊಗಲ ಠಾಣ್ಯಗಳನ್ನು ಗೆದ್ದುಕೊಂಡಿರುವರು. ನಾನು ಅವರ ಪ್ರತಿನಿಧಿಯಾಗಿ ಅವರ ಅಧಿಕಾರ ನಡಯಿಸತೊಡಗಿದ್ದೇನೆ."

"ನಾವು ನಿಮ್ಮ ಅಧಿಕಾರವನ್ನು ಮನ್ನಿಸದಿದ್ದರೆ?"

"ಇಷ್ಟು ಸಹ ನಿಮಗೆ ತಿಳಿಯದಿದ್ದುದು ಆಶ್ಚರ್ಯಕಾರಕವು. ನಮ್ಮ ಕಾರ್ಯಕ್ಷೇತ್ರದಲ್ಲಿ ಕಾಲಿಟ್ಟು, ನಮ್ಮ ಅಧಿಕಾರವನ್ನು ಮನ್ನಿಸದೆ ಹೋದರೆ ಸಂಗ್ರಾಮವು ಉಪಸ್ಥಿತವಾಗುವದು. ಕಾಳಗದಲ್ಲಿ ನೀವು ಗೆದ್ದರೆ ನಿಮ್ಮ ಅಧಿಕಾರವು ನೆಲೆಗೊಳ್ಳುವದು; ನಮ್ಮದೇ ಮೇಲುಗೈಯಾದರೆ ನಮ್ಮ ಅಧಿಕಾರ ಉಳಿಯುವದು. ಇಷ್ಟು ದಿನಗಳ ಹೋರಾಟದಲ್ಲಿ ನೀವು ಎಷ್ಟು ವೇಳೆ ಗೆದ್ದಿರುವಿರಿ, ನಾವು ಎಷ್ಟು ವೇಳೆ ಗೆದ್ದಿರುವೆವು ಎಂಬದನ್ನು ನಿಮಗೆ ತಿಳಿಸಿ ಹೇಳಬೇಕಾಗಿಲ್ಲ. ನಿಮ್ಮ 'ಪರಸಿವೇನ' ಹಡಗದ ಗತಿ ಏನಾಯಿತು, ನಿಮ್ಮ 'ಸಸೆಕ್ಸ' ಹಡಗದ ಗತಿ ಏನಾಯಿತು? 'ಸಸೆಕ್ಸ' ಹಡಗವನ್ನು ಹಿಡಿದು ಒಡಂಬಡಿಕೆಯಾದ ಮೇಲೆ ತಿರುಗಿ ಕೊಟ್ಟೆವು. ಖಾಂದೇರಿ ದ್ವೀಪದ ಕಾಳಗದಲ್ಲಿ ಯಾರಿಗೆ ಜಯವಾಯಿತು? ನಿಮ್ಮ ಆ 'ಚಾರಲಟ್' ಹಡಗವು ಇದುವರೆಗೂ ನಮ್ಮ ಒತ್ತಿನಲ್ಲಿ ಸ್ಥಾನಬದ್ಧವಾಗಿರಿಸಲ್ಪಟ್ಟಿದೆ."

"ಸರಖೇಲರೆ!" ಪಿರಂಗಿ ರಾಯಭಾರಿಯು ಗಾಂಭೀರ್ಯದಿಂದಲೂ ಆತ್ಮೀಯತೆಯಿಂದಲೂ:—"ಇಂದು ನಿಮ್ಮ ನಮ್ಮೊಳಗೆ ಸ್ಪರ್ಧೆಯುಂಟಾಗಿರುವದೆಂಬದನ್ನು ಲಕ್ಷ್ಯದಲ್ಲಿಡಿರಿ. ನಾವು ಸಾವಿರಾರು ಕ್ರೋಶಗಳಿಂದ ಬಂದದ್ದು ತಿರುಗಿ ಹೋಗಲಿಕ್ಕಲ್ಲ. ನಾವು ನಾಲ್ಕು ದೇಶಗಳ ನಾಲ್ಕು ಜಾತಿಯ ಪಿರಂಗಿಗಳು ಪರಸ್ಪರರಲ್ಲಿ ಸ್ಪರ್ಧೆ ಮಾಡುತ್ತಿದ್ದರೂ ಆ ಸ್ಪರ್ಧೆಯು ವ್ಯಾಪಾರದ ಮುಕ್ಕಿಗೆ ಎಂಬದನ್ನು ಲಕ್ಷ್ಯದಲ್ಲಿಡಬೇಕು. ನಿಮ್ಮೊಡನೆ ಕಾಳಗವು ಪ್ರಾದುರ್ಭವಿಸಿದರೆ ನಾವೆಲ್ಲರು ಒಟ್ಟಿಗೆ ಎಂಬ ಮಾತನ್ನಾದರೂ ನೆನಪಿನಲ್ಲಿಡಿರಿ. ಇದೇ ಕಾಲವು ಸ್ಥಿರವಾಗಿ ಉಳಿಯುವದಿಲ್ಲ. ಆದ್ದರಿಂದ ನಮ್ಮೊಡನೆ ಸ್ನೇಹದಿಂದಿರುವ ಬಗ್ಗೆ ಮೊದಲೇ ನಿಮ್ಮನ್ನು ಎಚ್ಚರಗೊಳಿಸುವೆನು."

"ಕಾಲವು ಸ್ಥಿರವಾದದ್ದಲ್ಲವೆಂಬ ಮಾತನ್ನು ನನ್ನಂತೆ ನೀವೂ ನೆನಪಿಡಲಿಕ್ಕೆ ಬೇಕು. ಕಾಲವೆಂದರೆ ದೈವವೆಂದು ಅರ್ಥ ಮಾಡಿದರ ಈಗ ಪಿರಂಗಿಗಳ ಕಾಲವೇ ಮುಗಿಯುತ್ತ ಬಂದಿದ್ದು, ನಮ್ಮ ಕಾಲವು ಇದೀಗ ಪ್ರಾರಂಭವಾಗಿದೆಯೆಂದು ಹೇಳ

ಒಂದು ಬೆಳದಿಂಗಳ ರಾತ್ರಿಯಲ್ಲಿ ಕುಣಕ್ಯಾನು ಸಮುದ್ರ ತೀರದಲ್ಲಿ ಸಂಚರಿಸುತ್ತಿರುವಾಗ ದೂರದಿಂದ ಒಂದು ಹಡಗವು ಬರುತ್ತಿರುವದು ದೃಷ್ಟಿಗೆ ಬಿತ್ತು. ಸ್ವಲ್ಪ ಹೊತ್ತಿನಲ್ಲಿ ಅದು ದಂಡೆಗೆ ಬಂದಿತು. ಆ ಹಡಗವು ದೊಡ್ಡದಿದ್ದುದರಿಂದ ಅದು ತೀರ ದಂಡೆಗೆ ಬರುವಂತಿರಲಿಲ್ಲ. ಆಗ್ಗೆ ಅಂಬಿಗರು ಹಡಗದಲ್ಲಿಯ ಸಣ್ಣದೊಂದು ನೌಕೆಯನ್ನು ನೀರಲ್ಲಿ ಬಿಟ್ಟು ಅದರೊಳಗಿನ ಸರಕುಗಳನ್ನೂ ಮನುಷ್ಯರನ್ನೂ ತುಂಬಿ ದಂಡೆಗೆ ತಂದರು. ತರುವಾಯ ಎಲ್ಲ ಜನರೂ ಆ ಸರಕನ್ನು ಒಂದು ಕಡೆಗೆ ಹಾಕಿ ದುಂಡಗೆ ಕುಳಿತರು. ಕುಣಕ್ಯಾನು ದೂರದಿಂದಲೆ ಎಲ್ಲವನ್ನೂ ನೋಡಿ ಈ ಸಂಗತಿಯಾದರೂ ಏನಿರುವದೆಂಬುದನ್ನು ತಿಳಿದುಕೊಳ್ಳಬೇಕೆಂಬ ಕುತೂಹಲದಿಂದ ತನ್ನ ನಾಯಿಯನ್ನು ಗಿಡಕ್ಕೆ ಕಟ್ಟಿಹಾಕಿ, ಅದು ಬೊಗಳಬಾರದೆಂಬ ಉದ್ದೇಶದಿಂದ ಅದರ ಬಾಯಿಗೆ ತನ್ನ ಹೊರುವ ದೋತರದಿಂದ ಬಿಗಿದು ಆ ಜನಜಂಗುಳಿಯ ಸಮೀಪಕ್ಕೆ ಬಂದನು. ಮೆಲ್ಲನೆ ಅವರೊಳಗೆ ಬೆರೆತು ಎಲ್ಲ ಸಂಗತಿಯನ್ನು ಅರಿಯಬೇಕೆಂಬ ಯೋಚನೆಯು ಅವನಲ್ಲಿ ಹುಟ್ಟಿತು. ಆದರೆ ಅವರಿಗೆ ತನ್ನ ಗುರುತು ಹತ್ತಿದರೆ ಪರಿಣಾಮವು ಒಳಿತಾಗಲಿಕ್ಕಿಲ್ಲೆಂದು ತಿಳಿದು ಆ ಜಂಗುಳಿಯ ದೂರದಿಂದಲೇ ನೌಕೆಯ ಕಡೆಗೆ ತಿರುಗಿದನು. ನೌಕೆಯನ್ನು ಬಿಟ್ಟ ಸ್ಥಳವು ಆ ಜನಜಂಗುಳಿ ಕುಳಿತ ಸ್ಥಳಕ್ಕೆ ಸಮೀಪವಾಗಿತ್ತು, ಅಲ್ಲಿ ನೌಕೆಯ ನೆರೆಗೆ ನಿಂತು ಅವನು ಆ ಜನರನ್ನು ದಿಟ್ಟಿಸಿ ನೋಡಹತ್ತಿದನು. ಆ ಜನರಲ್ಲಿ ಭಾಗೂಜಿ ನಾಯಿಕನೂ ಥಾಕಲ್ಯಾನೂ ಒಬ್ಬ ಫಿರಂಗಿಯೂ ಇದ್ದದ್ದು ನೋಡಿ ಅವನಿಗೆ ವಿಸ್ಮಯವಾಯಿತು. ಫಿರಂಗಿಯು ಸಮುದ್ರಗಳ್ಳತನದಲ್ಲಿ ಆ ತಂದೆ-ಮಕ್ಕಳು ಪಾಲುಗಾರರಿರುವರೆಂಬುದು ಮನವರಿಕೆ ಯಾದಕೂಡಲೆ ಅವನು ಆ ನೌಕೆಯಲ್ಲಿ ಕುಳಿತು ಹುಟ್ಟು ಹಾಕುತ್ತ ದೊಡ್ಡ ಹಡಗಕ್ಕೆ ಬಂದನು. ಅವನು ಆ ಹಡಗವನ್ನೇರಿ, ಹಗ್ಗದಿಂದ ನೌಕೆಯನ್ನು ತಾನು ಕುಳಿತ ಹಡಗಕ್ಕೆ ಕಟ್ಟಿ ಸೀಡನ್ನೇರಿಸಿದನು. ಗಾಳಿಯು ಅನುಕೂಲವಿದ್ದುದರಿಂದ ಆ ಹಡಗವು ಹುಟ್ಟು ಹಾಕದೆ ವಿಜಯದುರ್ಗ ಬಂದರದ ಕಡೆಗೆ ರಭಸದಿಂದ ಸಾಗಿತು. ನೌಕೆಯೂ ಹಡಗವೂ ಸಮುದ್ರ ದಂಡೆಯನ್ನು ಬಿಟ್ಟು ದೂರ ಹೋದಮೇಲೆ ಆ ಜನಜಂಗುಳಿಯ ದೃಷ್ಟಿಯು ಸಮುದ್ರದ ಕಡೆಗೆ ಹೊರಳಿತು. ಅಲ್ಲಿ ಏನೂ ಇಲ್ಲದ್ದನ್ನು ನೋಡಿ ಅವರಿಗೆ ಭಯ ವಿಸ್ಮಯಗಳುಂಟಾದವು. ಅವರು ಸುಲಿಗೆಯ ಒಡವೆಗಳನ್ನು ವ್ಯವಸ್ಥೆಗೊಳಿಸಿ ಮುರಡಿ-ಕೊಳ್ಳಗಳನ್ನು ಶೋಧಿಸತೊಡಗಿದರು. ಅಲ್ಲಿ ಒಂದು ಗಿಡಕ್ಕೆ ಕುಣಕ್ಯಾನ ನಾಯಿಯು ಕಟ್ಟಲ್ಪಟ್ಟದ್ದು ಭಾಗೂಜಿಯ ಹಾಗು ಥಾಕಲ್ಯಾನ ದೃಷ್ಟಿಗೆ ಬಿತ್ತು, ಇಂತಹ ರಾತ್ರಿಯಲ್ಲಿ ನೌಕೆ-ಹಡಗಗಳನ್ನು ದೋಚಿಕೊಂಡು ಹೋದವನು ಕುಣಕ್ಯಾನೇ ಎಂಬ ಬಗ್ಗೆ

ಅವರಿಗೆ ಸಂಶಯವು ಉಳಿಯಲಿಲ್ಲ. ಏನಾದರೂ ಹಂಚಿಕೆ ಮಾಡಿ ತಾವು ಕುಣಕ್ಯಾನನ್ನೇ ಅಪರಾಧಿಯನ್ನಾಗಿ ಮಾಡಬೇಕೆಂಬ ಒಗ್ಗೆ ಅವರು ಪರಿಪರಿಯಿಂದ ಲೆಕ್ಕಹಾಕತೊಡಗಿದರು.

ಇತ್ತ ಕುಣಕ್ಯಾನು ವಿಜಯದುರ್ಗ ಬಂದರಕ್ಕೆ ಬಂದು ನೌಕೆಯನ್ನೂ ಹಡಗವನ್ನೂ ಅಲ್ಲಿಯ ಕಾವಲುಗಾರನ ವಶಕ್ಕೆ ಕೊಟ್ಟು, ಘಟಿಸಿದ ಎಲ್ಲ ಸಂಗತಿಯನ್ನು ಅವನಿಗೆ ತಿಳಿಸಿದನು. ಭಾಗೂಜಿಧಾ-ಕಲ್ಯಾನಂತಹ ಜನರು ಸ್ವಾಮಿದ್ರೋಹ ಮಾಡತೊಡಗಿದ್ದನ್ನು ನೋಡಿ ಅಲ್ಲಿಯ ನಾಯಕನಿಗೆ ಬಹಳೇ ವಿಸ್ಮಯವಾಯಿತು. ಅವನು ಆ ಹಡಗದಲ್ಲಿ ಉಳಿದ ಅಲ್ಪ ಸರಕನ್ನೂ ಭಾಗೂಜಿಯ ಹಾಗು ಪಿರಂಗಿಯ ಕೆಲವು ಉಡುಗೆ-ತೊಡಿಗೆಗಳನ್ನೂ ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಭದ್ರವಾಗಿರಿಸಿದನು. ಅನಂತರದಲ್ಲಿ ಕುಣಕ್ಯಾನಿಗೆ ತನ್ನ ಝುಪ್ರಾ ನಾಯಿಯ ನೆನಪಾಯಿತು. ಕೆಲಸದ ಗೊಂದಲದಲ್ಲಿ ನಾಯಿಯನ್ನು ಮರೆತೆನಲ್ಲ, ಎಂದು ಪಶ್ಚಾತ್ತಾಪಬಡತೊಡಗಿದನು. ರಾತ್ರಿಯಲ್ಲಿಯೇ ಅಲ್ಲಿಗೆ ಹೋಗಿ ನಾಯಿಯನ್ನು ಬಿಚ್ಚಿಕೊಂಡು ಬರಬೇಕೆಂಬ ಮನಸ್ಸೂ ಅವನಿಗಾಯಿತು. ನೌಕೆಗಳನ್ನು ಕಳೆದುಕೊಂಡ ಜನರು ಅಲ್ಲಿ ತಿರುಗಾಡುವ ಸಂಭವವಿದ್ದುದರಿಂದ ತಾನು ಅಲ್ಲಿ ಹೋದರೆ ಅಪಾಯವುಂಟೆಂಬ ಭಯದಿಂದ ಅವನು ನಿರುಪಾಯನಾದನು. ಮಾರ್ನೆಯ ದಿನ ಸೂರ್ಯೋದಯಕ್ಕೆ ಮುಂಚಿತವಾಗಿಯೇ ಅಲ್ಲಿಗೆ ಹೋಗಿ ನಾಯಿಯನ್ನು ತಂದರಾಯಿತೆಂದು ನಿರ್ಧರಿಸಿ ಅವನು ಕೋಟೆಯನ್ನು ಪ್ರವೇಶಿಸಿದನು. ಬೆಳಗಾದ ಕೂಡಲೆ ರಾತ್ರಿಯ ಎಲ್ಲ ಸಂಗತಿಯನ್ನು ಸರಖೇಲನಿಗೆ ತಿಳಿಸಿಯೇ ನಾಯಿಯನ್ನು ತರಲು ಹೋಗಬೇಕೆಂದು ನಿರ್ಧರಿಸಿ ಮಲಗಿದನು. ಮನಸ್ಸು ಅನೇಕ ವಿಧವಾದ ಗೊಂದಲದಲ್ಲಿ ಬಿದ್ದುದರಿಂದ ಅವನಿಗೆ ಆ ರಾತ್ರಿ ನಿದ್ದೆಹತ್ತಲಿಲ್ಲ. ಬೆಳಗಾದ ಕೂಡಲೆ ಅವನು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಅರಮನೆಗೆ ತೆರಳಿದನು.

---

( ೬ )

ಸರಖೇಲ ಕಾನ್ಹೋಜಿರಾಯನು ತನ್ನ ಮಂತ್ರಣಾಗಾರದಲ್ಲಿ ಕುಳಿತಿದ್ದನು. ಸಮುದ್ರ ತೀರದಲ್ಲಿ ಪಿರಂಗಿ ಹಡಗುಗಳ್ಳರ ಉಪಟಳವು ಹೆಚ್ಚುತ್ತಿರುವದರಿಂದಲೂ ಕೆಲವು ಏತದ್ದೇಶೀಯರು ಲಂಚದಾಶೆಯಿಂದ ಅವರಿಗೆ ಅನುಕೂಲರಾಗಿರುವದರಿಂದಲೂ ಬಂದರ ಹಾಗು ಕರಾವಳಿಗಳ ರಕ್ಷಣೆಯ ಕಾರ್ಯವನ್ನು ಬಹಳೇ ಜಾಗ್ರತೆಯಿಂದಿರಿಸಬೇಕೆಂಬ ಆಶಯದ ಪತ್ರವು ಕ್ಷತ್ರಿಯಕುಲಾವತಂಸ ಶ್ರೀ ಶಿವಾಜಿಮಹಾರಾಜರಿಂದ ಮುಂಚಿನ ರಾತ್ರಿಯಲ್ಲಿ ಅವನಿಗೆ ತಲುಪಿದ್ದರಿಂದ ಈ ವಿಷಯವಾಗಿ

ವಿಚಾರವಿನಿಮಯ ಮಾಡಬೇಕೆಂಬ ಮನಸ್ಸಿನಿಂದ ಅವನು ಮಂತ್ರಶಾಗಾರದಲ್ಲಿ ಕುಳಿತಿದ್ದನು. ಅವನ ದೂತರು ಭಾಗೂಜೀ ನಾಯಕನನ್ನು ಕರೆದುಕೊಂಡು ಬರುವದಕ್ಕಾಗಿ ಹೋಗಿದ್ದರು. ಅಷ್ಟರಲ್ಲಿ ಕುಣಕ್ಯಾನು ಅಲ್ಲಿಗೆ ಬಂದು ಸರಖೇಲ ನಿಗೆ ವಂದನೆಗಳನ್ನರ್ಪಿಸಿ ನಿಂತುಕೊಂಡನು ಆಗ ಕಾನ್ಹೋಜಿರಾಯನು ಕುಣಕ್ಯಾ ನಿಗೆ: -“ಕುಣಕ್ಯಾ, ಮತ್ತೇನು ವಿಶೇಷ?” ಎಂದು ಪ್ರಶ್ನೆ ಮಾಡಿದನು.

ಕುಣಕ್ಯಾನು ಮುಂಚಿನ ರಾತ್ರಿ ನಡೆದ ಎಲ್ಲ ಸಂಗತಿ ತಿಳಿಸಿದನು. ಫಿರಂಗಿಗಳ ಸುಲಿಗೆಗಾರಿಕೆಯ ಕೆಲಸದಲ್ಲಿ ಭಾಗೂಜಿಯು ಹಾಗು ಫಾಕಲ್ಯಾನ ಅಂಗವಿರುವದನ್ನು ಕೇಳಿ ಅವನಿಗೆ ಸಂತಾಪವಾಯಿತು. ಕುಣಕ್ಯಾನು ನೌಕೆಯಲ್ಲಿದ್ದ ಸರಕುಗಳನ್ನು ಹೊರಿಸಿಕೊಂಡೇ ಮಂತ್ರಶಾಗಾರಕ್ಕೆ ಬಂದಿದ್ದನು ಆ ಸರಕುಗಳಲ್ಲಿ ಫಿರಂಗಿಯ ಟೊಪ್ಪಿಗೆ, ಭಾಗೂಜಿಯ ಕಂಠಿಕವಾನಿ ಅಂಗಿ, ಫಾಕಲ್ಯಾನ ಮುಂಡಾಸ ಮೊದಲಾದ ಒಡವೆಗಳು ದೊರೆತವು. ಕಾನ್ಹೋಜಿರಾಯನು ಆ ಸರಕುಗಳನ್ನೆಲ್ಲ ಮಂತ್ರಶಾಗಾರದ ಕೋಣೆಯಲ್ಲಿರಿಸಿ, ಬೀಗ ಹಾಕಿಸಿ ಕುಣಕ್ಯಾನಿಗೆ: —“ನೀನು ಹೊರಡು. ಮತ್ತೆ ಬೇಗನೆ ಕರೆಯಿಸುವೆನು. ದೂರ ಹೋಗಬೇಡ, ಇಲ್ಲಿ ಎಲ್ಲಿಯಾದರೂ ಬಳಿಯಲ್ಲಿಯೇ ಮರೆಯಾಗಿರು. ಭಾಗೂಜಿಯನ್ನು ಕರೆಯಲು ದೂತನು ಹೋಗಿರುವನು. ಇಷ್ಟರಲ್ಲಿಯೇ ಅವನು ಬರುವದಾಗಿದೆ”

“ಸರಖೇಲರೇ, ಈ ಗೊಂದಲದಲ್ಲಿ ನನ್ನ ನಾಯಿಯನ್ನು ಅಲ್ಲಿಯೇ ಒಂದು ಗಿಡಕ್ಕೆ ಕಟ್ಟಿಹಾಕಿಬಂದಿದ್ದೇನೆ. ಅದು ಬೊಗಳಬಾರದೆಂದು ಅದರ ಬಾಯಿಯನ್ನು ವಸ್ತ್ರದಿಂದ ಬಿಗಿದಿರುವೆನು. ಅದರ ಅವಸ್ಥೆಯೇನಾಯಿತೋ ಎಂದು ಜೀವಚಡಪಡಿಸುವದು. ಒಂದು ವೇಳೆ ಅದು ನೌಕೆ ಕಳೆದುಕೊಂಡ ಭಾಗೂಜಿ ಮೊದಲಾದವರ ದೃಷ್ಟಿಗೆ ಬಿದ್ದರೆ ಅದರ ಆಧಾರದಿಂದ ನನ್ನ ಬಗ್ಗೆ ಏನಾದರೂ ವಿಕಲ್ಪ ಹುಟ್ಟಿಸುವ ಸಂಭವವೂ ಇದೆ.”

“ನೀನು ನಾಯಿಯ ಯೋಚನೆ ಬಿಡು. ಅದನ್ನು ಹಿಡಿದು ತರಲು ದೂತನನ್ನು ಕಳುಹಿಸುವೆನು. ಭಾಗೂಜಿಯು ಬೇಕಾದ ಹಾಗೆ ವಿಕಲ್ಪ ಹುಟ್ಟಿಸಲು ಪ್ರಯತ್ನಿಸಿದರೂ ನೀನು ಅಂಜುವ ಕಾರಣವಿಲ್ಲ. ನೀನು ನಿಶ್ಚಿಂತನಾಗಿ ತೆರಳು.”

ಕುಣಕ್ಯಾನು ಹೊರಗೆ ಹೋಗಿ ಕೆಲವು ನಿಮಿಷಗಳಾಗುವಷ್ಟರಲ್ಲಿ ಭಾಗೂಜೀ ಫಾಕಲ್ಯಾರಿಬ್ಬರೂ ಕುಣಕ್ಯಾನ ನಾಯಿಯನ್ನು ಹಿಡಿದುಕೊಂಡು ಬಂದರು. ಅವರು ಸರಖೇಲನಿಗೆ ನಮಿಸಿ ನಿಂತುಕೊಂಡರು. ಆಗ ಸರಖೇಲನು:—“ಭಾಗೂಜಿ, ನಾನು ನಿನ್ನೊಬ್ಬನನ್ನೇ ಕರೆಯಿಸಿದ್ದೆನು. ಶಿವಛತ್ರಪತಿಗಳ ಪತ್ರಬಂದುದರಿಂದ ಆ ಬಗ್ಗೆ ಮಾತಾಡಬೇಕಾಗಿತ್ತು. ಇಲ್ಲಿ ಈ ಫಾಕಲ್ಯಾನೇಕೆ ಹಾಗು ಈ ನಾಯಿಯೇಕೆ?”

"ಸರಖೇಲರೇ!" ಭಾಗೂಜಿಯು ಸುಳ್ಳು ನಗೆ ತಂದು ಹುಚ್ಚು ಆಕಾರದಿಂದ: "ಒಂದು ರಾಜಕಾರಣಕ್ಕಾಗಿ ಈ ನಾಯಿ ಬೇಕಾಯಿತು. ಇದು ಕುಣಕ್ಯಾನ ನಾಯಿ. ಆ ರಾಜಕಾರಣದ ಸಾಕ್ಷಿಗಾಗಿ ಈ ಥಾಕಲ್ಯಾನೂ ಬಂದಿರುವನು. ನಾಯಿಯನ್ನೂ ಥಾಕಲ್ಯಾನನ್ನೂ ಕಳುಹಿಸಿಕೊಡುವೆನು. ಹಿಂದಿನಿಂದ ಈ ಸಂಗತಿಯ ಬಗ್ಗೆ ಹೇಳುವೆನು. ಮೊದಲು ಛತ್ರಪತಿಗಳ ರಾಜಕಾರಣವು ನಡೆಯಲಿ."

"ಛೇ! ಛತ್ರಪತಿಗಳ ರಾಜಕಾರಣವೇನು ಅಷ್ಟು ಮಹತ್ವದ್ದು? ಮೊದಲು ನಿನ್ನ ರಾಜಕಾರಣವೇನು ಹೇಳು."

"ಛತ್ರಪತಿಗಳು ಏನು ತಿಳಿಸಿದ್ದಾರೆ ಸರಖೇಲರೇ? ಶಿವಪ್ರಭುಗಳ ಮೇಲೆ ನನ್ನ ಭಕ್ತಿ ಹೆಚ್ಚು. ಅವರ ರಾಜಕಾರಣವೇನೆಂಬದನ್ನು ಮೊದಲು ತಿಳಿಯಬೇಕೆಂದು ಮನಸ್ಸು ಆತುರಪಡುವದು."

"ಅಂಥದೇನೂ ಮಹತ್ವದ ವಿಷಯವಿಲ್ಲ ಭಾಗೂಜೀ. ಸಮುದ್ರದಲ್ಲಿ ಫಿರಂಗಿಗಳು ಸುಲಿಗೆಗಾರಿಕೆ ನಡೆಯಿಸುವರಷ್ಟೆ? ಆ ಜನರಿಗೆ ನಮ್ಮ ಜನರು ಅನುಕೂಲರಾಗಿರುವ ಸಂಗತಿ ಪ್ರಭುಗಳಿಗೆ ತಿಳಿದಿದೆ. ಈ ವಿಷಯವಾಗಿ ಹೆಚ್ಚು ದಕ್ಷತೆ ವಹಿಸಬೇಕೆಂದು ಅವರು ತಿಳಿಸಿರುವರು. ಛತ್ರಪತಿಗಳ ಆಳಿಕೆಯಲ್ಲಿ ಕೋಟೆ-ಕೊತ್ತಳಗಳಿಗೆ ಹಾಗೂ ನೌಕೆ-ನೀರುಗಳಿಗೆ ಕಿವಿಯುಂಟಾಗಿವೆ. ಛತ್ರಪತಿಗಳ ಗುಪ್ತಚಾರರ ಜಾಳಿಗೆಯು ಸ್ವರಾಜ್ಯದ ತುಂಬ ಪಸರಿಸಿದೆ. ನಾವು ಈಗ ಮಾತಾಡುತ್ತಿರುವದು ಸಹ ಅವರಿಗೆ ನಾಳಿಗೇ ತಿಳಿಯುವದು. ಅಂತೆಯೇ ಅವರು ಇಂತಹ ಪ್ರತಿಕೂಲ ಪರಿಸ್ಥಿತಿಯಲ್ಲೂ ಸ್ವರಾಜ್ಯವನ್ನು ಸ್ಥಾಪಿಸಿ ದಿಗಂತ ಖ್ಯಾತಿಪಡೆದಿರುವರು. ಅದಿರಲಿ. ನಿನ್ನ ರಾಜಕಾರಣವೇನು?"

"ಈ ವಿಷಯಕ್ಕೆ ಸಂಬಂಧಿಸಿದ್ದೇ ನನ್ನ ರಾಜಕಾರಣ. ಕುಣಕ್ಯಾನು ಫಿರಂಗಿಗಳಿಗೆ ಅನುಕೂಲನಿರುವನೆಂಬ ಸಂಶಯವು ನನಗೆ ಬಹಳ ದಿನಗಳಿಂದ ಇತ್ತು. ಪ್ರತ್ಯಕ್ಷ ಸಾಕ್ಷಿಗಳಿಲ್ಲದೆ ಯಾವುದನ್ನೂ ಆಡಲಿಕ್ಕೆ ಬರುವದಿಲ್ಲ ನೋಡಿರಿ. ಅದಕ್ಕಾಗಿ ನನ್ನ ಸಂಶಯಗಳನ್ನು ನುಂಗಿಕೊಂಡು ಕುಳಿತಿದ್ದೆನು. ಸುಮ್ಮನೆ ಕುಳಿತುಕೊಂಡಿರಲಿಲ್ಲ. ರಾತ್ರಿ ಹಗಲು ಅವನ ಚಲನವಲನ ನಿರೀಕ್ಷಿಸುತ್ತ ಕುಳಿತಿದ್ದೆನು. ನಿನ್ನೆ ರಾತ್ರಿ ಬೆಳದಿಂಗಳಲ್ಲಿ ಸಮುದ್ರ ತೀರದಲ್ಲಿ ತಿರುಗಾಡಲಿಕ್ಕೆ ನಾನೂ ಥಾಕಲ್ಯಾನೂ ಹೋಗಿದ್ದೆವು. ಸುಮ್ಮನೆ ವಿಶ್ರಾಂತಿಗಾಗಿ ನಾವು ಹೋಗಿದ್ದಿಲ್ಲ. ಕುಣಕ್ಯಾನ ಕೃತ್ಯಗಳನ್ನು ನಿರೀಕ್ಷಣೆ ಮಾಡಬೇಕೆಂಬ ಉದ್ದೇಶದಿಂದಲೇ ಹೋಗಿದ್ದೆವು. ನಾವು ಸಂಶಯಪಟ್ಟಂತೆಯೇ ಸಂಗತಿ ಘಟಿಸಿತು. ಕುಣಕ್ಯಾನು ಕೆಲವು ಜನರೊಡನೆ ಸಮುದ್ರ ತೀರದಲ್ಲಿ ಕುಳಿತಿದ್ದನು; ಅವನ ಎದುರಿಗೆ ಕೆಲವು ಸರಕುಗಳಿದ್ದವು. ಅವನನ್ನು

ಹಿಡಿಯಬೇಕೆಂಬ ಯೋಚನೆ ನನ್ನಲ್ಲಿ ಹುಟ್ಟಿತು; ಆದರೆ ಅವನ ಸಂಗಡಿಗರು ಬಹಳ ಜನರಿದ್ದುದರಿಂದ ನಾನು ಆಗ ಅಂಜಿದೆನು. ಆದರೆ ಅವನನ್ನು ಹಾಗೆಯೇ ಬಿಡುವದು ನಮ್ಮಿಂದ ಆಗದೆ ಹೋಯಿತು. ಧೈರ್ಯ ಮಾಡಿ ನಾನು ಥಾಕಲ್ಯಾನೊಡನೆ ಮುಂದೆ ಸಾಗಿದೆನು. ನಮ್ಮನ್ನು ಅವನು ಚಂದ್ರಪ್ರಕಾಶದಲ್ಲಿ ಕಂಡನು. ಕೂಡಲೆ ಅವನು ಅಲ್ಲಿಯ ಕೆಲವು ವಸ್ತುಗಳನ್ನು ತೆಗೆದುಕೊಂಡು ನೌಕೆಯಲ್ಲಿ ಕುಳಿತನು. ಅವನ ಸಂಗಡಿಗರು ಉಳಿದ ವಸ್ತುಗಳನ್ನು ತಗೆದುಕೊಂಡು ಓಡಿಹೋದರು. ನಾನು ಸಾಕ್ಷಿಗಾಗಿ ಇರಲೆಂದು ಅವನ ನಾಯಿಯನ್ನು ತೆಗೆದುಕೊಂಡು ತಮ್ಮ ಕಡೆಗೆ ಬಂದೆನು. ಸ್ವರಾಜ್ಯದಲ್ಲಿ ಇಂತಹ ಘಾತುಕ ಜನರು ಇದ್ದರೆ ಛತ್ರಪತಿಗಳು ತಮ್ಮ ನೂರು ಜನ್ಮಗಳ ಪುಣ್ಯ ಎರೆದು ನೆಲೆಗೊಳಿಸಿದ ಸ್ವರಾಜ್ಯಕ್ಕೆ ಹೇಗೆ ಸ್ಥೈರ್ಯವುಂಟಾಗಬೇಕು ಧನಿಯರೇ? ಕುಣಕ್ಯಾನು ಶೀಲವಂತ ಮನುಷ್ಯನೆಂದು ನಾನೂ ನೀವೂ ಭಾವಿಸಿದ್ದೆವು. ನಮ್ಮ ಭಾವನೆಯೇ ತಪ್ಪಾಗಿ ಹೋಯಿತು. ಅವನು ಅತ್ಯಂತ ಘಾತುಕ-ರಾಜದ್ರೋಹಿ!"

"ಭಾಗೂಜಿ, ನೀನು ಹೇಳುತ್ತಿರುವ ಮಾತಿನಲ್ಲಿ ವಿಶ್ವಾಸವಿಡಲು ಮಾರ್ಗವಿಲ್ಲ. ಪಿರಂಗಿಗಳ ಸುಲಿಗೆಗಾರಿಕೆಯಲ್ಲಿ ನಿನ್ನ ಅಂಗವಿರುವದೆಂಬ ಬಗ್ಗೆ ನನ್ನ ನಂಬಿಕೆಯಾಗಿದೆ. ಈ ಕೆಲಸವನ್ನು ನೀನು ಬಹಳ ದಿನಗಳಿಂದ ಮಾಡುತ್ತ ಬಂದಿರುವೆಯೆಂದೂ ನಾನು ನಿನ್ನನ್ನು ಆರೋಪಿಸ ಬಲ್ಲೆ. ಬಂದರವಿಲ್ಲದ ಸ್ಥಳದಲ್ಲಿ ಹಡಗ ತಂದು ಸುಲಿಗೆಯ ಪದಾರ್ಥಗಳನ್ನು ಹಂಚಿಕೊಳ್ಳುವ ರೂಢಿಯು ಮೊದಲಿನಿಂದಲೂ ನಿನಗ್ನೆಇದ್ದಂತೆ ತೋರುವದು" ಎಂದಂದು, ಅವನು ಕುಣಕ್ಯಾನನ್ನು ಕರೆಯಲು ಚಾರನನ್ನು ಕಳುಹಿಸಿದನು. ಕೆಲವು ನಿಮಿಷಗಳಲ್ಲಿ ಕುಣಕ್ಯಾನು ಅಲ್ಲಿಗೆಬಂದನು."

"ಸರಖೇಲನ ಮಾತು ಕೇಳಿ ಭಾಗೂಜಿಯು ಗಾಬರಿಗೊಂಡನು. ತನ್ನ ದುಷ್ಕೃತ್ಯದ ಗಂಧವಾರ್ತೆಯು ಸರಖೇಲನಿಗೆ ತಲುಪಿರುವದೆಂದು ಅವನು ಬಗೆದನು. ಈ ವೇಳೆಯಲ್ಲಿ ಅಧೈರ್ಯದಿಂದ ನಡೆದರೆ ಕೆಲಸ ಕೆಡುವದೆಂಹು ಬಗೆದು ಅವನು: "ಸರಖೇಲರೇ, ಇಂತಹ ಮಾತುಗಳಿಂದ ಸ್ವಾಮಿನಿಷ್ಠ ಸೇವಕನ ಎದೆಗೆ ಬರೆಕೊಟ್ಟಂತಾಗುವದು. ಒಡೆಯರಾದ ನೀವು ದೋಷಕೊಡುತ್ತಿರುವದರಿಂದ ಉಪಾಯವಿಲ್ಲ."

"ದೇಶದ್ರೋಹಿ! ಸ್ವಜನದ್ರೋಹಿ! ಸ್ವಾಮಿದ್ರೋಹಿ! ಹೆಚ್ಚು ಮಾತಾಡಕೂಡದು" ಎಂದು ಸರಖೇಲನು ಗದ್ದರಿಸಿದನು.

ಕುಣಕ್ಯಾನು ಬಂದ ಕೂಡಲೆ ಅವನ ನಾಯಿಯು ಥಾಕಲ್ಯಾನ ಕೈಯಿಂದ ಕೊಸರಿಕೊಂಡು ಕುಣಕ್ಯಾನ ಬಳಿಗೆ ಹೋಯಿತು. ಅದನ್ನು ನೋಡಿ ಸರಖೇಲನು:

"ನಾಯಿಯಲ್ಲಿದ್ದ ಸ್ವಾಮಿನಿಷ್ಠೆಯ ಕೆಲವಂಶವು ಕೂಡ ನಿಮ್ಮಲ್ಲಿದ್ದರೆ ಎಷ್ಟೋ ರಾಷ್ಟ್ರಹಿತ ಕಾರ್ಯಗಳು ಘಟಿಸುತ್ತಿದ್ದವು" ಎಂದು ನುಡಿದು, ಅವನು ಕುಣಕ್ಯಾನಿಗೆ ರಾತ್ರಿ ಘಟಿಸಿದ ಸಂಗತಿಯ ಬಗ್ಗೆ ವಿಚಾರಿಸಿದನು. ಕುಣಕ್ಯಾನು ಎಲ್ಲ ಸಂಗತಿ ತಿಳಿಸಿ, ರಾತ್ರಿಯ ಸುಲಿಗೆಯ ಪಾಲಿನಲ್ಲಿ ಇಂತಿಂತಹ ವಸ್ತುಗಳಿದ್ದವೆಂದೂ ಆಜ್ಞೆಯಾದರೆ ಅವುಗಳನ್ನು ಭಾಗೂಜಿಯ ಮನೆಯಲ್ಲಿ ತೋರಿಸಿಕೊಡುವೆನೆಂದೂ ಹೇಳಿದನು. ಸ್ವಾಮಿದ್ರೋಹಿಗಳು ನೌಕೆಯನ್ನು ತೆಗೆದುಕೊಂಡು ಹೋಗಿ ನಡು ಸಮುದ್ರದಲ್ಲಿ ಫಿರಂಗಿಗಳ ಹಡಗವನ್ನು ಕೂಡಿಕೊಂಡು ಸುಲಿಗೆಗಾರಿಕೆಯ ಉಪ ಕ್ರಮ ಮಾಡುತ್ತಿರುವರೆಂಬುದನ್ನು ತಿಳಿಸಿ, ಸಣ್ಣ ನೌಕೆಯಲ್ಲಿ ಭಾಗೂಜಿಯ ಅಂಗಿಯೂ ಧಾಕಲ್ಯಾನ ಮುಂಡಾಸವೂ, ದೊಡ್ಡ ನೌಕೆಯಲ್ಲಿ ಫಿರಂಗಿಯ ಟೊಪ್ಪಿಗೆಯೂ ಇದ್ದ ಸಂಗತಿ ತಿಳಿಸಿದನು. ಅನಂತರ ಸರಖೇಲನು ಎಲ್ಲ ವಸ್ತುಗಳನ್ನು ಹೊರಗೆ ತರಿಸಿ—"ಭಾಗೂಜಿ, ನೀನು ನಿರಪರಾಧಿಯೆಂದು ಸಾರುತ್ತಿರುವೆ. ಈ ನಿಮ್ಮ ವಸ್ತುಗಳು ನೌಕೆಯಲ್ಲಿ ಹೇಗೆ ಉಳಿದವು?"

"ಸರಖೇಲರೇ, ವಿಚಿತ್ರವು! ವಿಚಿತ್ರವು! ಏನೋ ಗೂಢ ಕಾರಸ್ಥಾನವು ನನ್ನ ವಿರುದ್ಧವಾಗಿ ನಡೆದಿದೆ. ಈ ಸಂಗತಿಯನ್ನು ನಿರೀಕ್ಷಿಸಿದರೆ ಕುಣಕ್ಯಾನು ಹೇಳಿದ ಹಾಗೆ ವಸ್ತುಗಳು ನನ್ನ ಮನೆಯಲ್ಲಿ ಹೊರಡಬಹುದು! ನನ್ನ ಏಳಿಗೆಯನ್ನೂ ತಮ್ಮ ಪ್ರೇಮವು ನನ್ನ ಮೇಲಿರುವದನ್ನೂ ನೋಡಿ ಸಹಿಸಲಾರದೆ ಯಾರೋ ದುಷ್ಟರು ಈ ಕಾರಸ್ಥಾನ ರಚಿಸಿದ್ದಾರೆ. ಕುಣಕ್ಯಾನು ಆ ಕಾರಸ್ಥಾನದಲ್ಲಿ ಭಾಗ ವಹಿಸಿದ್ದಾನೆ. ಇವನು ಉಂಡಮನೆಯ ಗಳ ಎಣಿಸುವನೆಂಬದಕ್ಕೆ ಏನೂ ಸಂದೇಹವಿಲ್ಲ. ನನ್ನ ಮೇಲೆ ಹೀಗೆ ಕಾರಸ್ಥಾನ ಮಾಡಬಹುದೆ? ಕಲಿ ಕೌತುಕ! ಉಪಾಯವಿಲ್ಲ!"

"ಭಾಗೂಜಿ! ನೀನು ಕುಣಕ್ಯಾನ ಮೇಲೆ ಆರೋಪ ಹೊರಿಸಲಿಕ್ಕೆ ಮಾಡಿದ ಪ್ರಯತ್ನಗಳು ವ್ಯರ್ಥವಾದವುಗಳಾಗಿವೆ. ವಸ್ತುಸ್ಥಿತಿ ನನಗೆ ತಿಳಿದಿದೆ. ನಿನಗೆ ಇಂ-ದೊಂದು ದಿನ ಅವಧಿ ಕೊಡುವೆನು. ಅಪರಾಧವನ್ನೊಪ್ಪಿ ಎಲ್ಲ ನಿಜಸ್ಥಿತಿ ತಿಳಿಸದಿದ್ದರೆ ತಂದೆಮಕ್ಕಳಿಬ್ಬರನ್ನೂ ಬುರುಜಿನ ಮೇಲಿಂದ ತಳ್ಳಿಸಿಬಿಡುವೆನು" ಎಂದು ಗರ್ಜಿಸಿ ಹೇಳಿ, ಸರಖೇಲನು ಶಾಂತನಾಗಿ ದೂತನನ್ನು ಕುರಿತು—"ಭಾಗೂಜಿಯ ಮನೆಯ ಎಲ್ಲ ಪದಾರ್ಥಗಳನ್ನು ವಶಪಡಿಸಿಕೊಂಡು ತೆಗೆದುಕೊಂಡು ಬಾ" ಎಂದು ಹೇಳಿದನು.

ತರುವಾಯ ಭಾಗೂಜಿ-ಧಾಕಲ್ಯಾರು ಸ್ಥಾನಬದ್ಧರಾಗಿಡಲ್ಪಟ್ಟರು. ಭಾಗೂಜಿಯ ಮನೆಯ ಶೋಧನೆಯಾಗಿ ಎಲ್ಲ ಹುಳುಕೂ ಬೈಲಿಗೆ ಬಿತ್ತು. ಕುಣಕ್ಯಾನು ಸರಖೇಲನ ಹಸ್ತಕನಾಗಿ ರಾಜಕಾರಣದಲ್ಲಿ ಒಳ್ಳೆಯ ಮುಂದಾಳುವಾದನು. ಅವನಿಂದ ಛತ್ರಪತಿಯ ಸ್ವರಾಜ್ಯದ ಕಾರ್ಯಗಳು ಬಹುಮಟ್ಟಿಗೆ ನೆರವೇರತೊಡಗಿದವು.

# ಅವತಾರ ಸಮಾಪ್ತಿ.

( ೧ )

ಅಮಾವಾಸ್ಯೆಯ ರಾತ್ರಿ. ಸಮುದ್ರವು ಶಾಂತವಿತ್ತು ಆಕಾಶವು ನಿರಭ್ರವಿದ್ದುದರಿಂದ ನಕ್ಷತ್ರಪ್ರಕಾಶವು ಮಸಕಾದ ಬೆಳದಿಂಗಳಂತೆ ಬಿದ್ದಿತ್ತು, ನೌಕೆಗಳು ತಮ್ಮಿಂದ ತಾವೇ ಸಾಗುವಷ್ಟು ಗಾಳಿಯು ಸಮುದ್ರದಲ್ಲಿ ಬೀಸತೊಡಗಿತ್ತು. ಕುಣಕ್ಯಾನೂ ಅವನ ಕೈಕೆಳಗಿನ ನಾವಿಕರೂ ಅಂದಿನ ರಾತ್ರಿ ಸಮುದ್ರಸಂಚಾರಕ್ಕಾಗಿ ಹೊರಟಿದ್ದರು. ಅಂದಿನ ಸಂಚಾರವೆಂದರೆ ವಿಶ್ರಾಂತಿಯ ಸಂಚಾರವಾಗಿರದೆ 'ಗಸ್ತಿ'ಯದಾಗಿತ್ತು. ರಾತ್ರಿ ಅಪರಾತ್ರಿಯಲ್ಲಿ ಪಿರಂಗಿಗಳು ಸಮುದ್ರ ಸುಲಿಗೆಗಾರಿಕೆ ಮಾಡುತ್ತಿರುವ ಮೂಲಕ ಕುಣಕ್ಯಾನು ಸರಖೇಲರ ಆಜ್ಞೆಯಂತೆ 'ಗಸ್ತಿ'ಯ ಕೆಲಸ ಮಾಡುತ್ತಿದ್ದನು.

ಈಗ ಕುಣಕ್ಯಾನ ಯೋಗ್ಯತೆಯೂ ದೊಡ್ಡದಾಗಿತ್ತು. ಅವನು ಸರ ತಾಂಡೇಲನಾಗುವವನಿದ್ದನು. ಅವನ ಸಲುವಾಗಿ 'ಶಂಕರ' ಎಂಬ ಹೆಸರಿನ ದೊಡ್ಡ ನೌಕೆ ಸಿದ್ಧವಾಗತೊಡಗಿತ್ತು. ಉತ್ತಮೋತ್ತಮ ಕಲಾವಿದರು ನೌಕೆ ಕಟ್ಟುವದನ್ನು ಪ್ರಾರಂಭಿಸಿದ್ದರು. ಹೊಸ ನೌಕೆ ಸಿದ್ಧವಾಗಿ ಸಮುದ್ರದಲ್ಲಿ ಬಿಟ್ಟ ದಿನ ಕುಣಕ್ಯಾನಿಗೆ 'ಸರ ತಾಂಡೇಲ ಕುಣಕೇಶ್ವರ' ಎಂಬ ಬಿರುದು ದೊರೆಯತಕ್ಕದ್ದಿತ್ತು. ಈಗ ಅವನು ನೌಕಾಧಿಪತಿಯಿದ್ದರೂ ಸರ ತಾಂಡೇಲನಿರಲಿಲ್ಲ ಕುಣಕ್ಯಾನ ಈ ವರ್ಧಮಾನ ಯಶಕ್ಕಾಗಿ ಭಾಗೂಜಿ ಥಾಕಲ್ಯಾರು ಮತ್ಸರಪಡತೊಡಗಿದ್ದರು, ಜಾನ್ಯಾ, ಡಾಮ್ಯಾ, ಸಖ್ಯಾ ಮೊದಲಾದ ಜನರು ಸಂಭ್ರಮಗೊಂಡಿದ್ದರು. ಅಂದಿನ 'ಗಸ್ತಿ'ಯ ಕೆಲಸ ನಡೆದಾಗ ಸಖ್ಯಾ ಡಾಮ್ಯಾ ಮೊದಲಾದವರು ಕುಣಕ್ಯಾನ ಕೀರ್ತಿಯನ್ನು ಹೊಗಳುತ್ತ, ಅನೇಕ ಮಾತುಕತೆಯಾಡುತ್ತ ನೌಕೆಯಲ್ಲಿ ಕುಳಿತಿದ್ದರು. ನೌಕಾಧಿಪತಿ ಕುಣಕ್ಯಾನು ಚುಕ್ಕಾಣಿಯನ್ನು ಹಿಡಿದು ತನ್ನ ಆಸನದ ಮೇಲೆ ಕುಳಿತುಕೊಂಡಿದ್ದನು. ಆ ಮಾತು ಈ ಮಾತು ನಡೆದ ಮೇಲೆ ಹಿಂದಿನ ಚಮತ್ಕಾರಿಕ ಘಟನೆಗಳನ್ನು ಹೇಳುವದು ಸಾಗಿತು. ಕುಣಕ್ಯಾನು ಮೊನ್ನೆ ನೊನ್ನಿನ ಹೊಸ ಘಟನೆಯನ್ನು ಒಳ್ಳೆಯ ಚಮತ್ಕಾರಿಕವಾಗಿ ಹೇಳಿದನು. ಅನಂತರ ಜಾನ್ಯಾನೆಂಬ ಅಂಬಿಗನು ಒಂದು ಘಟನೆಯನ್ನು ಹೇಳತೊಡಗಿನು:—"ಕುಣಕೆಣ್ಣಾ, ನಾವು ಇಷ್ಟು ದಿನ ನಿನಗೆ ಕುಣಕ್ಯಾ ಅನ್ನುತ್ತಿದ್ದೆವು; ಈಗ ನೀನು ನಮ್ಮೆಲ್ಲ ಅಂಬಿಗರ ಮೇಲೆ ಒಡೆಯನಾದೆ. ಈಗ ಮೊದಲಿನಂತೆ ಅನ್ನುತ್ತ ನಡೆದರೆ ಹೇಗೆ? ನಿನಗೇನೂ ಅಧಿಕಾರದ ಸೊಕ್ಕಿಲ್ಲ, ಆದರೂ ನಮಗೇ ಹೆದರಿಕೆ ಬಂದಂತಾಗುವದು."

"ಏನೂ ಹೆದರುವ ಕಾರಣವಿಲ್ಲ. ನೀವೆಲ್ಲರೂ ನನ್ನೊಡನೆ ಮೊದಲಿನಂತೆಯೇ ನಡೆಯತಕ್ಕದ್ದು" ಎಂದು ಕುಣಿಕ್ಯಾನು ನುಡಿದು:—"ಜಾನ್ಯಾ, ನಿನ್ನ ಕಥೆ ಸಾಗಲಿ"

"ಕುಣಿಕೆಪ್ಪಾ, ಇಂಥದೇ ಒಂದು ಅಮಾವಾಸ್ಯೆಯು ದಿನ. ಬಹಳ ಮಾಡಿ ಕಾರ್ತಿಕ ಅಮಾವಾಸ್ಯೆಯಿರಬಹುದು. ರಾತ್ರಿ ಒಂದು ಪ್ರಹರವಾಗಿರಲಿಲ್ಲ. ಸ್ವಚ್ಛವಾಗಿ ಬೆಳದಿಂಗಳು ಬಿದ್ದಿತ್ತು. ಸಮುದ್ರದಲ್ಲಿ ದೊಡ್ಡ ದೊಡ್ಡ ತೆರೆಗಳು ಏಳತೊಡಗಿದ್ದವು. ಅಂಥ ಭರತಿಯಾಗುವದನ್ನು ನಾವು ಎಂದೂ ನೋಡಿರಲಿಲ್ಲ. ಸೂರ್ಯನು ನೆತ್ತಿಯ ಮೇಲೆ ಬಂದದ್ದರಿಂದ ಬಿಸಿಲು ಹೆಚ್ಚಾಗಿತ್ತು. ಇಂಥ ಹೊತ್ತಿನಲ್ಲಿ ಹುಟ್ಟು ಹಾಕಿ ವಿರುದ್ಧ ಗಾಳಿಯಲ್ಲಿ ನೌಕೆನಡೆಯಿಸುವದೆಂದರೆ ಸಾಮಾನ್ಯ ಎದೆಗಾರಿಕೆಯೇ?"

ಎಲ್ಲರೂ ಖೊಳ್ಳನೆ ನಕ್ಕರು. ಸಖ್ಯಾನು ಜಾನ್ಯಾನನ್ನು ಕುರಿತು:—"ಏನೋ ಜಾನ್ಯಾ, ಇದೇನು ಎಲ್ಲವೂ ವಿಲಂಗಣ ಸಂಗತಿಯನ್ನೇ ಹೇಳುವೆಯಲ್ಲ? ಅಮಾವಾಸ್ಯೆಯು ರಾತ್ರಿ, ಬೆಳದಿಂಗಳು, ಅಂದು ಸಮುದ್ರಕ್ಕೆ ಭರತಿ, ಸೂರ್ಯನು ನೆತ್ತಿಯ ಮೇಲೆ ರಾತ್ರಿಯ ಒಂದು ಪ್ರಹರದ ಹೊತ್ತಿಗೆ ಬಂದಿದ್ದನು! ಎಲ್ಲವೂ ವಿಚಿತ್ರ ಸಂಗತಿಯು!"

"ಬಹಳ ದಿನದ ಮಾತು ಸಖ್ಯಾ, ಅದರಲ್ಲಿ ಒಂದೆರಡು ಹೆಚ್ಚುಕಡಿಮೆ ಕಂಡರೂ ಮುಖ್ಯ ಕತೆಯ ಕಡೆಗೆ ಲಕ್ಷ್ಯಗೊಟ್ಟು ಉಳಿದದ್ದನ್ನು ಬಿಟ್ಟುಬಿಡಬೇಕು. ಅಂದರೆ ನಿಮಗೆ ಸೂಜ್ಞರೆಂದು ಹೆಸರು ಬರುವದು."

"ಇರಲಿ. ನಿನ್ನಂತೆ ಸಾಗಲಿ."

"ಒಳ್ಳೆಯ ಕಷ್ಟವನ್ನು ಅನುಭವಿಸುತ್ತ ನಡೆದಿರಲು ಹಿಂದೆ ರನ್ನಪರ್ವತಪ್ರಾಯವಾದ ಮೊಸಳೆಯು ನನ್ನ ನೌಕೆಯನ್ನು ಬೆನ್ನಟ್ಟಿತು. ಮೊದಲು ನಾನು ಆ ಮೊಸಳೆಯನ್ನು ನೋಡಿರಲಿಲ್ಲ. ನಮ್ಮ ತಾಂಡೇಲನು ಮಾತ್ರ ನೋಡಿದ್ದನು. ಅವನು ತನಗೆ 'ತಾಂಡೇಲ, ಹಿಂದೆ ನೋಡು' ಎಂದು ಭಯದಿಂದ ಹೇಳಿದನು."

"ಆಗ ನೀನು ತಾಂಡೇಲನಿದ್ದೆಯೇನು?"

"ಹೌದು. ನನ್ನ ಅಂದಿನ ತಾಂಡೇಲತನ ಹೋಗಲಿಕ್ಕೆ ಇಂದಿನ ಕತೆ ಕಾರಣವಾದುದರಿಂದ ಅದನ್ನು ಹೇಳತೊಡಗಿದ್ದೇನೆ."

"ಮುಂದೇನಾಯಿತು?"

"ನಾನು ಚುಕ್ಕಾಣಿ ಹಿಡಿದು ನೌಕೆಯ ದಿಶೆಯನ್ನು ಅತ್ತ-ಇತ್ತ ಬದಲಿಸಿ ಮೊಸಳೆಯ ಕೈಯಿಂದ ಪಾರಾಗಲು ಹವಣಿಸುತ್ತಿದ್ದೆನು."

"ನಿಮ್ಮ ಸರ ತಾಂಡೇಲನು ಹುಟ್ಟು ಹಾಕುತ್ತಿರಬಹುದು" ಎಂದು ಕುಣಿಕ್ಯಾ ನಗುತ್ತ ನುಡಿದನು.

"ನಗಬೇಡ ಕುಣಕೆಪ್ಪಾ, ನಿನ್ನಂಥವನು ನಗಿಯಮಾಡಿದರೆ ಹೇಗೆ? ಬಹಳ ದಿನಗಳ ಮಾತು. ಹೇಳಿಕೆಯಲ್ಲಿ ಪುರುವಿನ ಮೂಲಕ ಹೆಚ್ಚುಕಡಿಮೆಯಾದರೂ ಮುಖ್ಯ ವಿಷಯವನ್ನಷ್ಟು ಕೇಳಿ ಉಳಿದದ್ದನ್ನು ಮರೆತು ಬಿಡಬೇಕು."

"ಕತೆ ಸಾಗಲಿ."

"ನಮ್ಮ ನೌಕೆಯು ಎತ್ತ ಹೊರಳುವದೋ, ಆ ಮೊಸಳೆಯೂ ಅತ್ತಕಡೆಗೇ ಹೊರಳುವದು. ನೌಕೆಯ ವೇಗವು ಎಷ್ಟೋ ಅಷ್ಟೇ ಆ ಮೊಸಳೆಯ ವೇಗ! ಒಂದು ಗೇಣು ಹಿಂದೆ ಸರಿಯಲೊಲ್ಲದು; ಒಂದು ಗೇಣು ಮುಂದೂ ಬರಲೊಲ್ಲದು ಕತ್ತಿಯಿಂದ ಇರಿಯಬೇಕೆಂದರೆ ಅದು ಅಷ್ಟು ಸಮೀಪದಲ್ಲಿ ಬರಲೊಲ್ಲದು. ನಾವು ನೋಡಬೇಕೆಂದು ವೇಗವನ್ನು ಕಡಿಮೆ ಮಾಡಿದ ಕೂಡಲೆ ಅದೂ ತನ್ನ ವೇಗ ಕಡಿಮೆ ಮಾಡುತ್ತಿತ್ತು. ಹೀಗಾಗಿ ನನ್ನ ಎಣಿಕೆಯು ತಪ್ಪಿಹೋಗುತ್ತಿತ್ತು. ನನಗೆ ಸಿಟ್ಟು ಬಂತು. ಏನಾದರೂ ಆಗಲಿ, ಒಮ್ಮೆ ಪರಾಕ್ರಮ ತೋರಿಸಿಬಿಡೋಣವೆಂದು ಅಂದುಕೊಂಡೆನು. ನಮ್ಮ ಸರ ತಾಂಡೇಲನಿಗೆ ಅಂಥ ಧೈರ್ಯವುಂಟಾಗಲಿಲ್ಲ ನಾನು ಒಳ್ಳೆಯ ಎದೆಗಾರಿಕೆ ಮಾಡಿ ನನ್ನ ಕೈಗತ್ತಿಯನ್ನು ಒಳ್ಳೆಯ ಬಲವಾಗಿ ಮೊಸಳೆಗೆ ಹೊಡೆದೆನು. ಸರ ತಾಂಡೇಲನು ನನ್ನ ಪರಾಕ್ರಮಕ್ಕೆ ಮೆಚ್ಚಿದನು. ಕತ್ತಿಯ ಬಲವಾದ ಏಟು ಮೊಸಳೆಗೆ ಬಿದ್ದಿತೇನೋ ನಿಜ. ಆದರಿಂದ ಮೊಸಳೆಗೆ ಎಷ್ಟು ಪೆಟ್ಟು ತಗುಲಿತೋ ದೇವರಿಗೆ ಗೊತ್ತು. ಯಾಕಂದರೆ ಅದು ನಮ್ಮ ನೌಕೆಯ ಹಿಂದೆ ಮೊದಲಿನಂತೆಯೇ ಹಿಂಬಾಲಿಸಿತ್ತು. ಅಷ್ಟೇ ವೇಗದಿಂದ ಬರುತ್ತಿದ್ದುದನ್ನು ನೋಡಿ ನನ್ನ ಕೈಗತ್ತಿಯ ಪೆಟ್ಟು ಅದಕ್ಕೆ ಏನೂ ಪರಿಣಾಮವನ್ನುಂಟು ಮಾಡಿಲ್ಲವೆಂದು ನಾವು ತಿಳಿದೆವು. ಅದ್ಭುತ ಮೊಸಳೆಯದು!"

"ಕಥೆಯೂ ಅದ್ಭುತವಿದೆ. ಮುಂದೇನಾಯಿತು?"

"ಮುಂದಿನ ಕತೆಯು ಅತ್ಯಂತ ಲೋಮಹರ್ಷಣವಿದೆ. ಅದನ್ನು ನೆನೆದರೆ ಈಗಲೂ ನಡುಗು ಹುಟ್ಟುವದು" ಎಂದು ಜಾನ್ಯಾನು ಹೇಳಿ ಗಾಂಭೀರ್ಯದಿಂದ. "ಕೈಗತ್ತಿಯಿಂದ ಪರಾಭೂತವಾಗದ ಮೊಸಳೆಯನ್ನು ಹಗ್ಗ ಕಟ್ಟಿ ಎಳೆಯಬೇಕೆಂದೂ ಸಮೀಪಕ್ಕೆ ಬಂದಕೂಡಲೆ ಕತ್ತಿಯ ಏಟು ಕೊಡಬೇಕೆಂದೂ ಯೋಚಿಸಿ, ಒಂದು ಹಗ್ಗವನ್ನು ಮಲವು ಹಾಕಿ ಬಿಸುಟಿದೆನು. ನನ್ನ ಗುರಿಯೆಂದರೆ ಸಾಮಾನ್ಯವಾದದ್ದಲ್ಲ. ಅದು ಸರಿಯಾಗಿ ಮೊಸಳೆಯ ಕೊರಳಿಗೇ ಬಿತ್ತು. ಕೂಡಲೆ ನಾನು ಅದನ್ನು ಎರಡೂ ಕೈಗಳಿಂದ ಎಳೆಯತೊಡಗಿದೆನು. ಒಳ್ಳೆಯ ಹಗುರು ಇತ್ತು. ನೀರಲ್ಲಿ ಪದಾರ್ಥಗಳು ಹಗುರು ಬರುತ್ತವೆಂಬುದು ನೀರಲ್ಲಿ ಯಾವಾಗಲೂ ಸಂಚರಿಸುವ ನಿಮಗೆ ಗೊತ್ತಿರಬೇಕು. ಆಗ ನಾನು ಎಡಗೈಯಿಂದ ಹಗ್ಗ ಎಳೆಯುತ್ತ

ಬಲಗೈಯಲ್ಲಿ ಕತ್ತಿಯನ್ನು ತೆಗೆದುಕೊಂಡು, ಮೊಸಳೆಯು ಸಮೀಪಕ್ಕೆ ಬರುವದನ್ನು ಸೂಕ್ಷ್ಮವಾಗಿ ನಿರೀಕ್ಷಿಸತೊಡಗಿದೆನು. ಅದು ಸಮೀಪಕ್ಕೆ ಬಂತು. ನನ್ನ ಕೈಗೆ ನಿಲುಕುವವರೆಗೂ ಬಂತು. ಕೂಡಲೆ ನಾನು ಒಳ್ಳೆಯ ಧೈರ್ಯ-ಸಾಹಸಗಳಿಂದ ಜೀವದಾಶೆ ಬದಿಗಿರಿಸಿ ಅದರ ನೆತ್ತಿಗೆ ಪ್ರಹಾರ ಮಾಡಿದೆನು. ಚೆಪ್ಪೆಂದ ಸಪ್ಪಳ ವಾಯಿತು. ಸತ್ತಿತೆಂದು ಎಳೆದುಕೊಂಡೆನು. ನೋಡುತೇನೆ, ಅದ್ಭುತ ಸಂಗತಿ! ಅದನ್ನು ಹೇಳಿದರೆ ನೀವು ಬಹಳೇ ವಿಸ್ಮಯಗೊಳ್ಳುತ್ತೀರಿ!"

"ಏನದು? ಮುಂದೇನಾಯಿತು?" ಡಾಮ್ಯಾ-ಸಖ್ಯಾರು ಆತುರದಿಂದ ಕೇಳಿದರು.

"ನಮ್ಮ ನೌಕೆಯ ಹಿಂದೆ ಬೆನ್ನಟ್ಟಿದ್ದು ಮೊಸಳೆಯಲ್ಲ; ನನ್ನ ಕಂಬಳಿಯು!"

ಎಲ್ಲರೂ ನಕ್ಕರು.

"ಕಂಬಳಿಯೇ? ಅದು ಹೇಗೆ ಬೆನ್ನಟ್ಟಿತ್ತು?" ಕುಣಕ್ಯಾನು ನಗುತ್ತ ಕೇಳಿದನು.

"ನಾನು ನನ್ನ ದೊಡ್ಡ ಕಂಬಳಿಯ ತುದಿಗೆ ರೊಟ್ಟಿ-ಬುತ್ತಿ ಕಟ್ಟಿ ನೌಕೆಯ ಕಟಕ್ಕಿರಿಸಿದ್ದನು. ಅದು ಜಾರಿ ಬೀಳಬಾರದೆಂದು ಒಂದು ಹಗ್ಗವನ್ನು ಅದಕ್ಕೆ ಕಟ್ಟಿ, ಹಗ್ಗದ ಮತ್ತೊಂದು ತುದಿಯನ್ನು ನೌಕೆಗೆ ಕಟ್ಟಿದ್ದೆನು. ಕಟ್ಟುವಬರಲ್ಲಿ ತಪ್ಪಾದ್ದರಿಂದ ಅದು ಕೆಳಗೆ ಬಿತ್ತು. ಹಗ್ಗದ ಮತ್ತೊಂದು ತುದಿಯು ನೌಕೆಗೆ ಕಟ್ಟಿದ್ದರಿಂದ ಅದು ಹಾಗೆಯೇ ಹಿಂದೆ ಬೆನ್ನಟ್ಟಿತ್ತು. ಅದು ನೀರಲ್ಲಿ ಬೀಳುವಾಗ ಕಂಬಳಿಯ ನಡುವೆ ಹವೆ ತುಂಬಿದ್ದರಿಂದ ಅದು ಹಾಗೆಯೇ ಉಬ್ಬಿಕೊಂಡು ತೇಲುತ್ತಿತ್ತು. ಅಮಾವಾಸ್ಯೆಯಿದ್ದುದರಿಂದಲೂ ಬೆಳದಿಂಗಳು ಸ್ವಚ್ಛವಾಗಿ ಬೀಳದ್ದರಿಂದ ಈ ವಸ್ತುಸ್ಥಿತಿ ನನಗೆ ಗೊತ್ತಾಗಲಿಲ್ಲ. ನಾನು ಕಂಬಳಿಯ ಗಂಟನ್ನು ಅವ್ಯವಸ್ಥಿತವಾಗಿ ಕಟ್ಟಿದ್ದರಿಂದ ದೊಡ್ಡ ಬೆದರಿಕೆಗೆ ಕಾರಣವಾಯಿತೆಂಬ ತಪ್ಪು ಹೊರಿಸಿ, ನಮ್ಮ ಸರ ತಾಂಡೇಲನು ನನ್ನನ್ನು ತಾಂಡೇಲ ಸ್ಥಳದಿಂದ ತಳ್ಳಿ, ಸಾಧಾರಣ ತರಗತಿಯ ನಾವಾಡಿಗನನ್ನು ಮಾಡಿದನು. ಇದೇ ನನ್ನ ದೈವದುರ್ವಿಲಾಸದ ಕತೆ!"

ಮತ್ತೆ ಎಲ್ಲರೂ ನಕ್ಕರು. ಹೀಗೆಯೇ ಇದ್ದದ್ದೊಂದು ಇಲ್ಲದ್ದೊಂದು ಕತೆ ಹೇಳುತ್ತ ಅವರು ಅಂದಿನ ಗಸ್ತಿಯ ಕಾರ್ಯಕ್ರಮ ಮುಗಿಸಿಕೊಂಡು ವಿಜಯದುರ್ಗ ಬಂದರವನ್ನು ಸೇರಿದರು.

---

( ೨ )

ಭಾಗೂಜಿಯು ತನ್ನ ತಪ್ಪನ್ನು ಪ್ರಾಂಜಲತನದಿಂದ ಒಪ್ಪಿ ಕ್ಷಮೆ ಬೇಡಿದ್ದರಿಂದ ಬಾಲಸ್ನೇಹಿತನಾದ ಅವನನ್ನು ಕಾನ್ಹೋಜಿ ಆಂಗ್ರೆಯು ಕ್ಷಮಿಸಿ, ಮೊದಲಿನ ಕೆಲಸದ ಮೇಲೆ ನಿಯಮಿಸಿದನು. ಸರ ತಾಂಡೇಲ ಪದವಿಯನ್ನೂ 'ಶಂಕರ' ಎಂಬ

ಹೆಸರಿನ ಹೊಸ ನೌಕೆಯ ಒಡೆತನವನ್ನೂ ಕುಣಕ್ಯಾನಿಗೆ ಕೊಡಬೇಕೆಂದು ಆಂಗ್ರೆಯು ನಿರ್ಧರ ಮಾಡಿದ್ದನು. ಈ ಘಟನೆಯು ಮತ್ಸರಗ್ರಸ್ತರಾದ ಭಾಗೂಜಿಯ ಹಾಗು ಅವನ ಮಗ ಧಾಕಲ್ಯಾನ ಮನಸ್ಸನ್ನು ಅಸಂತುಷ್ಟಗೊಳಿಸಿತ್ತು. ಹೊರಗೆ ಅವರು ಕುಣಕ್ಯಾನೊಡನೆ ಸ್ನೇಹನಿಂದ ವರ್ತಿಸುವಂತೆ ನಟಿಸುತ್ತಿದ್ದರೂ ಅವನ ಅಹಿತ ಚಿಂತನೆಗಾಗಿ ಯಾವಾಗಲೂ ಅನೇಕ ಬಗೆಯಾಗಿ ಗುಪ್ತ ಸಾಹಸ ನಡೆಯಿಸಿದ್ದರು. ಇತ್ತೀಚೆಗೆ ರತನೆಯು ಧಾಕಲ್ಯಾನನ್ನು ಮಾತಾಡಿಸುತ್ತಿರಲಿಲ್ಲ; ಅವನು ಮನೆಗೆ ಹೋಗಿ ಮಾತಾಡಿಸಿದರೆ, ಬೇಸರಗೊಂಡು ನಿಮಿತ್ತಕ್ಕೆ ಒಂದೆರಡು ಮಾತನಾಡುತ್ತಿದ್ದ ಳಷ್ಟೆ. ಭಿವಾನೆದುರಿಗೆ ರತನೆಯನ್ನು ಧಾಕಲ್ಯಾನಿಗೆ ಕೊಡಬೇಕೆಂದು ಭಾಗೂಜಿಯು ಕೇಳಿಕೊಂಡಿದ್ದನು. 'ಮದುವೆಯಾಗುವವಳ ಇಚ್ಛೆ' ಎಂದು ಭಿವಾನು ಭಾಗೂಜಿಗೆ ಹೇಳಿದ್ದನು. ಧಾಕಲ್ಯಾನು ಪ್ರಣಯಾಪೇಕ್ಷೆಗೊಂಡು ರತನೆಯನ್ನು ಸೆರಗೊಡ್ಡಿ ಬೇಡಿಕೊಂಡಿದ್ದನು ರತನೆಯು ಅವನ ಬೇಡಿಕೆಯನ್ನು ಪೂರ್ಣವಾಗಿ ಧಿಃಕರಿಸಿ, ತನ್ನ ಹೃದಯದಲ್ಲಿ ಒಬ್ಬನ ಪ್ರತಿಷ್ಠೆ ಮಾಡಿಕೊಂಡಿರುವೆನೆಂದು ಹೇಳಿಬಿಟ್ಟಿದ್ದಳು. ಈ ಸಂಗತಿಯಿಂದಂತೂ ಭಾಗೂಜಿ-ಧಾಕಲ್ಯಾರ ಅಸ್ತ್ರಗಳು ಒಂದೇ ಸವನೆ ತಳಮಳ ಗೊಳ್ಳತೊಡಗಿದ್ದವು. ರತನೆಯು ಕುಣಕ್ಯಾನೊಡನೆ ಪ್ರೇಮದಿಂದ ಭಾಷಣ ಮಾಡು ತ್ತಿದ್ದಳು, ನಗುತ್ತಿದ್ದಳು, ಕೆಲೆಯುತ್ತಿದ್ದಳು; ಆದರೆ ತನ್ನ ಮನೋದಯವನ್ನು ಅವನೆದುರಿಗೆ ಇನ್ನೂ ಬಿಚ್ಚಿರಲಿಲ್ಲ. ಕುಣಕ್ಯಾನು ರತನೆಯಲ್ಲಿ ಸ್ನೇಹಭಾವದಿಂದ ನಡೆಯುತ್ತಿದ್ದನು; ಆದರೆ ಆ ಸ್ನೇಹವು ಮಾತ್ರ ನಿರ್ವ್ಯಾಜವಾಗಿತ್ತು. ಅವನ ಹೃದ ಯವು ರತನೆಯ ವಿಷಯವಾಗಿ ಪ್ರಣಯವುಳ್ಳದ್ದಾಗಿರುವದೆಂದು ತಿಳಿದುಕೊಳ್ಳಲು ಯಾವ ಬಗೆಯ ಸಾಧನಗಳೂ ದೊರೆತಿರಲಿಲ್ಲ. ಯೋಗ್ಯ ಗುರುವಿನ ಸನ್ನಿಧಾನದಲ್ಲಿ ಬೆಳೆದ ಅವನ ಹೃದಯವು ಸಹಜವಾಗಿ ವಿಕಾರವಶವಾಗುವಂತಹದಿರಲಿಲ್ಲ. ಸರ ತಾಂಡೇಲ ಪದವಿಯು ದೊರೆತ ಕೂಡಲೆ ತನ್ನ ಮನೋದಯವನ್ನು ಸ್ಪಷ್ಟವಾಗಿ ತಿಳಿಸಬೇಕೆಂದು ರತನೆ ಸಂಕಲ್ಪಿಸಿದ್ದಳು.

'ಶಂಕರ' ನೌಕೆಯೆಂದರೆ ನಭೂತಪೂರ್ವವಾದದ್ದು. ವಿಜಯದುರ್ಗ ಬಂದರ ದಲ್ಲಿ ಇಂತಹ ದೊಡ್ಡ ನೌಕೆ ಕಟ್ಟಲ್ಪಟ್ಟಿದ್ದು ಇದೇ ಮೊದಲು. ಈ ನೌಕೆಯನ್ನು ಕಟ್ಟುವದಕ್ಕೆ ಕುಶಲ ಕೈಗಾರಿಕೆಯ ಜನರನ್ನು ನಿಯಮಿಸಲಾಗಿತ್ತು. ಆ ಕೈಗಾರಿಕೆಯ ಜನರಿಗೆಲ್ಲ ಮುಖ್ಯನು ಕಮಲ್ಯಾನಾಗಿದ್ದನು. ಅವನು ನೌಕೆಯೊಳಗಿನ ಮುಖ್ಯ ಭಾಗವನ್ನು ಸಿದ್ಧಪಡಿಸುವ ಕೆಲಸ ಮಾಡುತ್ತಿದ್ದನು.

'ಶಂಕರ' ನೌಕೆಯ ಪೂಜೆಯು ಇಂದೇ ನೆರವೇರುವದಿತ್ತು. ಅದನ್ನು ನೀರಿ ನಲ್ಲಿ ಬಿಟ್ಟು ಸರ ತಾಂಡೇಲ ಪದವಿಯನ್ನು ಕುಣಕ್ಯಾನಿಗೆ ಇಂದೇ ಕೊಡಬೇಕಾಗಿತ್ತು.

ಜ್ಯೋತಿಷಿ ಹರಿಶಾಸ್ತ್ರಿಗಳು ಸುಮುಹೂರ್ತ ಹೇಳಿದ್ದು, ಆ ಮುಹೂರ್ತದಲ್ಲಿ ನೌಕೆಯಲ್ಲಿ ದೇವೀ ಪ್ರತಿಮೆಯ ಪ್ರತಿಷ್ಠಾಪನೆ ಕಮಲ್ಯಾನಿಂದ ಆಗಬೇಕಾಗಿತ್ತು. ಅಂದು ಬೆಳಗ್ಗೆ ಥಾಕಲ್ಯಾನೂ ಭಾಗೂಜಿಯೂ ಕಮಲ್ಯಾನ ಬಳಿಗೆ ಹೋದರು. ಭಾಗೂಜಿ-ಥಾಕಲ್ಯಾರ ಆಗಮನದಿಂದ ಕಮಲ್ಯಾನಿಗೆ ಆಶ್ಚರ್ಯವಾಯಿತು. ಅವನು ಆ ತಂದೆ ಮಕ್ಕಳನ್ನು ಸನ್ಮಾನಿಸಿ ಕುಳ್ಳಿರಿಸಿ ಆಗಮನದ ಕಾರಣವನ್ನು ವಿಚಾರಿಸಿದನು. ಸಹಜವಾಗಿ ಬಂದೆವೆಂದು ಅವರು ನುಡಿದರು. ಸ್ವಲ್ಪ ಹೊತ್ತು ಆ ಮಾತು ಈ ಮಾತು ನಡೆದ ಮೇಲೆ ಭಾಗೂಜಿಯು ಕಮಲ್ಯಾನನ್ನು ಕುರಿತು:—"ಕಮಲ್ಯಾ, ಕುಣಕ್ಯಾನು ಸುದೈವಿ. ಅನೇಕ ವರ್ಷಗಳ ವರೆಗೆ ಸರಕಾರದ ಸೇವೆ ಮಾಡಿ ಮುಪ್ಪಿಗೆ ಬಂದರೂ ದೊರೆಯದಂತಹ ಪದವಿಯು ಕುಣಕ್ಯಾನಿಗೆ ಸ್ವಲ್ಪ ಅವಧಿಯಲ್ಲಿ ದೊರೆಕಿತು. ನಮ್ಮ ಥಾಕಲ್ಯಾನಿಗಾದರೂ ಈ ಪದವು ದೊರೆಯಬಾರದೆ? ಕಲಿಗಾಲ ಕುಣಕ್ಯಾನು ಯಾವ ಮುಹೂರ್ತದಲ್ಲಿ ಬಂದನೋ ಏನೋ! ಅವನು ನಮ್ಮ ಸೌಖ್ಯವನ್ನೇ ಸೂರೆ ಮಾಡಿದನು. ಅವನ ಮೇಲೆ ಸರಖೇಲರ ಕೃಪೆಯಾಗಿರುವಾಗ ನಾವು ಮಾಡುವದೇನು?"

'ಕುಣಕ್ಯಾನು ತನ್ನ ಬುದ್ಧಿಶಕ್ತಿಯಿಂದ ಸರಖೇಲರ ಕೃಪೆಯನ್ನು ಗಳಿಸಿರುವದರಿಂದ ಸುಮ್ಮನಿರಬೇಕಾಗಿದೆ. ಅವನು ನೌಕೆಯ ಅಧಿಪತಿಯಾದಂದಿನಿಂದ ಕಳ್ಳಕಾಕರ ಹೊಟ್ಟೆಯ ಮೇಲೆ ಕೇರು ಬಿದ್ದಿದೆ. ಏನು ಮಾಡಬೇಕು? ಸರಖೇಲರ ಕಡೆಗೆ ಲಕ್ಷ್ಯಗೊಟ್ಟು ಸುಮ್ಮನಿರಬೇಕಾಗಿದೆ."

"ಕಮಲ್ಯಾ!" ಭಾಗೂಜಿಯು ಕುತೂಹಲದಿಂದ:—"ಕುಣಕ್ಯಾನಿಗೆ ಕೇಡುಂಟು ಮಾಡುವದು ನಿನ್ನ ಕೈಯಲ್ಲಿರುವದೇ?"

'ಓಹೋ! ಇರದೇನು? 'ಶಂಕರ' ನೌಕೆಯಲ್ಲಿ ಕೂರಿಸುವ ದೇವಿಯ ಮೂರ್ತಿಯನ್ನು ತಲೆ ಕೆಳಗೆ ಮಾಡಿ ಪ್ರತಿಷ್ಠೆಗೊಳಿಸಿಬಿಟ್ಟರೆ, ಒಂದು ತಿಂಗಳೊಗಾಗಿ ಅದೇ ನೌಕೆಯಲ್ಲಿ ಕುಣಕ್ಯಾನ ಸತ್ಯಾನಾಶವಾಗುವದೆಂದು ತಿಳಿಯಿರಿ."

"ಮೂರ್ತಿಯನ್ನು ತಿರುಗಿ ಕೂರಿಸಿದ್ದು ಬೇರೆಯವರಿಗೆ ಕಂಡರೆ?"

"ಅದನ್ನು ಕಾಣುವಂತೆ ಕೂಡಿಸುವದಿಲ್ಲ. ಅದರ ಮೇಲೆ ಮತ್ತೊಂದು ಹಲಗೆ ಕೂರಿಸುವದರಿಂದ ಒಳಗಿನ ಪ್ರತಿಮೆ ಯಾರಿಗೂ ಕಾಣುವದಿಲ್ಲ."

"ನಮ್ಮ ಸಲುವಾಗಿ ನೀನು ಇಷ್ಟು ಕೆಲಸ ಮಾಡುವೆಯಾ?"

"ನಿಮ್ಮ ಇಚ್ಛೆಯಿದ್ದರೆ ಅವಶ್ಯವಾಗಿ ಮಾಡುವೆನು."

ಭಾಗೂಜಿಯು ಕಮಲ್ಯಾನ ಮಾತಿನಿಂದ ಸಂಭ್ರಮಗೊಂಡು ತನ್ನ ಕೈಯೊಳಗಿನ ಒಂದು ಹರಳಿನುಂಗುರವನ್ನು ಅವನ ಕೈಯಲ್ಲಿ ಕೊಟ್ಟು:—"ಇದು ನಿನ್ನ ಶ್ರಮದ ಪಾರಿತೋಷಕವು. ವಿಷಯವು ಗುಪ್ತವಾಗಿರಲಿ!"

ಕಮಲ್ಯಾನು ಉಂಗುರವನ್ನು ಕೈಯಲ್ಲಿರಿಸಿಕೊಂಡು ಸಂತೋಷದಿಂದ:— “ನೀವು ಯೋಚನೆ ಬಿಡಿರಿ. ನನ್ನ ಮಾತಿನಂತೆ ಒಂದು ಮಾಸದೊಳಗಾಗಿ ಕೆಲಸ ವಾಗದಿದ್ದರೆ ನಾನು ನನ್ನ ವ್ಯವಸಾಯವನ್ನೇ ಬಿಟ್ಟುಬಿಡುವೆನು.”

“ಒಳಿತಾಯಿತು. ದೇವರ ಅನುಗ್ರಹದಿಂದ ನಮ್ಮ ಇಚ್ಛೆ ಸಫಲವಾಗುವ ಸುಯೋಗವೊದಗಿತು. ಆ ಗೋಸಾವಿಯು ಸರ ತಾಂಡೇಲಕಿಯನ್ನು ಎಷ್ಟು ದಿವಸ ಅನುಭವಿಸುವನೋ ನೋಡೋಣ” ಎಂದು ಧಾಕಲ್ಯಾ ಗಹಗಹಿಸಿ ನಗುತ್ತ ಅಂದನು.

---

( ೩ )

ಸರಖೇಲ ಕಾನ್ಹೋಜಿರಾಯನು ಶುಭಮುಹೂರ್ತದಲ್ಲಿ ಕುಣಕ್ಯಾನಿಗೆ ಸರ ತಾಂಡೇಲ ಪದವಿಯನ್ನು ಕೊಟ್ಟು ಸತ್ಕರಿಸಿದನು. ಕುಣಕ್ಯಾನು ಈಗ ಸರ ತಾಂಡೇಲ ಕುಣಕೇಶ್ವರನಾಗಿದ್ದನು; ವಿಜಯದುರ್ಗದ ನೌಕಾಧಿಪತಿಯಾಗಿದ್ದನು. ಧಾಕಲ್ಯಾ-ಭಾಗೂಜಿ ಮೊದಲಾದವರೆಲ್ಲರೂ ಕುಣಕ್ಯಾನ ಕೈಕೆಳಗಿನ ಕೆಲಸಗಾರರಾಗಿದ್ದರು. ಕುಣಕ್ಯಾನು ತನ್ನ ‘ಶಂಕರ’ ನೌಕೆಯಲ್ಲಿ ದಂಡಯಾತ್ರೆ ಮಾಡುತ್ತ ವಿಜಯಸಂಪಾದನೆ ಮಾಡತೊಡಗಿದ್ದನು. ಅವನ ವರ್ಧಮಾನ ವಿಜಯವನ್ನು ನೋಡಿ ಸರಖೇಲ ಕಾನ್ಹೋಜಿ ಆಂಗ್ರೆಯು ಸಂತುಷ್ಟನಾಗಿದ್ದನು.

ಸರಖೇಲನು ರಾಜಕಾರಣಕ್ಕಾಗಿ ಅಲಿಬಾಗಕ್ಕೆ ಹೋಗಿದ್ದನು. ಅಲ್ಲಿ ಅವನಿಗೆ ಪಿರಂಗಿಗಳ ಕಾರಸ್ಥಾನದ ವಾರ್ತೆ ಗೊತ್ತಾಯಿತು. ಗೋವೆಯ ಹಾಗು ಮುಂಬಯಿಯ ಪಿರಂಗಿಗಳೂ ಜಂಜಿರೆಯ ಹಬಸಿಯೂ ರತ್ನಾಗಿರಿಯಲ್ಲಿ ಒಟ್ಟಾಗಿ ಕೂಡಿಕೊಂಡು ವಿಜಯದುರ್ಗದ ಮೇಲೆ ದಾಳಿ ಮಾಡುವರೆಂಬ ಸುದ್ದಿಯು ಅವನಿಗೆ ತಿಳಿಯಿತು. ಶತ್ರುಗಳಿಗೆ ಎದುರಾಗುವದಕ್ಕೆ ಅಲಿಬಾಗದಲ್ಲಿರುವ ತನ್ನ ಹಡಗುಪಡೆಯನ್ನು ತೆಗೆದುಕೊಂಡು ಸರಖೇಲನು ತಾನೇ ಹೊರಟನು. ಶತ್ರುಗಳ ಒಂದು ಪಥಕವನ್ನು ತಡೆದು ಅದರ ಪಾರುಪತ್ಯ ಮಾಡಬೇಕೆಂದು ಅವನ ಸಂಕಲ್ಪವಿತ್ತು. ಕೆಳಗಿನಿಂದ ಬರುವ ಶತ್ರುಗಳ ಹಡಗುಪಡೆಯನ್ನು ತಡೆಯುವದಕ್ಕೆ ಅವನು ಕುಣಕ್ಯಾನಿಗೆ ಆಜ್ಞಾಪತ್ರ ಕಳುಹಿಸಿದ್ದನು. ಕೆಳಗಿನ ಹಾಗು ಮೇಲಿನ ಶತ್ರುಗಳು ಒಂದು ಸ್ಥಳದಲ್ಲಿ ಕೂಡಬಾರದೆಂದು ಸರಖೇಲನ ಯೋಜನೆಯಿತ್ತು.

ಕುಣಕ್ಯಾನಿಗೆ ಆಜ್ಞಾಪತ್ರ ತಲುಪಿತು. ಮಾರನೆಯ ದಿನ ಮಂಗಲ ಸುಪ್ರಭಾತದಲ್ಲಿ ತನ್ನ ನೌಕಾಪಡೆಯೊಡನೆ ದಕ್ಷಿಣದಿಶೆಯ ಗೋವೆಯ ಪಿರಂಗಿಗಳಿಗೆ ಎದುರಾಗಿ ಸಾಗಿಸಬೇಕೆಂದು ನಿರ್ಧರಿಸಿದನು. ಅದರಂತೆ ಎಲ್ಲ ಸೈನಿಕರಿಗೂ ನಾವಿಕರಿಗೂ ತಿಳಿಸಿದನು. ಎಲ್ಲ ಜನರೂ ಸಮರೋತ್ಸಾಹದಿಂದ ಸಿದ್ಧತೆ ನಡೆಯಿಸತೊಡಗಿದರು.

ಕುಣಕ್ಯಾನು ನಾಳೆಯೇ ಕಾಳಗಕ್ಕೆ ಹೊರಡುವನೆಂಬ ಸಂಗತಿ ರತನೆಗೆ ತಿಳಿಯಿತು. ಸಮರಕ್ಕೆ ಹೊರಡುವ ಸಂಗತಿಯು ಕೊಂಕಣೀಯರಿಗೆ ಹೊಸದಾಗಿರಲಿಲ್ಲ. ಯುದ್ಧವೆಂದರೆ ಅವರು ಹುರುಪುಗೊಳ್ಳುತ್ತಿದ್ದರು; ಆದರೆ ರತನೆಗೆ ಮಾತ್ರ ಇಂದು ದುಃಖವಾಯಿತು. ಅವಳಿಗೆ ದುಃಖವಾದದ್ದಕ್ಕೆ ಕುಣಕ್ಯಾನ ದಂಡಯಾತ್ರೆಯು ಕಾರಣವಾಗಿರಲಿಲ್ಲ. ಅವನು ದೊಡ್ಡ ವಿಜಯಯಾತ್ರೆಗೆ ಹೊರಟದ್ದು ಅವಳಿಗೆ ಸಂಭ್ರಮವನ್ನುಂಟು ಮಾಡಿತ್ತು; ಆದರೆ ಅಂದು ಅಮಾವಾಸ್ಯೆಯಿದ್ದುದರಿಂದ ಆ ದಿವಸ ಬಿಟ್ಟು ಪ್ರತಿಪದೆಯ ದಿನ ಹೊರಡುವದು ಉಚಿತವಾಗುವದೆಂದು ಅವಳಿಗೆ ತೋರಿತು. ಅಮಾವಾಸ್ಯೆಯ ಪ್ರವಾಸವು ವರ್ಜ್ಯ. ಅದರಲ್ಲಿ ದಂಡಯಾತ್ರೆಯಂತಹ ಮಹತ್ವದ ಕಾರ್ಯಕ್ಕೆ ತೆರಳುವದು ತೀರ ಅನುಚಿತವೆಂದೂ ಬಗೆದಳು. ಆ ದಿನ ಶಾಸ್ತ್ರಿಗಳು ಏಕೆ ಮುಹೂರ್ತ ತೆಗೆದುಕೊಟ್ಟಿರುವರೋ ಎಂದು ಅವಳು ದುಃಖಿತಳಾದಳು. ಅವಳು ಕುಣಕ್ಯಾನನ್ನು ಬಹು ಪರಿಯಾಗಿ ಹುಡುಕಿದಳು; ಎಲ್ಲಿಯೂ ಭೆಟ್ಟಿಯಾಗಲಿಲ್ಲ ಶಾಸ್ತ್ರಿಗಳ ಮನೆಯಲ್ಲಿರಬಹುದೆಂದು ತಿಳಿದು ಅವಳು ಅಲ್ಲಿಗೆ ಹೋದಳು.

ಶಾಸ್ತ್ರಿಗಳು ತಮ್ಮ ಪೂಜೆ-ಅರ್ಚನೆ ಮುಗಿಸಿ, ಕಷ್ಣಾಜಿನದ ಮೇಲೆ ಕುಳಿತು ಭಾಗವತವನ್ನೋದತೊಡಗಿದ್ದರು. ಆಗ ರತನೆಯು ಆಗಮನವಾಯಿತು. ಅವರು ರತನೆಯನ್ನು ನೋಡಿ:—"ರತನೆ, ಬಿಸಿಲಲ್ಲಿಯೇ ಬಂದೆ? ಒಳ್ಳೆಯ ಆತುರದ ಕೆಲಸ ಇರಬಹುದಲ್ಲದೆ?"

ರತನೆ ಶಾಸ್ತ್ರಿಗಳಿಗೆ ನಮಿಸಿ ಅವರ ಸಮೀಪದಲ್ಲಿ ಕುಳಿತು:—"ಅವಸರದ ಕೆಲಸ ವಿದ್ದುದರಿಂದಲೇ ಬಂದೆನು" ಎಂದು ಹೇಳಿ, ಸ್ವಲ್ಪ ವೇಳೆ ತಡೆದು ಕುಳಿತಳು.

"ರತನೆ, ನಿನ್ನ ಕೆಲಸವೇನು? ನಿರ್ಭಯವಾಗಿ ಹೇಳು."

"ನೀವು ಕುಣಕ್ಯಾನಿಗೆ ಕೆಟ್ಟ ಅಮಾವಾಸ್ಯೆಯ ದಿನ ಮುಹೂರ್ತ ತೆಗೆದುಕೊಡಬಹುದೆ?"

"ಲಗ್ನ ಮುಹೂರ್ತವನ್ನೆ?"

"ಶಾಸ್ತ್ರಿಗಳೇ, ನೀವೂ ವಿನೋದವಾಡತೊಡಗಿದಿರೇನು?" ಎಂದು ನುಡಿದು, ರತನೆಯು:—"ನಾಳೆ ಅಮಾವಾಸ್ಯೆಯಿರುವದು. ಅಂದು ಪ್ರವಾಸವೇ ವರ್ಜ್ಯವು. ಅಂಥದರಲ್ಲಿ ಕಾಳಗಕ್ಕೆ ಹೊರಡುವದು ತೀರ ಅನುಚಿತವಲ್ಲವೆ?"

"ನಿಜವು. ಕುಣಕ್ಯಾನಿಗೆ ನಾನೇನೂ ಮುಹೂರ್ತ ತೆಗೆದುಕೊಟ್ಟಿಲ್ಲ. ದಕ್ಷಿಣದಿಂದ ಗೋವೆಯ ಫಿರಂಗಿಗಳು ವಿಜಯದುರ್ಗದ ಮೇಲೆ ದಂಡೆತ್ತಿ ಹೊರಟಿರುವರಂತೆ. ಅವರನ್ನು ಬಂದರದಿಂದ ಆದಷ್ಟು ದೂರದಲ್ಲಿಯೇ ತಡೆಯಬೇಕೆಂದೂ ಆಜ್ಞಾಪತ್ರ ತಲುಪಿದ ಮಾರನೆಯ ದಿನವೇ ಹೊರಡಬೇಕೆಂದೂ ಕುಣಕ್ಯಾನಿಗೆ ಸರಖೇಲರು

ತಿಳಿಸಿರುವರು. ಇಂತಹ ಮಹತ್ವದ ಪ್ರಸಂಗಗಳಲ್ಲಿ ರಾಜಕಾರಣಿಗಳು ಮುಹೂರ್ತವನ್ನು ಕೇಳುತ್ತ ಕುಳಿತುಕೊಳ್ಳುವದಿಲ್ಲ. ಅಮಾವಾಸ್ಯೆ ಬಿಟ್ಟು ಪ್ರತಿಪದೆಯ ದಿನ ಪ್ರಯಾಣ ಮಾಡಬೇಕೆಂದು ನಿನ್ನ ಆಶಯವಿದೆ; ಆದರೆ ಅಷ್ಟು ಅವಧಿಯಲ್ಲಿ ಗೋವೆಯ ದಂಡು ವಿಜಯದುರ್ಗವನ್ನು ತಲುಪುವದು. ವಿಜಯದುರ್ಗದಲ್ಲಿ ಕಾಳಗ ತಡೆಯಬಾರದೆಂದು ಸರಖೇಲರ ಇಚ್ಛೆಯಿದೆ; ಹಾಗು ಉತ್ತರದಿಂದ ಬರುವ ಶತ್ರುಗಳ ದಂಡು ದಕ್ಷಿಣದ ಶತ್ರುಗಳನ್ನು ಕೂಡಬಾರದೆಂಬ ವಿಚಾರದಿಂದ ಸರಖೇಲರು ಒಳ್ಳೆಯ ಅವಸರದ ಆಜ್ಞಾಪತ್ರಗಳುಹಿಸಿರುವರು. ಇಂತಹ ಮಹತ್ವದ ಸಂದರ್ಭವೊದಗಿದಾಗ ಅಮಾವಾಸ್ಯೆ-ಹುಣ್ಣಿವೆಗಳೆನ್ನುತ್ತ ಕುಳಿತರೆ ಅನರ್ಥ ವಾಗಲಿಕ್ಕಿಲ್ಲವೆ?"

"ಶಾಸ್ತ್ರಿಗಳೇ, ನೀವು ಹೇಗಾದರೂ ಮಾಡಿ ಕುಣಕ್ಯಾನ ನಾಳಿನ ಪ್ರಯಾಣ ನಿಲ್ಲಿಸಿ, ನಾಡದು ಹೊರಡುವಂತೆ ಮಾಡಿರಿ."

ರತನೆಯು ಹೀಗೆ ನುಡಿಯುವಷ್ಟರಲ್ಲಿ ಕುಣಕ್ಯಾನು ಅಲ್ಲಿಗೆ ಬಂದನು. ಕೂಡಲೆ ಶಾಸ್ತ್ರಿಗಳು:—"ಬಾ; ಕುಣಕ್ಯಾ, ಒಳ್ಳೆಯ ವೇಳೆಗೆ ಸರಿಯಾಗಿ ಬಂದೆ ಇಂದು ಸರಖೇಲರ ವಿರುದ್ಧವಾಗಿ ವಾದವೊಂದು ನನ್ನ ಕಡೆಗೆ ಬಂದಿದೆ."

ಕುಣಕ್ಯಾ ರತನೆಯ ಎದುರಿಗೆ ಕುಳಿತು —"ವಾದವೇ! ವಾದ ತಂದವರಾರು?"

"ಇವಳೇ, ನಿನ್ನ ಎದುರಿಗೆ ಕುಳಿತ ರತನಾದೇವಿ!"

"ರತನೆ, ನಿನ್ನ ವಾದವೇನು?"

"ಎಲ್ಲವನ್ನೂ ಶಾಸ್ತ್ರಿಗಳಿಗೆ ತಿಳಿಸಿರುವೆನು." ಎಂದು ರತನೆ ತಲೆಬಾಗಿಸಿ ನುಡಿದಳು.

"ಅವಳು ನಿನ್ನ ವಿವಾಹಮುಹೂರ್ತ ಕೇಳಲು ಬಂದಿರುವಳು" ನಗುತ್ತ ಶಾಸ್ತ್ರಿಗಳು ಅಂದರು.

"ತನ್ನ ವಿವಾಹಮುಹೂರ್ತವನ್ನೇ?" ನಗುತ್ತಲೆ ಕುಣಕ್ಯಾನು ಕೇಳಿದನು.

"ಅರ್ಥಾತ್ ಎರಡೂ ಒಂದೇ!"

"ಶಾಸ್ತ್ರಿಗಳೇ, ವಿನೋದವಾಡಿದರೆ ನಾನು ಹೊರಟೇ ಹೋಗುವೆನು ನೋಡಿರಿ!" ರತನೆ ನುಡಿದಳು.

"ಹೊರಡುತ್ತಿದ್ದರೆ ಈ ಕುಣಕ್ಯಾನನ್ನು ಕರೆದುಕೊಂಡೇ ಹೋದರು."

"ವಾದವೇತರದು ರತನೆ? ಸರಖೇಲರ ಮೇಲೆ ನಿನ್ನ ವಾದವೆ?" ಎಂದು ಕುಣಕ್ಯಾನು ರತನೆಯನ್ನು ಕೇಳಿದನು.

"ಅಮಾವಾಸ್ಯೆಯ ದಿನ ದಂಡಯಾತ್ರೆಗೆ ತೆರಳುವರೆ? ಪ್ರತಿಪದೆಯ ದಿವಸ ಹೊರಟರೆ ಸಾಗದೆ?" ಎಂದು ರತನೆ ಕೇಳಿದಳು.

"ಸರಖೇಲರಿಗೆ ಎಲ್ಲ ವಿಚಾರವಿದೆ, ಪ್ರತಿಪದೆಯ ದಿನ ಹೊರಟರೆ ಕೆಲಸ ಕೆಡುವ ಸಂಭವವಿರುವ ಮೂಲಕ ಅವರು ಅಮಾವಾಸ್ಯೆಯ ದಿನವೇ ಹೊರಡಬೇಕೆಂದು ಆಜ್ಞಾಪತ್ರ ಕಳುಹಿಸಿರುವರು. ಹೆಂಗಸರಿಗೆ ರಾಜಕಾರಣ ತಿಳಿಯದು. ರಾಜಕಾರಣದಲ್ಲಿ ಸ್ವಲ್ಪ ಮಾನಸಿಕತೆಯಾದರೆ ಘೋರ ಪರಿಣಾಮವುಂಟಾಗುವದು. ಧರ್ಮವಿಧಿಗಳಲ್ಲಷ್ಟೇ ಮುಹೂರ್ತದ ಮಹತ್ವವಿದೆ; ರಾಜಕಾರಣದಲ್ಲಿ ಅದಕ್ಕೆ ಎಡೆಯಿಲ್ಲ. ನಾಳೆ ನಿನ್ನ ವಿವಾಹಕ್ಕೆ ಶಾಸ್ತ್ರಿಗಳಿಂದ ಚಲೋ ಮುಹೂರ್ತ ತೆಗೆಯಿಸಿ ಕೊಡುವೆನು. ಈಗ ನೀನು ವಾದ ಮಾಡಬೇಡ; ನನ್ನ ಪ್ರವಾಸಕ್ಕೆ ಆತಂಕವೀಯಬೇಡ. ನಾನು ಶಾಸ್ತ್ರಿಗಳ ಆಶೀರ್ವಾದ ಹೊಂದಿ, ನಿನ್ನ ಅನುಮತಿಪಡೆಯಲು ಬರತಕ್ಕವನೇ ಇದ್ದೆನು. ಅನಾಯಾಸವಾಗಿ ಭೆಟ್ಟಿಯಾಯಿತು."

"ನಾಳೆಗೆ ಹೊರಡುವದೇ ನಿರ್ಧರವೆ?"

"ಹೌದು."

"ಹಾಗಾದರೆ ನ.ಕೇತನಕ ಬಂದು ತಂದೆಯವರಿಗೆ ಭೆಟ್ಟಿಯಾಗಿ ಹೋಗುವದಿಲ್ಲವೆ?"

"ಸ್ವಲ್ಪೇ ವೇಳೆಯಲ್ಲಿ ನಿರೋಪ ಮೊರೆತಿದೆ ಬರುವೆನು. ಯಾಕಂದರೆ ನಾಳೆಯ ಪ್ರಯಾಣದ ಸಿದ್ಧತೆ ಮಾಡಬೇಕಾಗಿವೆ."

"ಕುಣಕ್ಯಾ, ನಿನಗೆ ಇಂದು ಬಹಳೇ ಕೆಲಸಗಳಿರಬಹುದು. ಅದರಲ್ಲಿಯೇ ಕೆಲವು ನಿಮಿಷಗಳನ್ನು ರತನೆಯ ಮನೆಯಲ್ಲಿ ಕಳೆ. ಅಮಾವಾಸ್ಯೆಯ ದಿನ ಪ್ರಯಾಣಕ್ಕೆ ತೆರಳುವೆಯೆಂದು ಅವಳ ಮನಸ್ಸು ವ್ಯಗ್ರವಾಗಿದೆ. ಅವಳನ್ನು ಚೆನ್ನಾಗಿ ಸಂತೈಸಿ ಪ್ರಯಾಣ ಬೆಳೆಯಿಸು" ಎಂದು ಶಾಸ್ತ್ರಿಗಳು ಕುಣಕ್ಯಾನಿಗೆ ಹೇಳಿ, ರತನೆಯನ್ನು ಕುರಿತು:—"ರತನೆ, ನೀನು ಕುಣಕ್ಯಾನಿಗೆ ಸಂಭ್ರಮದಿಂದ ನಿರೋಪ ಕೊಡು. ಸ್ನೇಹಿಗಳು ಆನಂದದಿಂದ ನಿರೋಪ ... ರರ ಹುರುಪು ದ್ವಿಗುಣಿತವಾಗುವದು. ನೀವಿಬ್ಬರೂ ನಿರ್ಮಲಾಂತಃಕರಣದ ಸ್ನೇಹಿಗಳಿರುವಿರಿ. ಭಗವದಿಚ್ಛೆಯಿದ್ದರೆ ಆ ಸ್ನೇಹವು ಇದೇ ಆಯುಷ್ಯದ ತುಂಬ ಉಳಿಯುವ ಸಂದರ್ಭವೂ ಇದೆ. ಈ ಸಮಯದಲ್ಲಿ ಇನ್ನೂ ಹೆಚ್ಚು ಮಾತಾಡಿ, ಕುಣಕ್ಯಾನ ವೇಳೆಯನ್ನು ವ್ಯರ್ಥವಾಗಗೊಡಲು ಮನಸ್ಸು ಮಾಡಬೇಡ."

ಅನಂತರ ಕುಣಕ್ಯಾನು ಶಾಸ್ತ್ರಿಗಳಿಗೆ ವಂದನೆಗಳನ್ನರ್ಪಿಸಿ, ಅವರ ಆಶೀರ್ವಾದ ಹೊಂದಿ ರತನೆಯ ಮನೆಗೆ ತೆರಳಿದನು.

ಆಗ ಭಿವಾನು ಮನೆಯಲ್ಲಿರದ್ದರಿಂದ ರತನೆಗೂ ಕುಣಕ್ಯಾನಿಗೂ ಮನಬಿಚ್ಚಿ ಮಾತಾಡುವ ಅವಕಾಶ ದೊರೆಕಿತು. ರತನೆಯು ಕುಣಕ್ಯಾನನ್ನು ಮಂಚದ ಮೇಲೆ

ಕುಳ್ಳಿರಿಸಿ ತಾನೂ ಅವನ ಬಳಿಯಲ್ಲಿ ಕುಳಿತಳು. ಆಗ ಕುಣಕ್ಯಾನು—"ರತನೆ, ನೀನು ಅಮಾವಾಸ್ಯೆ, ಹುಣ್ಣಿವೆ ಮೊದಲಾದ ಮುಹೂರ್ತದ ಕಡೆಗೆ ಲಕ್ಷ್ಯಗೊಟ್ಟು ಉದ್ವಿಗ್ನತೆ ತಳೆಯಬೇಡ. ಒಂದು ಗಳಿಗೆಯೆಂದರೆ ಈಗ ಅನೊಂದು ಮಹತ್ವದ ವೇಳೆಯಿದೆ. ಇಂದು ಸಿದ್ಧತೆ ಮುಗಿಸಿ ನಾಳೆ ಪ್ರಭಾತ ಕಾಲದಲ್ಲಿ ಹೊರಟರೆ ಸರಖೇಲರ ಯೋಜನೆಯಂತೆ ವಿಜಯದುರ್ಗದಿಂದ ಹನ್ನೆರಡು ಕ್ರೋಶಗಳ ದೂರದಲ್ಲಿ ಶತ್ರುಗಳನ್ನು ತಡೆಯಬಹುದಾಗಿದೆ. ನಾನು ಶತ್ರುಗಳನ್ನು ಪರಾಭವಗೊಳಿಸಿ ಭೆಟ್ಟಿಯಾದರೆ ನಿನಗೆ ಆನಂದವಾಗುವದಿಲ್ಲವೆ? ಇಲ್ಲಿಯೇ ಅಮಾವಾಸ್ಯೆಯೆಂದು ಕುಳಿತು, ಶತ್ರುಗಳನ್ನು ಮನೆಯಲ್ಲಿ ತೆಗೆದುಕೊಂಡು ಪರಾಭವ ಹೊಂದಿದರೆ ನಿನಗೆ ದುಃಖವಾಗಲಿಕ್ಕಿಲ್ಲವೆ? ರಾಜಕಾರಣದಲ್ಲಿ ದೊಡ್ಡ ಪ್ರಮಾದವಾದರೆ ರಾಜ್ಯಕ್ಕೇ ಧಕ್ಕೆ ಹತ್ತುವದಿಲ್ಲವೆ? ನನ್ನನ್ನು ನಂಬಿದ ಸರಖೇಲರ ಕೊರಳನ್ನು ಕೊಯ್ದಂತಾಗುವದಿಲ್ಲವೆ? ವೀರನು ರಣಕ್ಕಾಗಿ ತೆರಳುವಾಗ ಇಲ್ಲದ ಭಾವಿಕತನವನ್ನು ಮನಸ್ಸಿನಲ್ಲಿ ತಾರನು. ಒಮ್ಮೆ ಫಿರಂಗಿಗಳಿಗೆ ಗಂಟು ಬಿದ್ದು, ಚೆನ್ನಾಗಿ ಕ್ಷೈತ್ರೀಕರಿಸಿ, ಇನ್ನೊಮ್ಮೆ ಅವರು ಸರಖೇಲರ ಸಮೀಪಕ್ಕೆ ಬಾರದಂತೆ ಮಾಡಬೇಕಾಗಿದೆ."

"ಕುಣಕೇಶ್ವರಾ, ನೀನು ವೀರ ಪುರುಷನು, ನಾನು ಹೆಣ್ಣು ಮಗಳು. ಅಮಾವಾಸ್ಯೆಯು ಇಂದೇಕೆ ಲಕ್ಷ್ಯದಲ್ಲಿ ಬಂತೋ ಏನೋ! ನಿನ್ನ ವಿಷಯವಾಗಿ ನನ್ನಲ್ಲಿದ್ದ ಪ್ರೇಮವು ಇಷ್ಟು ಮಾತಾಡಗೊಡದೆ ಇರಲಿಲ್ಲ. ಭಾವಿಕಳಾದ ನನಗೆ ಕುಮುಹೂರ್ತವೆಂದರೆ ಭಯವುಂಟಾಗುವದು" ಎಂದು ರತನೆ ನುಡಿದು, ಕುಣಕ್ಯಾನ ಹೆಗಲ ಮೇಲೆ ತನ್ನ ಮುಖವನ್ನಿರಿಸಿದಳು, ಕಣ್ಣುಗಳಿಂದ ಅಶ್ರುಗಳು ಹರಿಯತೊಡಗಿದವು.

ಕುಣಕ್ಯಾನು ರತನೆಯ ಕಣ್ಣೀರೊರೆಸಿ ಎರಡೂ ಕಪೋಲಗಳನ್ನು ಹಿಡಿದು:—"ರತನೆ, ಈ ವೇಳೆಯಲ್ಲಿ ನಾನು ನಿನ್ನ ಕಣ್ಣೀರು ಕಾಣಬೇಕೇ? ನೀನು ಒಳ್ಳೆಯ ಹುರುಪಿನಿಂದ ನಿರೋಪ ಕೊಟ್ಟರೆ ನನಗೆ ಉತ್ಸಾಹವುಂಟಾಗುವದು. ನಿನ್ನ ನಗೆಮೊಗವನ್ನು ನೋಡಿದರೆ ನಾನು ಸಂಭ್ರಮಗೊಳ್ಳುವೆನು. ನಿನ್ನ ನಗೆಮೊಗವು ನನ್ನ ವೀರಶ್ರೀಯನ್ನು ಹೆಚ್ಚುಗೊಳಿಸುವದು. ರತನೆ, ಒಮ್ಮೆ ನಗು, ಸ್ವಲ್ಪೇ ನಗು, ತುಟಿಯಲ್ಲೇ ನಗು."

ರತನೆ ನಸುನಕ್ಕಳು. ಅವಳು ಕುಣಕ್ಯಾನ ಕೊರಳಿಗೆ ತನ್ನ ಬಾಹುಗಳಿಂದ ಆಲಿಂಗಿಸಿ ಮಮತೆಯಿಂದ:—"ಕುಣಕ್ಯಾ, ನಾನು ನಿನಗೆ ಸ್ನೇಹದಿಂದ 'ಕುಣಕ್ಯಾ' ಅನ್ನುತ್ತಿದ್ದೆನು. ಮುಂದಿನ ಕಾಲದಲ್ಲಿ ಹಾಗೆಯೆ ಎಲ್ಲಿ ರೂಢಿಬಿದ್ದು ಮುಂದಿ ನಗುವಂತಾಗುವದೋ ಎಂದು ಬೆದರುತ್ತೇನೆ, ಕುಣಕೇಶ್ವರಾ, ಸರ ತಾಂಡೇಲ ಕುಣಕೇಶ್ವರಾ, ಮನೋಹರ ಕುಣಕೇಶ್ವರಾ, ನೀನು ವೀರಶ್ರೀ ವೈಭವದಿಂದ ದಂಡ

ಯಾತ್ರೆಗೆ ಹೊರಡುವಾಗ ನಾನು ಕ್ಲೇಶಗೊಳ್ಳುವೆನೆ? ನೀನು ಗೆಲುವಿನ ನಿಶಾನಿಯನ್ನು ಹಿಡಿದುಕೊಂಡು ಬಾ. ಶತ್ರುಗಳ ಪಾರುಪತ್ಯ ಮಾಡಿದ ಜಯದ ಬಾಹುಗಳಿಂದ ನನ್ನನ್ನು ಆಲಿಂಗಿಸಿದರೆ, ನಿನಗೂ ನನಗೂ ಎಷ್ಟು ಸಂಭ್ರಮವಾಗುವದು ನೋಡು! ನೀನು ವಿಜಯ ಸಂಪಾದನೆ ಮಾಡಿಕೊಂಡು ಬಂದ ಕೂಡಲೆ ನನ್ನ ನಿನ್ನ ಸ್ನೇಹ ಸಂಬಂಧವು ಆಯುಷ್ಯದ ತುಂಬ ದೃಢವಾಗುವದಿದೆ ಈ ಬಗ್ಗೆ ನನ್ನ ತಂದೆಯೂ ಶಾಸ್ತ್ರಿಗಳೂ ಮಾತನಾಡಿದ್ದಾರೆ. ನೀನು ವಿಜಯಯಾತ್ರೆಗೆ ಹೊರಡುವಾಗ ಇದೊಂದು ಸಂತೋಷದ ಸುದ್ದಿಯನ್ನು ನಾನು ನಿನಗೆ ಹೇಳದಿರೆನು. ನಾಚದೆ ಹೇಳಿದೆನೆಂದು ನಿಂದೆಯಾಡಬೇಡ. ನಿನ್ನೆದುರಿಗೆ ಅದನ್ನೇಕೆ ಬಚ್ಚಿಡಬೇಕು?"

ಕುಣಕ್ಯಾನು ಪ್ರೇಯಸಿಯನ್ನು ಗಟ್ಟಿಯಾಗಿ ಆಲಿಂಗಿಸಿ:—"ನಮ್ಮ ಸ್ನೇಹವು ಪ್ರಣಯದಲ್ಲಿ ರೂಪಾಂತರ ಹೊಂದಿದಂತಾಗಿದೆ. ದೈವಘಟನೆ! ಇರಲಿ. ಈಗ ಹೆಚ್ಚು ಮಾತಾಡಲು ಅವಕಾಶವಿಲ್ಲ. ವಿಜಯಯಾತ್ರೆ ಮುಗಿಸಿಕೊಂಡು ಬಂದ ಮೇಲೆ ಒಂದ ಬೆಳದಿಂಗಳ ರಾತ್ರಿಯಲ್ಲಿ ನಾವಿಬ್ಬರೇ ಅಂದಿನಂತೆ ನನ್ನ 'ಶಂಕರ' ನೌಕೆಯಲ್ಲಿ ಕುಳಿತು ಜಲವಿಹಾರ ಮಾಡೋಣ, ಹಾಗು ಅಂದು ಮನಬಿಚ್ಚಿ ಎಲ್ಲವನ್ನೂ ಮಾತಾಡೋಣ. ನನಗೆ ಹೊರಡಲು ನಗೆಮೊಗದಿಂದ ನಿರೋಪ ಕೊಡು."

ರತನೆಯು ಕುಣಕ್ಯಾನ ಪಾದಗಳಿಗೆ ಹಣೆಹಚ್ಚಿ ನಮಿಸಿ:—"ನಿನಗೆ ಜಯವಾಗಲಿ!" ಎಂದು ನಗುತ್ತ ನುಡಿದಳು. ಕುಣಕ್ಯಾನು ತನ್ನ ಪ್ರಣಯಿನಿಯನ್ನು ಒಮ್ಮೆ ಮೆಲ್ಲನೆ ಚುಂಬಿಸಿದನು. ಸ್ವಲ್ಪ ವೇಳೆ ಆ ಪ್ರಣಯಿನಿಗಳು ದೇಹಭಾನ ಮರೆತಿದ್ದರು. ಆಗ ಕರ್ತವ್ಯವು ಕುಣಕ್ಯಾನನ್ನು ಜಾಗ್ರತೆಗೊಳಿಸಿತು. ಅಷ್ಟರಲ್ಲಿ ಅಲ್ಲಿಗೆ ಭಿವಾ ಬಾಂಧಾರನೂ ಬಂದನು. ಕುಣಕ್ಯಾನು ಅವನಿಗೆ ನಮಸ್ಕಾರ ಮಾಡಿದನು ಅನಂತರ ಆ ಇಬ್ಬರ ಪ್ರೇಮಳ ನಿರೋಪ ಹೊಂದಿ ಬಂದರದ ಕಡೆಗೆ ಸಾಗಿದನು. ರತನೆಯು ಕಣ್ಮರೆಯಾಗುವವರೆಗೂ ಕುಣಕ್ಯಾನನ್ನು ನೋಡುತ್ತ ನಿಂತಳು.

೪

ಕುಣಕೇಶ್ವರ ದೇವಸ್ಥಾನದ ಭವ್ಯ ಪಟಾಂಗಣದಲ್ಲಿ ಒಬ್ಬ ಗೋಸಾವಿಯು ಕುಳಿತಿದ್ದನು. ಅವನ ಎದುರಿನಲ್ಲಿ ಮತ್ತೊಬ್ಬ ಗೃಹಸ್ಥನಿದ್ದನು. ಗೋಸಾವಿಯು ಆ ಗೃಹಸ್ಥನನ್ನು ಪೂರಾ ಗುರತಿಸಿದ್ದನು. ಎಂದೂ ನೋಡದೆ ಇದ್ದಂತಹ ಗೋಸಾವಿಯು ತನ್ನ ಪರಿಚಯ ಹೇಳುವದನ್ನು ಕೇಳಿ ಅವನಿಗೆ ಆಶ್ಚರ್ಯವಾಯಿತು. ಆಗ ಅವನು:—"ಗೋಸಾವಿಗಳೇ, ನೀವು ನನ್ನನ್ನು ಎಂದು ನೋಡಿದ್ದಿರಿ? ನಾನು ಇಲ್ಲಿಗೆ ಇದೇ ಮೂರನೆಯ ಸಾರೆ ಬಂದಿರುವೆನು."

“ನಾನಾದರೂ ಈಗ ಇಲ್ಲಿಗೆ ಬಂದದ್ದು ಮೂರನೆಯ ಬಾರಿಯೇ.”

“ಮೊದಲನೆಯ ಬಾರಿ ನಾನು, ನನ್ನ ತಂಗಿ, ತಂಗಿಯ ಮಗ ಹೀಗೆ ಮೂರು ಜನರು ಬಂದಿದ್ದೆವು. ಆ ಮಾತಿಗೆ ಎರಡು ತಪಗಳಾದವು. ಆಗ ನನ್ನ ತಂಗಿಯೂ ತಂಗಿಯ ಮಗನೂ ಸಮುದ್ರ ಪಾಲಾದರು. ಮುಂದೆ ಹನ್ನೆರಡು ವರ್ಷಗಳ ಮೇಲೆ ಬಂದಾಗ ಇಲ್ಲಿ ಒಬ್ಬ ಗೋಸಾವಿಯೂ ಮತ್ತೊಬ್ಬ ಹುಡುಗನೂ ಬಂದಿದ್ದರು. ನನ್ನ ಆಪ್ತನಾದ ಪಂಡಿತರಾಯನು ಗೋಸಾವಿಯ ಬಳಿಯಲ್ಲಿದ್ದ ಹುಡುಗನನ್ನು ಸರಖೇಲರ ಬಳಿಯಲ್ಲಿರಿಸುವದಕ್ಕಾಗಿ ವಿಜಯದುರ್ಗದ ಹರಿಶಾಸ್ತ್ರಿಗಳ ಕಡೆಗೆ ಕರೆದೊಯ್ದನು. ಆ ಮಾತಿ ಇಂದಿಗೆಗೂ ಮತ್ತೆ ಹನ್ನೆರಡು ವರ್ಷಗಳಾದವು.”

“ಶಾಮರಾಯರೇ, ಆ ಗೋಸಾವಿಯೇ ನಾನು! ಆ ಹುಡುಗನೇ ನನ್ನ ಶಿಷ್ಯನು. ನಿಮ್ಮ ತಂಗಿಯ ಮಗನು. ಇಪ್ಪತ್ನಾಲ್ಕು ವರ್ಷಗಳ ಹಿಂದೆ ಅರ್ಧೋದಯ ಪರ್ವದಲ್ಲಿ ನಿಮ್ಮ ಅಳಿಯನು ಸಮುದ್ರದ ಪಾಲಾಗಲಿಲ್ಲ. ನಿಮ್ಮ ತಂಗಿಯು ಮಗನನ್ನು ಉಸುಕಿನಲ್ಲಿ ಮಲಗಿಸಿ, ತಾನೊಬ್ಬಳೇ ಸಮುದ್ರದ ಪಾಲಾಗಿರುವಳು. ಉಸುಕಿನಲ್ಲಿದ್ದ ಹುಡುಗನನ್ನು ನಾನು ತೆಗೆದುಕೊಂಡು ಹೋಗಿ ರಕ್ಷಿಸಿದೆನು. ಅವನನ್ನು ಗೋಸಾವಿಯನ್ನಾಗಿ ಮಾಡದೆ, ಸಂಸಾರಿಕನನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಇಲ್ಲಿಗೆ ಕರೆತಂದಿದ್ದೆನು. ಹಾಗು ಪಂಡಿತರಾಯನ ನೌಕರಿಯಲ್ಲಿ ಕಳುಹಿಸಿದ್ದೆನು. ಅವನಿಗೆ ನಾನು ಕುಣಕ್ಯಾ ಎಂದು ಹೆಸರಿಡಲಿಕ್ಕೆ ಅವನು ಈ ಕುಣಕೇಶ್ವರ ಕ್ಷೇತ್ರದಲ್ಲಿ ದೊರೆತದ್ದೇ ಕಾರಣವಾಗಿದೆ. ಬಹಳ ಮಾಡಿ ಈ ಹೊತ್ತಿಗೆ ನಮ್ಮ ಕುಣಕ್ಯಾ ಹೆಸರುವಾಸಿಯಾಗಿರಬಹುದು.”

ಪ್ರತಿ ಹನ್ನೆರಡು ವರ್ಷದ ಘಟನೆಯಿಂದ ಗೋಸಾವಿಗೂ ಶಾಮರಾಯನಿಗೂ ಆಶ್ಚರ್ಯವಾಯಿತು. ಇದು ಮೂರನೆಯ ಯಾತ್ರೆಯಿದ್ದುದರಿಂದ ಈ ಸಾರೆಯಾದರೂ ಯಾವದೊಂದು ಮಹತ್ವದ ಘಟನೆಯೊದಗುವದೋ ಏನೋ ಎಂದು ತುಡಿಯುವಷ್ಟರಲ್ಲಿ ಸಮುದ್ರ ತೀರದಲ್ಲಿ ತುಬಾಕಿ-ತೋಫುಗಳ ಗರ್ಜನೆ ಕೇಳತೊಡಗಿತು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಆ ದೇವಾಲಯಕ್ಕೆ ಕೆಲವು ಜನರು ಬಂದರು. ಆಗ ಗೋಸಾವಿಯು ಅವರಲ್ಲಿಯ ಒಬ್ಬನನ್ನು ಕುರಿತು:—“ಸಮುದ್ರದಲ್ಲಿ ಯಾರು ಯಾರಲ್ಲಿ ಸಂಗ್ರಾಮ ನಡೆದಿದೆ?” ಎಂದು ಕೇಳಿದನು.

“ಸಮುದ್ರದಲ್ಲಿ ದೊಡ್ಡ ದೊಡ್ಡ ಕಾಳಗಗಳಾದವು. ದರ್ಯಾಸಾರಂಗ ಸರಖೇಲ ಕಾನ್ಹೋಜಿ ಆಂಗ್ರೆಯವರು ಉತ್ತರದಲ್ಲಿ ಮಾಜಗಾಂವ ಬಂದರದ ಬಳಿಯಲ್ಲಿ ಮುಂಬಯಿಯ ಪಿರಂಗಿಗಳಿಗೆ ಗಂಟು ಬಿದ್ದು ಅವರ ನೌಕೆಗಳನ್ನು ನಾಶ ಮಾಡಿ

ದೇವತಾ ಸಮಾರಾಧನೆ ಮಾಡಿಸತಕ್ಕವರಿದ್ದಾರೆ. ದಕ್ಷಿಣದಲ್ಲಿ ಗೋವೆಯ ಫಿರಂಗಿಗಳಿಗೂ ಕುಣಕೇಶ್ವರ ಸರ ತಾಂಡೇಲರಿಗೂ ದೊಡ್ಡ ಕಾಳಗ ನಡೆಯಿತು. ಕುಣಕೇಶ್ವರರು ನಾಮಾಂಕಿತ ವೀರರು. ಅವರು ಫಿರಂಗಿಗಳನ್ನೂ ಅವರ ನೌಕೆಗಳನ್ನೂ ಉಧ್ವಸ್ತಗೊಳಿಸಿದರು. ದ್ವಂದ್ವದಲ್ಲಿ ಅವರಿಗೆ ಸ್ವಲ್ಪ ಗಾಯವಾದಂತೆ ತೋರುವದು. ನಾವಿಕರು ಅವರನ್ನು ದೇವಸ್ಥಾನದ ಕಡೆಗೆ ತರುವರೆಂಬ ಸುದ್ದಿಯಿದೆ."

ಈ ಸುದ್ದಿಯು ಗೋಸಾವಿಗೆ ತಿಳಿದ ಸ್ವಲ್ಪ ವೇಳೆಯಲ್ಲೇ ನಾವಿಕರು ಕುಣಕ್ಯಾನನ್ನು ಡೋಲಿಯಲ್ಲಿ ತಂದು ದೇವಸ್ಥಾನದೊಳಗೆ ಮಲಗಿಸಿದರು. ಕುಣಕ್ಯಾನು ಕುಣಕೇಶ್ವರನನ್ನೊಮ್ಮೆ ನಿರೀಕ್ಷಿಸಿ ಮಲಗಿದಲ್ಲಿಯೇ ನಮಸ್ಕಾರ ಮಾಡಿದನು. ಗೋಸಾವಿಯೂ ಶಾಮರಾಯನೂ ಕುಣಕ್ಯಾನು ಮಲಗಿದ ಸ್ಥಳಕ್ಕೆ ಬಂದು ಅವನನ್ನು ನಿರೀಕ್ಷಿಸಿದರು. ಕುಣಕ್ಯಾನಿಗೆ ಸಂಗ್ರಾಮದಲ್ಲಿ ದೊಡ್ಡ ಗಾಯಗಳಾಗಿದ್ದು, ಅವನು ತೀರ ಮೃತ್ಯುಮುಖದಲ್ಲಿದ್ದಂತೆ ಭಾಸವಾಯಿತು. ಆಗ ಗೋಸಾವಿಯು ಅವನ ಬಾಯಿಯಲ್ಲಿ ಒಂದು ಗುಳಿಗೆ ಹಾಕಿದನು ಮುಂದೆ ನಾಲ್ಕೈದು ನಿಮಿಷಗಳಲ್ಲಿ ಕುಣಕ್ಯಾನು ಕಣ್ಣುತೆರೆದನು. ಆಗ ಗೋಸಾವಿಯು:—"ಕುಣಕ್ಯಾ" ಎಂದು ಕೂಗಿದನು.

"ಯಾರು? ಗುರುಮಹಾರಾಜರೇನು?" ಕುಣಕ್ಯಾ ಮಲಗಿದಲ್ಲೇ ನಮಸ್ಕರಿಸಿ: "ಹನ್ನೆರಡು ವರ್ಷಗಳ ನಂತರ ಇದೇ ದೇವಸ್ಥಾನದಲ್ಲಿ ನಿಮ್ಮ ಭೆಟ್ಟಿಯಾದದ್ದು ಇದು ಎರಡನೇ ಬಾರಿ!"

"ಕುಣಕ್ಯಾ, ಮೂರನೇ ಬಾರಿ ನಾನೂ ನೀನೂ ಇಲ್ಲಿ ಕೂಡಿದ್ದು" ಎಂದಂದು, ಅವನ ಪೂರ್ವೇತಿಹಾಸವನ್ನು ಅವನಿಗೆ ತಿಳಿಸಿ, "ಇವರು ನಿನ್ನ ಸೋದರಮಾವಂದಿರಾದ ಶಾಮರಾಯರು. ನೀನು ನಿನ್ನ ಪರಾಕ್ರಮದಿಂದ ಪ್ರಖ್ಯಾತಹೊಂದಿದೆ. ಜನ್ಮಭೂಮಿಯ ಸೇವೆ ಮಾಡಿದೆ. ಪರಕೀಯರ ರಾಜಕಾರಣದಲ್ಲಿ ಅವರಿಗೆ ನೆರವಾಗಿ ಪುಣ್ಯಶ್ಲೋಕ ಛತ್ರಪತಿ ಶಿವಾಜಿ ಮಹಾರಾಜರಿಂದ ಸ್ಥಾಪಿಸಲ್ಪಟ್ಟ ಸ್ವರಾಜ್ಯದ ಏಳ್ಗೆಗಾಗಿ ಸಾಹಸ ಮಾಡಿದೆ. ಸ್ವರಾಜ್ಯದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಆತ್ಮಯಜ್ಞ ಮಾಡಿದ ನಿನ್ನಂತಹ ವಿಜಯೀ ವೀರನ ಹೆಸರು ಇತಿಹಾಸದಲ್ಲಿ ಅಜರಾಮರವಾಗಿ ಉಳಿಯುವದು."

"ಇವರು ನನ್ನ ಸೋದರ ಮಾವಂದಿರೇನು?" ಎಂದು ಕುಣಕ್ಯಾನು ನುಡಿದು, ಮಾವನಿಗೆ ನಮಸ್ಕರಿಸಿ, ನಂತರ:—"ಗುರುಗಳೇ, ನಾನು ಬಹಳ ಮಾಡಿ ಬದುಕುವದಿಲ್ಲೆಂದು ತೋರುವದು ನಿಮ್ಮ ಔಷಧಿಯ ಪ್ರಭಾವದಿಂದ ಮಾತಾಡಲು ಸ್ವಲ್ಪ ಶಕ್ತಿಯುಂಟಾಗಿದೆ ಒಂದು ವೇಳೆ ಬದುಕುಳಿದರೆ ಸ್ವರಾಜ್ಯಸೇವೆಯಲ್ಲೇ ಶೇಷಾಯುಷ್ಯ ಕಳೆಯುವೆನು.

ಹೀಗೆ ಕುಣಕ್ಯಾನು ಹೇಳುತ್ತಿರಲು ಸರಖೇಲ ಕಾನ್ಹೋಜಿರಾವ ಆಂಗ್ರೆಯು ಅಲ್ಲಿಗೆ ಬಂದನು. ಅವನ ಜೊತೆಯಲ್ಲಿ ಕುಣಕ್ಯಾನ ಪ್ರಣಯಿನಿ ರತನೆಯೂ ಇದ್ದಳು. ಮುಂಬಯಿಯ ಫಿರಂಗಿಗಳನ್ನು ಪರಾಭೂತಗೊಳಿಸಿದ ಮೇಲೆ ಸರಖೇಲನು ವಿಜಯದುರ್ಗಕ್ಕೆ ಬಂದನು. ಗೋವೆಯ ಫಿರಂಗಿಗಳಿಗೂ ಕುಣಕ್ಯಾನಿಗೂ ಅಘೋರ ಯುದ್ಧ ನಡೆದಿರುವದೆಂಬುದು ಅವನಿಗೆ ಅಲ್ಲಿಯೇ ತಿಳಿಯಿತು. ಕೂಡಲೆ ಅವನು ತನ್ನ ನೌಕಾದಳವನ್ನು ತೆಗೆದುಕೊಂಡು ಕುಣಕ್ಯಾನ ನೆರವಿಗೆ ಹೊರಟನು. ರತನೆಯು ಅತ್ಯಂತ ಆಗ್ರಹಪಟ್ಟು ಆಂಗ್ರೆಯ ನೌಕೆಯಲ್ಲಿ ಬಂದಿದ್ದಳು. ಕುಣಕೇಶ್ವರ ಕ್ಷೇತ್ರದ ಸಮೀಪಕ್ಕೆ ಬಂದೊಡನೆ ಅಲ್ಲಿ ಎಷ್ಟೋ ನೌಕೆಗಳೂ ಜನರೂ ಇರುವದು ಅವರ ಕಣ್ಣಿಗೆ ಬಿತ್ತು. ಕುಣಕ್ಯಾನು ವಿಜಯಿಯಾಗಿಯೇ ದೇವರ ದರ್ಶನಕ್ಕೆ ಬಂದಿರುವನೆಂಬುದು ಕಾನ್ಹೋಜಿಗೆ ತಿಳಿಯಿತು. ದಂಡೆಗೆ ಬಂದ ಕೂಡಲೆ ಕಾನ್ಹೋಜಿಯ ಜನರು ಎಲ್ಲ ಸಂಗತಿ ಅವನಿಗೆ ತಿಳಿಸಿದರು. ಕುಣಕ್ಯಾನಿಗೆ ದೊಡ್ಡ ಗಾಯಗಳಾದದ್ದು ಕೇಳಿ, ಕಾನ್ಹೋಜಿಯೂ ರತನೆಯೂ ದುಃಖಿತರಾದರು. ಅವರು ಕ್ಲೇಶಮನಸ್ಕರಾಗಿ ದೇವಸ್ಥಾನವನ್ನು ಪ್ರವೇಶಿಸಿದರು. ಆಗ ಕುಣಕ್ಯಾ ಮರಣೋನ್ಮುಖನಾಗಿ ಬಿದ್ದಿದ್ದನು. ಅವನು ಸರಖೇಲನಿಗೆ ನಮಸ್ಕರಿಸಿ, ರತನೆಯನ್ನೊಮ್ಮೆ ಕಣ್ತುಂಬ ನೋಡಿ - ಸರಖೇಲರೇ, ನಿಮ್ಮ ಭೆಟ್ಟಿಯಾಯಿತು. ಮನಸ್ಸಿಗೆ ಸಂತೋಷವಾಯಿತು. ರತನೆ, ನಿನ್ನ ಇಚ್ಛೆ ಪೂರ್ತಿಯಾಗುವ ಯೋಗವಿಲ್ಲ. ಈಶಸಂಕೇತಕ್ಕೆ ಉಪಾಯವಿಲ್ಲ! ಗುರುಮಹಾರಾಜರೇ, ಬರುತ್ತೇನೆ. ನಿಮಗೆ ಕೊನೆಯ ಪ್ರಣಾಮಗಳು! ಜಯ ಕುಣಕೇಶ್ವರ!"

ಕುಣಕ್ಯಾನ ಆತ್ಮವು ಅವನ ಜಡದೇಹವನ್ನು ತೊಲಗಿ ಕುಣಕೇಶ್ವರನ ಲೀನವಾಯಿತು. ಸರಖೇಲನೂ, ರತನೆ ಶಾಮರಾಯ ಗೋಸಾವಿ ಮೊದಲಾದವರ ಕುಣಕ್ಯಾನ ಯೋಗ್ಯತೆ ನೆನೆನೆನೆದು ಬಹಳವಾಗಿ ದುಃಖಿಸಿದರು.

ಕುಣಕ್ಯಾನ ಶವಕ್ಕೆ ಅಂತ್ಯಸಂಸ್ಕಾರ ಮಾಡಲ್ಪಟ್ಟಿತು. ಸರಖೇಲನೂ ರತನೆಯೂ ದುಃಖಿ-ಕಷ್ಟಿಗಳಾಗಿ ವಿಜಯದುರ್ಗಕ್ಕೆ ಬಂದರು. ಶಾಮರಾಯನಿಗೆ ಇಹಲೋಕದ ಆಶೆಯೇನೂ ಇರದ್ದರಿಂದ ಗೋಸಾವಿಯೊಡನೆ ಉತ್ತರ ಭಾರತದ ತೀರ್ಥಯಾತ್ರೆಗಾಗಿ ಪಯಣ ಮಾಡಿದನು. ಕುಣಕ್ಯಾನ ಮೇಲಿನ ಪ್ರೇಮದ ಮೂಲಕ ಅವರಿಬ್ಬರೂ ಬಂಧುಗಳಾಗಿ ಭಾವಿಸಿ ಜೊತೆಯಲ್ಲಿಯೇ ಕ್ಷೇತ್ರ-ತೀರ್ಥಾಟನೆ ಮಾಡುತ್ತ ಶೇಷಾಯುಷ್ಯವನ್ನು ಕಳೆದರು.

ರತನೆಯು ಕುಣಕ್ಯಾನ ಮೇಲಿನ ಪ್ರೇಮವಿಶೇಷದಿಂದ ಶೇಷಾಯುಷ್ಯವನ್ನು ಕೌಮಾರ್ಯದಲ್ಲೇ ಕಳೆದಳು.

— ಸಂಪೂರ್ಣ —